# ಪುರಂದರ ದಾಸರ ಪದಗಳು

ಸಂಗ್ರಾಹಕರು :
ಎಸ್. ಎಸ್. ಕಾರಂತ

ಸಿಟಿ ಬುಕ್ ಸ್ಟಾಲ್, ಹುಬ್ಬಳ್ಳಿ.

# — ನಿವೇದನೆ —

ನಾಗಾಲೋಟದಿಂದ ಬಿಸಿಲ್ಗುದುರೆಯ ಬೆನ್ನು ಹತ್ತಿ ಸಾಗಿರುವ ಇಂದಿನ ಲೌಕಿಕ ಜಗತ್ತಿನಲ್ಲಿ "ದೇವರು, ಗುರುಗಳು, ಹಿರಿಯರು" ಎಂಬ ಭಾವನೆಯೂ ಅವರ ಬಗೆಗೆ ಇರಬೇಕಾದ ಪೂಜ್ಯ ಬುದ್ಧಿಯೂ ನಶಿಸತೊಡಗಿರುವುದು. ವೈಜ್ಞಾನಿಕ ಸಾಧನೆಗಳಿಂದ ನಾವು ಅಭೇದ್ಯವನ್ನು ಭೇದಿಸಿ ಕೃತಕೃತ್ಯರಾಗಬಹುದೆಂದು ಕಲ್ಪಿಸಲು ನಾಗರಿಕ ಜಗತ್ತಿನಲ್ಲಿ ಅವಕಾಶವಿರುವುದಾದರೂ ಕೊನೆಯ ಗುರಿ- ಸಾಧನೆ- ಸಿದ್ಧಿಯಾದ ಆತ್ಮ ಶಾಂತಿಯನ್ನು ಹೊಂದಲು ಈ ವೈಜ್ಞಾನಿಕ ಸಾಧನೆಗಳು ಕಿಂಚಿತ್ತಾದರೂ ಸಹಕಾರಿಯಾಗಲಾರವು. ಲೌಕಿಕವೇ ಜೀವನದ ಅಂತಿಮ ಗುರಿಯೆಂದು ಸಾಗಿರುವ ಈ ಯುಗದಲ್ಲಿ ವೈದಿಕವು ಹಿಂದುಳಿದಂತೆ ಮೇಲಿಂದ ಮೇಲೆ ತೋರಿ ಬರುವುದಾದರೂ "ಆಮೆಯೂ ಮೊಲವೂ" ಎಂಬ ಕಥೆಯೋಪಾದಿಯಲ್ಲಿ ವೈದಿಕಕ್ಕೆ ಜಯವು ಕಟ್ಟಿಟ್ಟದ್ದು. ದಿಗಂತದವರೆಗೆ ಶೋಧವು ನಡೆದರೂ "ದಿಗಂತದಿಂದಾಚೆ ಏನು" ಎಂಬುದಕ್ಕೆ ಉತ್ತರ ಕೊಡುವುದಕ್ಕೆ ಲೌಕಿಕಕ್ಕೆ ಸುತರಾಂ ಸಾಧ್ಯವಿಲ್ಲ. ಇದು ಕೇವಲ ವೈದಿಕಕ್ಕೆ, ಅರ್ಥಾತ್ ದೈವಿಕಕ್ಕೆ ಮಾತ್ರ ಸಾಧ್ಯ ಈ ಇಪ್ಪತ್ತನೆಯ ಶತಮಾನದಲ್ಲಿ ವಿಜ್ಞಾನವು ಬಹಳಷ್ಟು ಮುಂದ

"ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ" ಎಂಬಂತೆ ಪ್ರತಿಯೊಂದು ಜೀವಿಯೂ ತನ್ನ ಜೀವಿತದ ಒಂದಲ್ಲದಿದ್ದರೊಂದು ಸಂದರ್ಭದಲ್ಲಿ ತನ್ನ ಅಂತರಾತ್ಮನ ಕಡೆಗೆ ಹೊರಳದಿಲ್ಲ ಕೆಲವರು ಬಹಳಷ್ಟು ವೇಳೆ ಈ ಅಂತರಾತ್ಮನೊಂದಿಗೆ ತನ್ಮಯರಾಗುವರಾದರೆ- ಇವರೇ ನಿಜವಾದ ಜ್ಞಾನಿಗಳು, ಯೋಗಿಗಳು- ಉಳಿದವರು ಕ್ಷಣ ಮಾತ್ರವಾದರೂ ಅಂತರಾತ್ಮನ ವಾಣಿಯನ್ನು ಆಲಿಸುವರು. ಹಾಗಾದರೆ ಈ ಅಂತರಾತ್ಮನಾರು ? ವೈಜ್ಞಾನಿಕರು ಇದರ ಶೋಧ ಮಾಡಿರುವರೇ ? ಈ ಪ್ರಶ್ನೆಗಳಿಗೆ ಆ ಚಂದ್ರಾರ್ಕ 'ನೇತಿ' ಎಂಬ ಉತ್ತರವೇ ದೊರೆಯುವುದು ಇದೇ ದೇವರು. ಇದನ್ನೇ "ತನ್ನ ತಾನರಿಯದಾ ಜ್ಞಾನವೇನೋ" ಎಂದು ಮರ್ಮಕ್ಕೆ ನಾಟುವಂತೆ ದಾಸರು ಹೇಳಿರುವರು.

ದೇವರು ಜಗತ್ತಿನ ಸೃಷ್ಟಿಯನ್ನು ಮಾಡಿ ತನ್ನ ಅಂಶವನ್ನು ಮನುಷ್ಯನಲ್ಲಿ ಇರಿಸಿದನು. ಆದರೆ ಅವನಿಗೆ ತನ್ನ ಶಕ್ತಿ ಸಾಮರ್ಥ್ಯವನ್ನು ಈ ಮಾನವರಿಂದ ಗೌಪ್ಯವಾಗಿರಿಸುವ ಪ್ರಸಂಗವು ತಲೆಎತ್ತಿತು. ಆಗ ಆತನು ಜಗತ್ತಿನ ತುಂಬ ಒಂದು ಗುಪ್ತವಾದ ಸ್ಥಳಕ್ಕಾಗಿ- ಮಾನವನಿಂದ ಎಂದೆಂದಿಗೂ ಶೋಧಿಸಲಶಕ್ಯವಾದ- ಶೋಧನೆ ನಡೆಸಿ ವಿಫಲನಾಗಿ ಕೊನೆಗೆ ತನ್ನ ಸೃಷ್ಟಿಯಾದ ಮಾನವನಲ್ಲಿಯೇ ಹುದುಗಿಸಿದನು ಎಂಬ ಒಂದು ಕಥೆಯಿದೆ. ಇದನ್ನು ಕೇವಲ ಕಥೆಯೆಂಬ ದೃಷ್ಟಿಯಿಂದ ನೋಡದೆ ಪಾರಮಾರ್ಥಿಕ ದೃಷ್ಟಿಯಿಂದ ನೋಡಿದರೆ "ಅಂತರಂಗದಲಿ ಹರಿಯ ಕಾಣದವ ಹುಟ್ಟು ಕುರುಡನು" ಎಂಬ ದಾಸರ ಪದದ ಮಹತ್ವವು ಹೊಳೆಯದಿರದು.

ಲೌಕಿಕ ವೃತ್ತಿಯಲ್ಲಿ ಬಿದ್ದು ಜಡವನ್ನೇ ನಂಬಿ ಪಾರಮಾರ್ಥವನ್ನು ಮರೆತು ಗತಿಶೂನ್ಯರಾಗ ತೊಡಗಿದ ಜನತೆಯನ್ನು ಸರಿದಾರಿಗೆ ಹಚ್ಚಲು ಕಾಲಕಾಲಕ್ಕೆ ಅಲ್ಲಲ್ಲಿ ಅನೇಕ ಸಾಧುಸಂತರು ಆಗಿಹೋದರು. ಈ ಜ್ಞಾನಿಗಳು ವೇದ, ಉಪನಿಷತ್ತು, ಪುರಾಣಗಳ ಸರ್ವ ಸಾರವನ್ನು ತಮ್ಮ ಹಾಡುಗಳಿಂದ ಹಾಗು ಅಭಂಗವೇ ಮೊದಲಾದ ಸುಲಭ ಸಾಧನಗಳಿಂದ ಜನತೆಯು ತಿಳಿಯುವಂತೆ ಮಾಡಿದರು. ಕರ್ನಾಟಕದಲ್ಲೂ ಅನೇಕ ದಾಸವರ್ಯರು ಜನ್ಮವೆತ್ತಿ ನಾಸ್ತಿಕತೆಯ ಹಾದಿ ತುಳಿಯುತೊಡಗಿದ್ದ ಜನತೆಯನ್ನು ದೇವನತ್ತ ಹೊರಳಿಸಿದರು. ಇವರಲ್ಲಿ ಪುರಂದರ ದಾಸರು "ದಾಸಶ್ರೇಷ್ಠ" ರೆಂದುಹೆಸರಾದರು. ಇವರು ನಮ್ಮನ್ನಗಲಿ ಸುಮಾರು ೩೭೫ವರ್ಷಗಳು ಗತಿಸಿದರೂ ತಮ್ಮ ಕೃತಿಗಳ ಮೂಲಕ ಪ್ರತಿಯೊಬ್ಬ ಕನ್ನಡಿಗನ ಹೃದಯದಲ್ಲಿ ಮನೆಮಾಡಿಕೊಂಡಿರುವರು.

ಉಪಲಬ್ಧವಿರುವ ಸಂಗತಿಗಳಿಂದ ಇವರ ಜನ್ಮವೃತ್ತಾಂತವು- ಹೀಗಿದೆ. ಪೂನಾದ ಸಮೀಪವಿರುವ ಪುರಂದರಗಡ ಎಂಬಲ್ಲಿ ಕ್ರಿಸ್ತಶಕ ೧೪೮೪ ರಲ್ಲಿ ಇವರ ಜನನವಾಯಿತು. ಇವರ ಮೂಲ ಹೆಸರು ಶ್ರೀನಿವಾಸ ನಾಯಕ ಎಂದು. ಆಗರ್ಭ ಶ್ರೀಮಂತರಾದ ಇವರು ಚಿನಿವಾರ ವೃತ್ತಿಯಿಂದ ಹೇರಳ ಹಣ ಸಂಪಾದಿಸಿದರು. ಇವರ ಪೂರ್ವ ಜನ್ಮಸುಕೃತ ಫಲದಿಂದ ಪರಮಾತ್ಮನು ಇವರಿಗೆ ಭಿಕ್ಷುಕನ ರೂಪದಲ್ಲಿ ದರ್ಶನವಿತ್ತು "ಮೂಗುತಿ" ಯ ಘಟನೆಯಿಂದ ಇವರ ಜಿಪುಣತನವನ್ನು ನೀಗಿಸಿದನಲ್ಲದೆ ತಮ್ಮ ಸರ್ವಸ್ವವನ್ನೂ ಕೃಷ್ಣಾರ್ಪಣ ಮಾಡಲು ಪ್ರೇರಣೆಯಿತ್ತನು. ಎಲ್ಲವನ್ನೂ ಹರಿಸೇವೆಗೆ ಅರ್ಪಿಸಿದ ನಂತರ ಶ್ರೀನಿವಾಸ ನಾಯಕರು

ಭಕ್ತಿ ವೈರಾಗ್ಯ ಸಂಪನ್ನರಾಗಿ ದೇಶಪರ್ಯಟನವನ್ನು ಕೈಕೊಂಡು,ವಿಜಯನಗರಕ್ಕೆ ಹೋದರು. ಅಲ್ಲಿ ಮಾಧ್ವ ಪರಂಪರೆಯ ಯತಿಶ್ರೇಷ್ಠರಲ್ಲೊಬ್ಬರಾದ ಶ್ರೀಸೋದೇ ಮಠದ ವ್ಯಾಸರಾಯಸ್ವಾಮಿಗಳ ದರ್ಶನವನ್ನು ಹೊಂದಿ ಅವರಿಂದ ಉಪದೇಶ ಪಡೆದು ತಮ್ಮ ಹುಟ್ಟೂರಿನ ಹೆಸರಿನ ದಾಸರಾದರು– ಅರ್ಥಾತ್ ಪುರಂದರ ದಾಸ ರಾದರು. ಕ್ರಿಸ್ತಶಕ ೧೫೬೪ ರಕ್ತಾಕ್ಷಿ ಸಂವತ್ಸರದ ಪುಷ್ಯವದ್ಯ ೩೦'ರಂದು ವೈಕುಂಠವಾಸಿಗಳಾದರು.

ಪದಗಳು, ಸುಳಾದಿಗಳು, ಉಗಾಭೋಗಗಳು ದೇವರ ನಾಮುಗಳು ಎಂದು ವಿವಿಧರೂಪದಲ್ಲಿ ಆ ಜಗ ನ್ನಿಯಾಮಕನನ್ನು ಹಾಡಿ ಹೊಗಳಿದ ಪುರಂದರ ದಾಸರ ಎಲ್ಲ ಕೃತಿಗಳೂ ಈ ವರೆಗೆ ದೊರೆತಿಲ್ಲ. ದೊರೆ ತವುಗಳೂ ಸಹ ಎಲ್ಲ ಮುದ್ರಿತವಾಗಿ ಪ್ರಕಟಿತವಾಗಿವೆ ಎಂದು ಹೇಳ ಬರುವಂತಿಲ್ಲ. ಪ್ರಕಟವಾದವುಗಳು ಎಲ್ಲವೂ ಶುದ್ಧವೆಂದು ಹೇಳುವುದೂ ಸಾಧ್ಯವಿಲ್ಲ. ಈ ದೃಷ್ಟಿಯಿಂದ ೧೯೩೯-೪೦ರ ಸುಮಾರಿಗೆ ತುಳುನಾಡು ಪ್ರೆಸ್ಸಿನಿಂದ- ಆಗ್ಗೆ ನಾನು ಅದರ ಮ್ಯಾನೇಜರನಾಗಿದ್ದೆ - ಪುರಂದರದಾಸರ ಪದಗಳು ನಾಲ್ಕು ಭಾಗಗಳಲ್ಲಿ ಪ್ರಕಟಿಸಲ್ಪಟ್ಟವು ಪಣಿಯೂಡಿ ಶ್ರೀನಿವಾಸ ಉಪಾ ಧ್ಯಾಯ, ಪಿ. ವೆಂಕಟರಮಣಾಚಾರ್ಯ ಮತ್ತು ಲಕ್ಷ್ಮೀನಾರಾಯಣ ಅಡಿಗರು ಅತ್ಯಂತ ಪರಿಶ್ರಮ ವಹಿಸಿ ದೊರೆತ ಪದಗಳನ್ನು ಶುದ್ಧೀಕರಿಸಿದರು. ಮುಂದೆ ಈ ಕೆಲಸವನ್ನು ಮಾಡಲು ಅನುಕೂಲ ಪರಿ ಸ್ಥಿತಿಯಿಲ್ಲದ್ದರಿಂದ ಅದು ಅಲ್ಲಿಗೇ ಕೊನೆಗೊಂಡಿತು. ಈಗ ಅವುಗಳನ್ನೊಳಗೊಂಡು ಈ ಪ್ರತಿಯನ್ನು ಹೊರ ಡಿಸಲಾಗಿದೆ.

ಚಿತ್ತಸ್ವಾಸ್ಥ್ಯವು ಇಂದಿನ ಜಗತ್ತಿನಲ್ಲಿ ಜನತೆಗೆ ದೊರೆಯುವುದು ದುರ್ಲಭವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ವೇದ, ಶಾಸ್ತ್ರ, ಪುರಾಣಗಳನ್ನೋದುವುದರ ಕಡೆಗೆ ಜನರ ಮನಸ್ಸು ಹೇಗೆ ತಾನೇ ಹರಿದೀತು? ಶಕ್ಯವಿಲ್ಲ. ಆದಾಗ್ಯೂ, ದಾಸವರ್ಯರ ಕೃತಿಗಳನ್ನಾದರೂ ಕನಿಷ್ಟ ಮನನ ಮಾಡಿದರೆ ಚಿತ್ತ ಶುದ್ಧಿಯು ಆಗದಿರದು. ಈ ಚಿತ್ತ ಶುದ್ಧಿಯ ಕ್ಷಣಿಕತೆ ಮತ್ತು ಶಾಶ್ವತತೆಯು ಆವರವರ ಮಾನಸಿಕ ಸಿದ್ಧತೆಯನ್ನವಲಂಭಿಸಿದೆ. ದಾಸರ ಪದಗಳಲ್ಲಿ ವೇದೋಪನಿಷತ್ತುಗಳ ಸಾರಸರ್ವಸ್ವವೂ ಅಡಗಿರುವುದು ಪರಲೋಕ ಸಾಧನೆಗೆ ಈ ದಾಸರ ಪದಗಳಿಗಿಂತ ಉತ್ತಮ ಮಾರ್ಗದರ್ಶಕ ವಸ್ತುವು ಬೇರೊಂದಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು

ಈ ಪುಸ್ತಕದಲ್ಲಿರುವ ಪದಗಳು ಪುರಂದರದಾಸ ಕೃತವಿರುವುದರಿಂದ ವೇದೋಪನಿಷತ್ತುಗಳಂತೆ ಇವುಗಳ ಸ್ವಾಮಿತ್ವವಾದರೂ ಜಗತ್ತಿನದು, ಜನತೆಯದು ನನ್ನದೆಂಬುದು ಇದರಲ್ಲೇನೂ ಇಲ್ಲ ಇರುವುದಾದರೆ ಅಲ್ಲಲ್ಲಿ ಕಂಡುಬರಬಹುದಾದ ತಪ್ಪುಗಳು ಮಾತ್ರ. ಇದರ ಸಂಪೂರ್ಣ ಶ್ರೇಯಸ್ಸು ತಮ್ಮ ಕೃತಿಗಳಿಂದ ನಮ್ಮೆಲ್ಲರನ್ನು ಸರಿದಾರಿಗೆ ಹಚ್ಚಿದ ಪುರಂದರ ದಾಸರಿಗೇ ಸಲ್ಲುವುದು.

ವಿಲಂಬಿ
ಪುಷ್ಯವದ್ಯ ೩೦ — ಎಸ್. ಎಸ್. ಕಾರಂತ
೭–೨–೧೯೫೯



# ಪುರಂದರದಾಸರ ಪದಗಳು

### ೧ ರಾಗ ಧನ್ಯಾಸಿ ಆದಿ ತಾಳ

ಗಜವದನ ಬೇಡುವೆ। ಗೌರೀತನಯ ||ಪ|| ತ್ರಿಜಗವಂದಿತನೆ ಸುಜನರ ಪೊರೆವನೆ || ಅ || ಪಾಶಾಂಕುಶಧರ ಪರಮಪವಿತ್ರ। ಮೂಷಿಕವಾಹನ ಮುನಿಜನಪ್ರೇಮ ||೧|| ಮೋದದಿ ನಿನ್ನಯ ಪಾದವ ತೋರೋ। ಸಾಧು ವಂದಿತನೆ ಆದರದಿಂದಲಿ ||೨|| ಸರಸಿಜನಾಭ ಶ್ರೀಪುರಂದರವಿಠಲನ। ನಿರತ ನೆನೆಯುವಂತೆ ದಯಮಾಡೋ ||೩||

### ೨ ರಾಗ ಸೌರಾಷ್ಟ್ರ ತ್ರಿಪುಟತಾಳ

ಶರಣು। ಸಿದ್ಧಿವಿನಾಯಕ। ಶರಣು ವಿದ್ಯಾಪ್ರದಾಯಕ|| ಶರಣು ಪಾರ್ವತಿ ತನಯ ಮೂರುತಿ। ಶರಣು ಮೂಷಿಕವಾಹನ || ಶರಣು ಶರಣು || ಪ || ನಿಟಲನೇತ್ರನ ದೇವಿಸುತನೇ ನಾಗಭೂಷಣಪ್ರಿಯನೆ || ತಟಿಲ್ಲತಾಂಕಿತ ಕೋಮಲಾಂಗನೆ ಕರ್ಣಕುಂಡಲಧಾರನೆ || ೧ || ಬಟ್ಟ ಮುತ್ತಿನ ಪದಕ ಹಾರನೆ ಬಾಹುಹಸ್ತಚತುಷ್ಟನೆ|| ಇಟ್ಟ ತೊಡುಗೆಯ ಹೇಮಕಂಕಣ ಪಾಶ ಅಂಕುಶಧಾರನೆ ||೨|| ಕುಕ್ಷಿಮಹಲಂಬೋದರನೆ ಇಕ್ಷುಚಾಪನ ಗೆಲಿದನೆ || ಪಕ್ಷಿವಾಹನ ಸಿರಿಪುರಂದರವಿಠಲನ ನಿಜದಾಸನೆ ||೩||

### ೩ ರಾಗ ಶಂಕರಾಭರಣ ಆದಿತಾಳ

ಹರಿ ನಿನ್ನೊಲುಮೆಯು ಆಗುವ ತನಕ । ಅರಿತು ಸುಮ್ಮನಿರುವುದು ಲೇಸು ||ಪ|| ಮರಳಿ ಮರಳಿ ತಾ ಪಡೆಯದ ಭಾಗ್ಯಕೆ। ಹೊರಹೊರಳುತ ಕನಲಲು ಬಂದೀತೆ ||ಅ|| ದೂರು ಬರುವ ತೆರ ನಂಬಿಕೆ ಕೊಟ್ಟರೆ ದುರ್ಜನ

ಬರುವುದು ತಪ್ಪೀತೇ| ದೂರದಿ ನಿಂತು ಮೊರೆಯಿಟ್ಟು ಕೂಗಲು ಚೋರಗೆ ದಯವು ಪುಟ್ಟೀತೆ||ಬಾರಿಬಾರಿಗೆ ಪಾತಿವ್ರತ್ಯವ ಬೋಧಿಸೆ ಜಾರೆಗದರ ನಿಜ ಸೊಗಸೀತೆ | ಊರು ಬಿಟ್ಟು ಬೇರೂರಿಗೆ ಹೋದರೆ ಪ್ರಾರಬ್ಧವು ಬೇರಾದೀತೆ ||೧|| ಪಟ್ಟೆಮಂಚ ತಿರುವಿಟ್ಟರೆ ಫಣೆಯೊಳು ಮೆಟ್ಟದ ಭ್ರಮಣೆಯು ಬಿಟ್ಟೀತೆ| ಹೊಟ್ಟೆಲಿ ಸುತರಿಲ್ಲೆಂದೊದರಲು ಹುಟ್ಟು ಬಂಜೆಗೆ ಫಲವಾದೀತೆ|| ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾರಗೆ ದಯ ಪುಟ್ಟೀತೆ| ಕೆಟ್ಟ ಹಾವು ಕಚ್ಚಿದ ಗಾಯವ ಹಳೆ ಬಟ್ಟೆಯೊಳೊರಸೆ ವಿಷ ಹೋದೀತೆ||೨|| ಧನಿಕರ ಕಂಡು ದೈನ್ಯವ ಪಟ್ಟರೆ ದಾರಿದ್ರ್ಯವು ಹಿಂಗೀತೆ| ದಿನದಿನ ನೊಸಲೊಳು ತಿರುಮಣಿಯಿಟ್ಟರೆ ದೇವರ ದಯವು ಪುಟ್ಟೀತೆ|| ಎಣಿಸಿಕೊಂಡೇಳ್ಹಂಜಿಯು ನೂತರೆ ಮಣಿಯವ ಸಾಲವು ತೀರೀತೇ | ಅನುದಿನ ನಮ್ಮ ಪುರಂದರ ವಿಠಲನ ನೆನೆದಲ್ಲದೆ ಭವ ಹಿಂಗೀತೇ ||೩||

### ೪ ರಾಗ ಕಾಂಭೋಜಿ ಏಕತಾಳ

ಯಾದವ ನೀ ಬಾ ಯದುಕುಲನಂದನ | ಮಾಧವ ಮಧುಸೂದನ ಬಾರೊ || ಸೋದರ ಮಾವನ ಮಧುರೆಲಿ ಮಡುಹಿದಯ | ಶೋದೆಕಂದನೆ ನೀ ಬಾರೋ || ಪ || ಶಂಖಚಕ್ರವು ಕಯ್ಯಲಿ ಹೊಳೆಯುತ ಬಿಂಕದ ಗೋವಳ ನೀ ಬಾರೋ || ಅಕಳಂಕ ಮಹಿಮನೆ ಆದಿನಾರಾಯಣ | ಬೇಕೆಂಬ ಭಕ್ತರಿಗೊಲಿ ಬಾರೊ ||೧|| ಕಣಕಾಲಂದುಗೆ ಘುಲುಘುಲುರೆನುತಲಿ| ಝಣಝಣ ವೇಣುನಾದದಲಿ|| ಚಿಣಿಕೋಲ್ ಚೆಂಡು ಬುಗುರಿಯನಾಡುತ| ಸಣ್ಣ ಸಣ್ಣ ಗೋವಳರೊಡಗೂಡಿ ||೨|| ಖಗವಾಹನನೆ ಬಗೆಬಗೆ ರೂಪನೆ ನಗುಮೊಗದರಸನೆ ನೀ ಬಾರೊ || ಜಗದೊಳು ನಿನ್ನಯ ಮಹಿಮೆಯ ಪೊಗಳುವೆ | ಪುರಂದರ ವಿಠ್ಠಲ ನೀ ಬಾರೋ ||೩||

### ೫ ರಾಗ ಭೈರವಿ ಆದಿತಾಳ

ಓಡಿ ಬಾರೈ ವೈಕುಂಠಪತಿ | ನಿನ್ನ | ನೋಡುವೆ ಮನದಣಿಯೆ || ಪ|| ಕಾಡಬೇಡವೋ ಕರುಣಾಕರ | ನಿನ್ನ | ಬೇಡಿಕೊಂಬೆನೋ ರಂಗಯ್ಯ || ಬೇಗ || || ಅ || ಕೆಂದಾವರೆ ಪೋಲ್ವ ಪಾದಗಳಿಂದ | ರಂಗ | ಧಿಂ ಧಿಮಿ

ಧಿಮಿಕೆಂದು ಕುಣಿಯುತಲಿ || ಅಂದುಗೆ ಕಿರುಗೆಜ್ಜೆ ನಲಿದಾಡುತ ಬಾರೋ| ಅರ | ವಿಂದ ನಯನ ಗೋವಿಂದ ನೀ ಬಾರೋ ||೧|| ಎಣ್ಣೋರಿಗತಿರಸ ದಧಿ ಘೃತವೋ | ರಂಗ | ಎನ್ನಯ್ಯ ನಿನಗೆ ಕೊಡುವೆ ಬಾರೊ || ಚಿಣ್ಣರ ಒಡನಾಟ ಸಾಕೋ ಬಿಡೋ | ಈಗ | ಬೆಣ್ಣೆಯ ಮೆಲುವುದು ಬೇಡವೊ ಕಂದ || ೨ || ತುರುಬಿನ ಮೇಲೆ ನಲಿಯುತಲಿರುತಿಹ | ಚೆಲ್ವ ಮರುಗ ಮಲ್ಲಿಗೆ ಜಾಜಿ ತುಳಸಿಯ ದಂಡೆ || ಕರದಲ್ಲಿ ಪಿಡಿದಿಹೆ ಮುತ್ತಿನ ಚೆಂಡು | ಬಲು | ಸರಸದಿಂದಲಿ ನೀ ನಲಿದಾಡುತ ಬಾರೊ || ೩ || ಕೋಟಿಸೂರ್ಯ ಪ್ರಕಾಶದಂತೆ | ಕಿರೀಟ ಕುಂಡಲ ಬಾವಲಿ ಹೊಳೆಯಿ ಲ || ಲಾಟ ಕಸ್ತೂರಿ ತಿಲಕ ಇಡುವೆ | ರಂಗ | ಕೂಟ ಗೋಪಾಲರ ಆಟ ಸಾಕೋ ಈಗ || ೪ || ಮಂಗಳಾತ್ಮಕ ಮೋಹನ ಕಾಯ | ರಂಗ | ಸಂಗೀತಲೋಲ ಸದ್ಗುಣಶೀಲ || ಅಂಗನೆಯರಿಗೆಲ್ಲ ಅತಿಪ್ರಿಯನಾದ| ಶುಭ | ಮಂಗಳ ಮೂರುತಿ ಪುರಂದರವಿಠಲ ||೫||

## ೬ ರಾಗ ಕಾಂಭೋಜಿ ಝಂಪೆತಾಳ

ಮಾತಿಗೆ ಬಾರದ ವಸ್ತು ಬಹಳಿದ್ದರೇನು | ಹೋತನ ಕೊರಳೊಳಗೆ ಮೊಲೆ ಇದ್ದರೇನು ||ಪ|| ತಾನು ಉಣ್ಣದ ದ್ರವ್ಯ ತಾಳ್ಯದ್ದ ಇದ್ದರೇನು | ದಾನವಿಲ್ಲದ ಮನೆಯು ದೊಡ್ಡದಾದರೇನು|| ಹೀನಗುಣವುಳ್ಳವಗೆ ಹಿರಿಯತನ ತನ ಬಂದರೇನು | ಶ್ವಾನನ ಮೊಲೆಯೊಳಗೆ ಹಾಲಿದ್ದರೇನು || ೧ || ಅದರಿಲ್ಲದ ಊಟ ಅಮೃತಾನ್ನವಿದ್ದೇನು | ವಾದಿಸುವ ಸತಿಸುತರು ಇದು ಫಲವೇನು || ಕ್ರೋಧವನು ಮಾಡುವ ಸಹೋದರರು ಇದ್ದರೇನು | ಮಾದಿಗರ ಮನೆಯಲ್ಲಿ ಮದುವ್ಯಾದರೇನು ||೨|| ಹೋಗದೂರಿನ ದಾರಿ ಕೇಳಿ ಮಾಡುವುದೇನು | ಯೋಗಿಯ ಕೂಡ ಪರಿಹಾಸ್ಯವೇನು || ರಾಗದಲಿ ಪುರಂದರವಿಠಲನ್ನ ನೆನೆಯದವ | ಯೋಗ್ಯಾದರೇನವನು ಭೋಗ್ಯಾದರೇನು ||೩||

## ೭ ರಾಗ ಕಾಂಭೋಜಿ ಝಂಪೆತಾಳ

ಇದು ಭಾಗ್ಯವಿದು ಭಾಗ್ಯವಿದು ಭಾಗ್ಯವಯ್ಯ ||ಪ|| ಪದ ಪಾದಭಜನೆ ಸುಖವಯ್ಯ || ಅ || ಕಲ್ಲಾಗಿ ಇರಬೇಕು ಕ

ಯೊಳಗೆ। ಬಿಲ್ಲಾಗಿ ಇರಬೇಕು ಬಲ್ಲವರೊಳಗೆ॥ ಮೆಲ್ಲನೆ ಮಾಧವನ ಮನವ ಮೆಚ್ಚಿಸಬೇಕು । ಬೆಲ್ಲವಾಗಿರಬೇಕು ಬಂಧುಜನರೊಳಗೆ ॥೧॥ ಬುದ್ಧಿಯಲಿ ತನುಮನವ ತಿದ್ದಿಕೊಳ್ಳಲು ಬೇಕು । ಮುದ್ದಾಗಬೇಕು ಮುನಿಯೋಗಿಗಳಿಗೆ ॥ ಮಧ್ವಮತಾಬ್ಧಿಯೊಳು ಮೀನಾಗಿರಲು ಬೇಕು । ಶುದ್ಧನಾಗಿರಬೇಕು ಕರಣತ್ರಯಗಳಲಿ ॥೨॥ ವಿಷಯಭೋಗದ ತೃಣಕೆ ಉರಿಯಾಗಿರಲುಬೇಕು । ನಿಶಿ ಹಗಲು ಶ್ರೀಹರಿಯ ನೆನೆಯಬೇಕು ॥ ವಸುಧೇಶ ಸಿರಿ ಪುರಂದರವಿಠಲರಾಯನ । ಹಸನಾದ ದಾಸರ ಸೇವಿಸಲುಬೇಕು ॥೩॥

## ೮ ರಾಗ ಕಾಂಭೋಜಿ ಆದಿತಾಳ

ಹರಿದಿನವಲಿ ಉಂಡ ನರರಿಗೆ ಘೋರ । ನರಕವು ತಪ್ಪದುಯೆಂದು ಶ್ರುತಿ ಸಾರುತಲಿದೆ ॥ಪ॥ ಗೋವು ಕೊಂದ ಪಾಪ ವಿಪ್ರರ ಸಾವಿರ । ಜೀವ ಹತ್ಯವ ಮಾಡಿದ ಪಾಪವು ॥ ಭಾವಜನಯ್ಯನ ದಿನದಿ ಉಂಡವರನು । ಕೀವಿನೊಳಗೆ ಹಾಕಿ ಕುದಿಸುವ ಯಮನು ॥೧॥ ಒಂದೊಂದು ಅಗುಳಿಗೆ ಕೋಟಿ ಕೋಟಿ ಕ್ರಿಮಿಗಳು । ಅಂದಿನ ಅನ್ನವು ನಾಯಿಮಾಂಸವು॥ ಮಂದರೋದ್ಧಾರನ ದಿನದಿ ಉಂಡವರನ್ನು । ಹಂದಿಯ ಸುಡುವಂತೆ ಸುಡಿಸುವ ಯಮನು ॥೨॥ ಅನ್ನಪಾನ ತಾಂಬೂಲ ದರ್ಪಣಗಳು । ಚಿನ್ನ ವಸ್ತ್ರಗಳೆಲ್ಲ ವರ್ಜಿತವು ॥ ತನ್ನ ಸತಿಯರ ಸಂಗ ಮಾಡಿದ ನರರಿಗೆ । ಬೆನ್ನಲಿ ಕರುಳ ತೆಗೆವ ಕಂಡ್ಯ ಯಮನು ॥೩॥ ಜಾವದ ಜಾಗರ ಕ್ರತು ನಾಲ್ಕು ಸಾವಿರ । ಜಾವ ನಾಲ್ಕರ ಫಲಕೆ ಮಿತಿಯಿಲ್ಲವು ॥ ದೇವದೇವನ ದಿನದಿ ನಿದ್ರೈಗೈವನ । ಕಾವಲಿಯೊಳು ಹಾಕಿ ಹುರಿಸುವ ಯಮನು ॥೪॥ ಇಂತು ಏಕಾದಶಿ ಉಪವಾಸ ಜಾಗರ । ಸಂತರ ಕ್ಷೀರಾಬ್ಧಿಶಯನನ ಪೂಜೆ ॥ ಸಂತುಷ್ಟಿಯಿಂದಲಿ ಮಾಡಿದ ಜನರರಿಗ । ತ್ಯಂತ ಫಲವೀವ ಪುರಂದರವಿಠಲ ॥೫॥

## ೯ ರಾಗ ಸೌರಾಷ್ಟ್ರ ಛಾಪುತಾಳ

ಕೃಷ್ಣ ಎನಬಾರದೆ । ಕೃಷ್ಣನ ನೆನೆದರೆ ಕಷ್ಟ ಒಂದಿಷ್ಟಿಲ್ಲ ॥ ಪ ॥ ನರಜನ್ಮ ಬಂದಾಗ ನಾಲಿಗೆ ಇದ್ದಾಗ । ಕೃಷ್ಣ ಎನಬಾರದೆ ॥ಅ॥ ಮಲಗೆದ್ದು

ಮೈಮುರಿದು ಏಳುತಲೊಮ್ಮೆ । ಕೃಷ್ಣ ಎನಬಾರದೆ ॥ನಿತ್ಯ॥ ಸುಳಿದಾಡುತ ಮನೆಯೊಳಗಾದರು ಒಮ್ಮೆ । ಕೃಷ್ಣ ಎನಬಾರದೆ ॥೧॥ ಮೇರೆ ತಪ್ಪಿ ಮಾತನಾಡುವಾಗಲೊಮ್ಮೆ । ಕೃಷ್ಣ ಎನಬಾರದೆ ॥ದೊಡ್ಡ॥ ದಾರಿಯ ನಡೆವಾಗ ಭಾರವ ಹೊರುವಾಗ । ಕೃಷ್ಣ ಎನಬಾರದೆ ॥೨॥ ಗಂಧವ ಪೂಸಿ ತಾಂಬೂಲವ ಮೆಲುವಾಗ । ಕೃಷ್ಣ ಎನಬಾರದೆ ॥ ತನ್ನ ॥ ಮಂದಗಮನೆ ಕೂಡನಾಡುತಲೊಮ್ಮೆ । ಕೃಷ್ಣ ಎನಬಾರದೆ॥ ಪರಿಪರಿ ಕೆಲಸದೊಳೊಂದು ಕೆಲಸವೆಂದು । ಕೃಷ್ಣ ಎನಬಾರದೆ ॥ ೪ ॥ ಕಂದನ ಬಿಗಿದಪ್ಪಿ ಮುದ್ದಾಡುತಲೊಮ್ಮೆ । ಕೃಷ್ಣ ಎನಬಾರದೆ ॥ ಬಹು ॥ ಚಂದುಳ್ಳ ಹಾಸಿಗೆ ಮೇಲೆ ಕುಳಿತೊಮ್ಮೆ । ಕೃಷ್ಣ ಎನಬಾರದೆ ॥೫॥ ನೀಗದಾಲೋಚನೆ ರೋಗೋಪ್ರದದಲೊಮ್ಮೆ । ಕೃಷ್ಣ ಎನಬಾರದೆ ॥ ಒಳ್ಳೆ ॥ ಭೋಗ ಪಡೆದು ಅನುರಾಗದಿಂದಿರುವಾಗ । ಕೃಷ್ಣ ಎನಬಾರದೆ ॥ ೬ ॥ ದುರಿತರಾಶಿಗಳನು ತರಿದು ಬಿಸುಡಲು । ಕೃಷ್ಣ ಎನಬಾರದೆ ॥ ಸದಾ ॥ ಗರುಡವಾಹನ ಸಿರಿಪುರಂದರವಿಠಲನ್ನೇ । ಕೃಷ್ಣ ಎನಬಾರದೆ ॥ ೭ ॥

## ೧೦ ರಾಗ ನಾದನಾಮಕ್ರಿಯೆ ಆದಿತಾಳ

ಕಂಡೆ ಕರುಣಾನಿಧಿಯ । ಗಂಗೆಯ । ಮಂಡೆಯೊಳಿಟ್ಟ ದೊರೆಯ ॥ಪ॥ ಶಿವನ । ರುಂಡ ಮಾಲೆ ಸಿರಿಯ । ನೊಸಲೊಳು । ಕೆಂಗಣ್ಣಿನ ಬಗೆಯ । ಹರನ ॥ಅ॥ ಗಜಚರ್ಮಾಂಬರನ । ಗೌರೀ । ವರ ಜಗದೀಶ್ವರನ ॥ ತ್ರಿಜಗನ್ಮೋಹನನ । ತ್ರಿಪುರಾಂತಕ । ತ್ರಿಲೋಚನ ಶಿವನ । ಹರನ ॥೧॥ ಭಸಿತಭೂಷಿತ ಹರನ । ಭಕ್ತರ । ವಶದೊಳಗಿರುತಿಹನ ॥ ಪಶುಪತಿಯೆನಿಸುವನ। ವಸುಧೆಲಿ । ಶಶಿಶೇಖರ ಶಿವನ । ಹರನ ॥ ೨ ॥ ಕಪ್ಪುಗೊರಳ ಹರನ । ಕಂ। ದರ್ಪಪಿತನ ಸಖನ ॥ ಮುಪ್ಪುರಗೆಲಿದವನ । ಮುನಿಸುತ । ಸರ್ಪಭೂಷಣ ಶಿವನ । ಭವನ ॥೩॥ ಕಾಮಿತಫಲವೀವನ । ಭಕುತರ । ಪ್ರೇಮದಿ ಸಲಹುವನ ॥ ರಾಮನಾಮ ಸ್ಮರನ । ರತಿಪತಿ । ಕಾಮನ ಸಂಹರನ । ಶಿವನ ॥ ॥ ೪ ॥ ಧರೆಗೆ ದಕ್ಷಿಣಕಾಶಿ । ಎನಿಸುವ । ಪುರಪಂಪಾವಾಸಿ ॥ ತಾರಕವುಪದೇಶಿ । ಪುರಂದರ । ವಿಠಲ ಭಕ್ತರ ಪೋಷಿ । ಹರನ ॥೫॥

## ೧೧ ರಾಗ ಆನಂದಭೈರವಿ ಆದಿತಾಳ

ಯಾರು ಒಲಿದರೇನು । ನಮಗಿ । ನ್ಯಾರು ಮುನಿದರೇನು ॥ ಪ ॥ ಕ್ಷೀರ ಸಾಗರಶಾಯಿಯಾದವನ । ಸೇರಿದಂಥ ಹರಿದಾಸರಿಗೆ ॥ಅ॥ ಊರನಾಳುವ ದೊರೆಗಳು ನಮ್ಮನು ದೂರ ಅಟ್ಟಿದರೇನು । ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು ॥ ಮಾರಿ ಹಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು । ವಾರಿಜನಾಭನ ವಸುದೇವಸುತನ ಸಾರುವಂಥ ಹರಿದಾಸರಿಗೆ ॥ ೧ ॥ ಪಡೆದ ತಾಯಿ ತಂದೆ ನಮ್ಮೊಳು ಅಹಿತ ಮಾಡಿದ ರೇನು । ಮಡದಿ ಮಕ್ಕಳು ಮನೆಯ ನೆಂಟರು ಮುನಿಸುಗುಟ್ಟಿದರೇನು ॥ ಒಡನಾಡುವ ಗೆಳೆಯರು ನಮ್ಮೊಳು ವೈರವ ಬೆಳೆಸಿದರೇನು । ಕಡಲಶಯನ ಕರುಣಾನಿಧಿ ನಾಮವು ಒಡಲೊಳಗಿಹ ಹರಿದಾಸರಿಗೆ ॥ ೨ ॥ ಕಾನನ ದೊಳ್ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು । ಜೇನಿನಂದದಿ ಕೀಟ ಕ್ರಿಮಿಗಳು ಚರ್ಮಕೆ ಮುತ್ತಿದರೇನು ॥ ಭಾನುನಂದನ ಬುಧ ಮಂಗಳರಾ ಬಲವು ತಪ್ಪಿದರೇನು । ದೀನನಾಥ ಶ್ರೀ ಪುರಂದರವಿಠಲನ ಧ್ಯಾನವುಳ್ಳ ಹರಿದಾಸರಿಗೆ ॥ ೩ ॥

## ೧೨ ರಾಗ ಕಾನಡ ಆದಿತಾಳ

ನೀನೇಕೋ । ನಿನ್ನ ಹಂಗೇಕೋ ॥ ನಿನ್ನ ನಾಮದ ಬಲವೊಂದಿದ್ದರೆ ಸಾಕೋ ॥ ಪ ॥ ಕರಿ ಮಕರಿಗೆ ಸಿಲುಕಿ ಮೊರೆಯಿಡುತಿರುವಾಗ ॥ ಆದಿ ಮೂಲನೆಂಬ ನಾಮವೆ ಕಾಯ್ತೋ ॥ ೧ ॥ ಪ್ರಹ್ಲಾದನ ಪಿತ ಬಾಧಿಸುತಿರು ವಾಗ ॥ ನರಹರಿಯೆಂಬ ನಾಮವೆ ಕಾಯ್ತೋ ॥ ೨ ॥ ಬಾಲೆಯ ಸಭೆಯಲ್ಲಿ ಸೀರೆಯ ಸೆಳೆವಾಗ ॥ ಕೃಷ್ಣ ಕೃಷ್ಣ ಎಂಬ ನಾಮವೆ ಕಾಯ್ತೋ ॥ ೩ ॥ ಯಮನ ದೂತರು ಬಂದು ಅಜಾಮಿಳನೆಳೆವಾಗ ॥ ನಾರಾಯಣನೆಂಬ ನಾಮವೆ ಕಾಯ್ತೋ ॥ ೪ ॥ ಆ ಮರ ಈ ಮರ ಧ್ಯಾನಿಸುತ್ತಿರುವಾಗ ॥ ರಾಮ ರಾಮ ಎಂಬ ನಾಮವೆ ಕಾಯ್ತೋ ॥ ೫ ॥ ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ ॥ ವಾಸುದೇವನೆಂಬ ನಾಮವೆ ಕಾಯ್ತೋ ॥ ೬ ॥ ನಿನ್ನ ನಾಮಕೆ ಸರಿ ಕಾಣೆನು ಜಗದೊಳು ॥ ಘನ್ನ ಮಹಿಮ ಸಿರಿಪುರಂದರ ವಿಠಲ ॥ ೭ ॥

## ೧೩ ರಾಗ ಕಲ್ಯಾಣಿ ಅಟತಾಳ

ಇನ್ನೂ ದಯ ಬಾರದೆ । ದಾಸನ ಮೇಲೆ । ಇನ್ನೂ ದಯ ಬಾರದೆ॥ಪ॥ ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣ ॥ ಅ ॥ ನಾನಾದೇಶಗಳಲ್ಲಿ ನಾನಾಕಾಲಗಳಲ್ಲಿ । ನಾನಾಯೋನಿಗಳಲ್ಲಿ ನಲಿದು ಪುಟ್ಟಿ ॥ ನಾನು ನನ್ನದುಯೆಂಬ ನರಕದೊಳಗೆ ಬಿದ್ದು । ನೀನೇ ಗತಿಯೆಂದು ನಂಬಿದ ದಾಸನ ಮೇಲೆ ॥ ೧ ॥ ಕಾಮಾದಿ ಷಡ್ವರ್ಗ ಗಾಢಾಂಧಕಾರದಿ । ಪಾಮರ ನಾಗಿಹ ಪಾತಕಿಯು ॥ ಮಾಮನೋಹರನೆ ಚಿತ್ತಜಜನಕನೆ । ನಾಮವೆ ಗತಿಯೆಂದು ನಂಬಿದ ದಾಸನ ಮೇಲೆ ॥ ೨ ॥ ಮಾನಸ ವಾಚಾ ಕಾಯದಿ ಮಾಳ್ಪ ಕರ್ಮವು । ದಾನವಾಂತಕ ನಿನ್ನಾಧೀನವಲ್ತೆ ॥ ಏನು ಮಾಡಿದ ರೇನು ಪ್ರಾಣ ನಿನ್ನದು ಸ್ವಾಮಿ । ಶ್ರೀನಾಥ ಪುರಂದವಿಠಲ ದಾಸನ ಮೇಲೆ ॥ ೩ ॥

## ೧೪ ರಾಗ ಕಲ್ಯಾಣಿ ತ್ರಿಪುಟತಾಳ

ಪಿಳ್ಳಂಗೋವಿಯ ಚೆಲ್ವ ಕೃಷ್ಣನ । ಎಲ್ಲಿ ನೋಡಿದಿರಿ । ರಂಗನ । ಎಲ್ಲಿ ನೋಡಿದಿರಿ ॥ ಪ ॥ ಎಲ್ಲಿ ನೋಡಿದರಲ್ಲಿ ತಾನಿಲ್ಲ । ದಿಲ್ಲವೆಂದು ಬಲ್ಲ ಜಾಣರು ॥ ಅ ॥ ನಂದಗೋಪನ ಮಂದಿರಂಗಳ ಸಂದುಗೊಂದಿನಲಿ । ಚಂದ ಚಂದದ ಗೋಪಬಾಲರ ವೃಂದವೃಂದದಲಿ ॥ ಸುಂದರಾಂಗದ ಸುಂದರಿಯರ ಹಿಂದುಮುಂದಿನಲಿ । ಅಂದದಾಕಳ ಕಂದಕರುಗಳ ಮಂದೆ ಮಂದೆಯಲಿ ॥ ೧ ॥ ಶ್ರೀ ಗುರೂಕ್ತ ಸದಾ ಸುಮಂಗಳ ಯೋಗಯೋಗ ದಲಿ । ಆಗಮಾರ್ಥದೊಳಗೆ ಮಾಡುವ ಯಾಗಯಾಗದಲಿ ॥ ಶ್ರೀಗೆ ಭಾಗ್ಯ ನಾಗಿ ವರ್ತಿಪ ಭೋಗಭೋಗದಲಿ । ಭಾಗವತರು ಸದಾ ಬಾಗಿ ಪಾಡುವ ರಾಗರಾಗದಲಿ ॥ ೨ ॥ ಈ ಚರಾಚರದೊಳಗೆ ಜನಂಗಳಾಚೆ ಈಚೆಯಲಿ । ಖೇಚರೇಂದ್ರನ ಸುತನ ರಥದ ಚೌಕಪೀಠದಲಿ ॥ ನಾಚದೆ ಮಾಧವ ಎಂಬ ಭಕ್ತರ ವಾಚಕಂಗಳಲಿ । ವೀಚುಕೊಂಡದ ಪುರಂದವಿಠಲನ ಲೋಚನಾ ಗ್ರದಲಿ ॥ ೩ ॥

ಕಟ್ಟುವನೆ ॥ ಹಾಸುವುವಕ್ಕೆ ಹಾಸಿಗೆಯುಳ್ಳೊಡೆ ತಾ । ಶೇಷನ ಬೆನ್ನಲಿ ಮಲಗುವನೆ ರಂಗ ॥ ೧ ॥ ಬುದ್ಧಿಯ ಪೇಳುವ ಪಿತನುಳ್ಳಡೆ ಬೆಣ್ಣೆ । ಕದ್ದು ಚೋರನೆಂದೆನಿಸುವನೆ। ಬದ್ಧವಾಹನ ತನಗಿದ್ದರೆ ಹಾರುವ। ಹದ್ದಿನ ಮೇಲೇರಿ ತಿರುಗುವನೆ ರಂಗ ॥೨॥ ಹಡೆದ ತಾಯಿ ತನಗುಳ್ಳಡೆ ಗೋಪರ। ಒಡಗೂಡಿ ತುರುವಿಂಡು ಕಾಯುವನೆ ॥ ಮಡದಿಯು ಉಳ್ಳಡೆ ಅಡವಿಯೊಳಾಡುವ । ಹುಡುಗಿಯರ ಸಂಗ ಮಾಡುವನೆ ರಂಗ ॥೩॥ ಸಂಗಡ ಉದಿಸಿದ ಅಣ್ಣನಿದ್ದರೆ ನರ । ಸಿಂಗನ ರೂಪವ ಧರಿಸುವನೆ ॥ ಅಂಗದ ಮೇಲಿನ ಆಸೆಯಿದ್ದೊಡೆ ತಾ । ಲಿಂಗನ ಮಡುವಿಲಿ ಧುಮುಕುವನೆ ರಂಗ ॥೪॥ ಸತಿಯುಳ್ಳಡೆ ರಕ್ಷಃಪತಿಯೆಡೆಗೈದಿ ತಾ । ಕ್ಷಿತಿಯ ದಾನವನು ಬೇಡುವನೆ ॥ ಮತಿವಂತ ಪುರಂದರ ವಿಠ್ಠಲರಾಯನ । ಪತಿತಪಾವನೆಂದು ನುತಿಸಿದೆ ನಲ್ಲದೆ ॥ ೫ ॥

## ೧೯ ರಾಗ ಪೂರ್ವಿಕಲ್ಯಾಣಿ ಅಟತಾಳ

ತೇಲಿಸೋ ಇಲ್ಲ ಮುಳುಗಿಸೋ । ನಿನ್ನ । ಕಾಲಿಗೆ ಬಿದ್ದೆನೊ ಪರಮ ಕೃಪಾಳೊ ॥ಪ॥ ಸತಿ ಸುತ ಧನದಾಸೆ ಎಂದೆಂಬ ಮೋಹದಿ । ಹಿತದಿಂದ ಅತಿನೊಂದು ಬೆಂಡಾದೆನೊ ॥ ಗತಿ ಕೊಡುವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ। ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ॥೧॥ ಜರೆ ರೋಗ ದಾರಿದ್ರ್ಯ ಕಶ್ಮಲವೆಂತೆಂಬ । ಶರಧಿಯೊಳಗೆ ಬಿದ್ದು ಮುಳುಗಿದೆನೊ ॥ ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ। ಕರುಣಾಭಯವಿತ್ತು ಪಾಲಿಸೋ। ಹರಿಯೆ ॥೨॥ ದೋಷವುಳ್ಳವ ನಾನು ಭಾಷೆಯುಳ್ಳವ ನೀನು । ಮೋಸಹೋದೆನೊ ಭಕ್ತಿರಸವ ಬಿಟ್ಟು ॥ ಶೇಷಶಯನ ಶ್ರೀಪುರಂದರವಿಠಲನೆ । ದಾಸರ ಸಂಗವಿತ್ತು ಪಾಲಿಸೊ ಹರಿಯೇ ॥ ೩ ॥

## ೨೦ ರಾಗ ಸೌರಾಷ್ಟ್ರ ಅಟತಾಳ

ಕೇಶವ ಮಾಧವ ಗೋವಿಂದ ವಿಠಲೆಂಬ । ದಾಸಯ್ಯ ಬಂದ ಕಾಣೆ ॥ ॥ ಪ ॥ ದೋಷರಹಿತ ನರವೇಷವ ಧರಿಸಿದ । ದಾಸಯ್ಯ ಬಂದ ಕಾಣೆ ॥

|| ಅ || ಖಳನು ವೇದವನೊಯ್ಯೆ ಪೊಳೆವ ಕಾಯನಾದ | ದಾಸಯ್ಯ ಬಂದ ಕಾಣೆ || ಘಳಿಲನೆ ಕೂರ್ಮ ತಾನಾಗಿ ಗಿರಿಯ ಪೊತ್ತ | ದಾಸಯ್ಯ ಬಂದ ಕಾಣೆ || ಇಳೆಯ ಕದ್ದಸುರನ ಕೋರೆದಾಡೆಲಿ ಕೊಂದ | ದಾಸಯ್ಯ ಬಂದ ಕಾಣೆ ||೧|| ಛಲದಿ ಕಂಭದಿ ಬಂದು ಅಸುರನ ಸೀಳಿದ | ದಾಸಯ್ಯ ಬಂದ ಕಾಣೆ || ಲಲನೆಯನೊಯ್ಯೆ ತಾ ತಲೆಹತ್ತರನ ಕೊಂದ | ದಾಸಯ್ಯ ಬಂದ ಕಾಣೆ|| ನೆಲಕೊತ್ತಿ ಕಂಸನ ಬಲವ ಸಂಹರಿಸಿದ| ದಾಸಯ್ಯ ಬಂದ ಕಾಣೆ|| ||೨|| ಪುಂಡತನದಿ ಪೋಗಿ ಪುರವನುರುಪಿ ಬಂದ | ದಾಸಯ್ಯ ಬಂದ ಕಾಣೆ || ಲಂಡರ ಸದೆಯಲು ತುರಗವನೇರಿದ | ದಾಸಯ್ಯ ಬಂದ ಕಾಣೆ|| ಹಿಂಡು ವೇದಗಳೆಲ್ಲ ಅರಸಿ ನೋಡಲು ಸಿಗದ | ದಾಸಯ್ಯ ಬಂದ ಕಾಣೆ|| ಪಾಂಡುರಂಗ ನಮ್ಮ ಪುರಂದರವಿಠಲ | ದಾಸಯ್ಯ ಬಂದ ಕಾಣೆ ||೩||

### ೨೧ ರಾಗ ಧನ್ಯಾಸಿ ಆದಿತಾಳ

ಹರಿ ಹರಿ ಹರಿ ಹರಿಯೆಂಬೋ ನರಗಿನ್ನೇತರ ಭಯವಿಲ್ಲಲ್ಲಾ ||ಪ|| ಧ್ರುವಗೊಲಿದವ ಶ್ರೀಶಾ ಹುಸ್ಸೆನ್| ಧ್ರುವಪದವಿತ್ತನೆ ಹುಸ್ಸೆನ್ || ಭಾವ ಶುದ್ಧಿ ಇರುವಲ್ಲಲ್ಲಿ | ಭವಭಯವೆಂಬೋದಿಲ್ಲಲ್ಲಾ ||೧|| ಕರಿಮೊರೆ ಕೇಳಿದ ಶ್ರೀಶ ಹುಸ್ಸೆನ್|| ಹರಿಯ ಭಕ್ತಿಗಳಿಂದಲಿ | ದುರಿತಭಯ ನಮಗಿಲ್ಲಲ್ಲಾ || ||೨|| ಕರುಣಾಕರ ಶ್ರೀಶಾ ಹುಸ್ಸೆನ್ | ಗರುಡವಾಹನನೆಂಬ ಹುಸ್ಸೆನ್ || ಅರಿತು ಬಂದೆನಲ್ಲಲ್ಲಿ | ಪುರಂದರವಿಠಲನಲ್ಲದಿಲ್ಲಲ್ಲಾ ||೩||

### ೨೨ ರಾಗ ಶಂಕರಾಭರಣ ಅಟತಾಳ

ಬಾರಯ್ಯ ರಂಗ ಬಾರಯ್ಯ ಕೃಷ್ಣ | ಬಾರಯ್ಯ ಸ್ವಾಮಿ ಬಾರಯ್ಯ || || ಪ || ವಾರಣಭಯವ ನಿವಾರಣ ಮಾಡಿದ | ಕಾರುಣ್ಯನಿಧಿಯೆನ್ನ ಹೃದಯ ಮಂದಿರಕೆ ||| ಅ || ಮೊದಲಿಂದ ಬರಬರಾದೆ ನಾನು ಬಂದೆ | ತುದಿಮೊದಲಿಲ್ಲದ್ದೊಂದಿದೆ ಅಪನಿಂದೆ || ಇದು ಗೆದ್ದು ಕಳೆದುಪೋಪುದು ಹೇಗೆ ಮುಂದೆ | ಪದುಮನಾಭ ತಪ್ಪು ಕ್ಷಮಿಸಯ್ಯ ತಂದೆ || ೧ || ಹೆಣ್ಣು ಹೊನ್ನು ಮಣ್ಣಿನಾಸೆಯೊಳಿದ್ದು | ಪುಣ್ಯ ಪಾಪಂಗಳ ನಾನರಿತಿದ್ದು || ಅನ್ಯಾಯವಾಯಿತು ಇದಕೇನು ಮದ್ದು| ನಿನ್ನ ಧ್ಯಾನವ ಕೊಡು ಹೃದಯ

ದೋಳಿದ್ದು ||೨|| ಇಂದೆನ್ನ ಪೂರ್ವ ಪಾಪಂಗಳ ಕಳೆದು । ಮುಂದೆನ್ನ ಜನ್ಮ ಸಫಲವನ್ನು ಗೈದು || ತಂದೆ ಪುರಂದರವಿಠಲ ನೀನೊಲಿದು । ಎಂದೆಂದಿ ಗಾನಂದ ಸುಖವನ್ನು ಸುರಿದು || ೩ ||

### ೨೩ ರಾಗ ಕೇದಾರಗೌಳ ಅಟತಾಳ

ನಿನ್ನ ನಾಮವೆ ಎನಗೆ ಅಮೃತಾನ್ನವು। ಇನ್ನು ಹಸಿದಿರಲೇಕೆ ಎನಗೆ ನೀ ನೊಲಿದಿರಲು ||ಪ|| ಓಂಕಾರವೆಂಬ ನಿನ್ನ ನಾಮ ಉಪ್ಪಿನಕಾಯಿ । ಶಂಖ ಪಾಣಿಯ ನಾಮ ಶಾಕಾದಿ ಸೂಪ || ಸಂಕರುಷಣ ಎಂಬ ನಾಮ ದಿವ್ಯ ಶಾಲ್ಯನ್ನವು । ಪಂಕಜಾಕ್ಷ ನಿನ್ನ ನಾಮ ಪಳದ್ಯ ಸಾರು ||೧|| ಕೇಶವನೆಂಬ ನಾಮ ಕರಿದ ಹೂರಣ ಕಡುಬು । ವಾಸುದೇವನ ನಾಮ ವಡೆ ಶ್ಯಾವಿಗೆ|| ಸಾಸಿರವೆಂಬ ನಾಮ ಶ್ಯಾವಿಗೆ ಪರಮಾನ್ನ। ದೋಷದೂರನ್ನನಾಮ ಸೂಸಲ ಕಡುಬು ||೨|| ನಾರಾಯಣ ನಿನ್ನ ನಾಮ ನೊರೆಪಾಲು ಸಕ್ಕರೆ। ಶ್ರೀರಾಮ ನಾಮ ಸರವಳಿಗೆ ಸಜ್ಜಿಗೆ || ಕಾರುಣ್ಯನಿಧಿನಾಮ ಕರಿದ ಹಪ್ಪಳ ಸಂಡಿಗೆ । ಪಾರಾಯಣನಾಮ ಪರಿಪರಿಯ ಪರಮಾನ್ನ || ೩ || ಯದುಪತಿಯೆಂಬ ನಾಮ ಎಣ್ಣೋಳಿಗೆ ರಾಶಿ । ಮಧುಸೂದನನೆಂಬ ನಾಮ ಮಂಡಿಗೆಯು|| ಚದುರ ಗೋವಳನಾಮ ಚಿಲುವ ಬೀಸೂರಿಗೆ। ಪದುಮನಾಭ ನಿನ್ನ ನಾಮ ಪರಿಪರಿಯ ಬಕ್ಷ್ಯ || ೪ || ದೇವಕೀಸುತನಾಮ ದಧ್ಯನ್ನದ ಮುದ್ದೆ । ಗೋವಿಂದನ ನಾಮ ಗುಳ್ಳೋರಿಗೆ || ಮಾವಮರ್ದನನಾಮ ಕಲಸು ಮೇಲೋಗರ। ರಾವಣಾರಿಯ ನಾಮ ದೋಸೆ ಸುಖಿನುಂಡೆ ||೫|| ಗರುಡ ವಾಹನನಾಮ ಘೃತ ಪಯೋ ದಧಿ ತಕ್ರ । ಪರಮಪುರುಷನನಾಮ ಪನ್ನೀರಪಾನ|| ಕರಿವರದ ನಿನ್ನ ನಾಮ ಕರ್ಪೂರದ ವೀಳ್ಯ|| ಶರಧಿಶಯನ ನಾಮ ಶಯನಪರ್ಯಂಕ ||೬|| ಈ ಪರಿಲಿ ನಾಮಾವಳಿಯನು ನೆರೆ ಸವಿ ದುಂಬೆ । ಆಪತ್ತು ಬಿಡಿಸೆನ್ನ ಕ್ಷುಧೆಯ ನೂಕಿ || ಗೋಪಾಲ ಉರಗಾದ್ರಿ ಪುರಂದರ ವಿಠಲನೇ । ಶ್ರೀಪಾದ ನಂಬಿ ಅಪವರ್ಗವ ಸೇರುವೆ ||೭||

### ೨೪ ರಾಗ ಶಂಕರಾಭರಣ ಆಟತಾಳ

ಹಣ್ಣು ಕೊಂಬರು ಬನ್ನಿ । ಹರಿದಾಸರು । ಚಿಣ್ಣ ಬಾಲಕೃಷ್ಣನೆಂಬೋ ಹೆಸರಿನ ಹಣ್ಣು || ಪ || ಅಜನ ಪಡೆದ ಹಣ್ಣು ಗಜವ ಸಲಹಿದ ಹಣ್ಣು ।

ತ್ರಿಜಗಾದಿ ಗುರುವಿಗೆ ತೋರ್ದ ಹಣ್ಣು ॥ ತ್ರಿಜಗವಂದಿತ ಪಾಲನೆಂಬೊ ಮಾವಿನ ಹಣ್ಣು । ಸುಜನಗಂಧಿಯರೆ ನೀವು ಕೊಳಬನ್ನಿರಮ್ಮಯ್ಯ ॥ ೧ ॥ ಮುದ್ದು ಸುರಿವ ಹಣ್ಣು ಕ್ಷುದ್ರ ಹರಿಸುವ ಹಣ್ಣು । ಕದ್ದು ಬೆಣ್ಣೆಯ ಮೆದ್ದ ಕಳ್ಳ ಹಣ್ಣು ॥ ಒದ್ದು ಮಾವನ ಕೊಂದು ಮಾತೆಯಪ್ಪಿದ ಹಣ್ಣು। ಮುದ್ದು ಕೃಷ್ಣನೆಂಬೊ ಹಣ್ಣು ಕೊಳಬನ್ನಿರಮ್ಮಯ್ಯ ॥೨॥ ಮುನ್ನೊಬ್ಬ ಜಾಮಿಳನ ಪಾಪ ಅಳಿದ ಹಣ್ಣು । ಕನ್ನೆಯರಭಿಮಾನ ಕಾಯಿದ ಹಣ್ಣು ॥ ಪನ್ನಗ ಶಾಯಿ ಪಾಲ್ಗಡಲೊಡೆಯನೆಂಬೊ ಹಣ್ಣು । ಚೆನ್ನ ಕೃಷ್ಣನೆಂಬೊ ಹಣ್ಣು ಕೊಳ ಬನ್ನಿರಮ್ಮಯ್ಯ ॥೩॥ ಎರಡೆಂಟು ಸಾವಿರ ಗೋಪೀರಾಳಿದ ಹಣ್ಣು । ಕರೆದರೆ ಕುಂಭದಿಂದ ಓ ಎಂದ ಹಣ್ಣು ॥ ಮರುಗುವ ಧ್ರುವಗೆ ಉನ್ನತ ಮಾಡಿದ ಹಣ್ಣು । ಪುರಂದರವಿಠಲನೆಂಬೊ ಹಣ್ಣು ಕೊಳಬನ್ನಿರಮ್ಮಯ್ಯ ॥೪॥

## ೨೫ ರಾಗ ಕಾಂಭೋಜಿ ಝಂಪೆತಾಳ

ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ ॥ ಪ ॥ ಗೋಪೀಜನ ಪ್ರಿಯ ಗೋಪಾಲಗಲ್ಲದೆ ॥ಅ॥ ದೊರೆಯತನದಲಿ ನೋಡೆ ಧರಣಿದೇವಿಗೆ ರಮಣ। ಸಿರಿಯತನದಲಿ ನೋಡೆ ಶ್ರೀಕಾಂತನು॥ ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ । ಗುರುವುತನದಲಿ ನೋಡೆ ಜಗದಾದಿಗುರುವು ॥೧॥ ಪಾವನತ್ವದಿ ನೋಡೆ ಅಮರಂಗಂಗಾಜನಕ। ದೇವತ್ವದಲಿ ನೋಡೆ ದಿವಿಜರೊಡೆಯ ॥ ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ । ಆವ ಧೈರ್ಯದಿ ನೋಡೆ ಅಸುರಾಂತಕ॥೨॥ ಗಗನದಲಿ ಸಂಚರಿಪ ಗರುಡದೇವನೆ ತುರಗ। ಜಗವಧರಿಸಿದ ಶೇಷ ಪರ್ಯಂಕಶಯನ॥ ನಿಗಮಗೋಚರ ಪುರಂದರವಿಠಲಗಲ್ಲದೆ । ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ॥೩॥

## ೨೬ ರಾಗ ಆಹೇರಿ ಅಟತಾಳ

ಕಟ್ಟಬೇಕು ಕಾಟದೆಮ್ಮೆ ಅದರ ಹಯನ । ಎಷ್ಟಾದರೂ ಉಣಬೇಕು ॥ ॥ಪ॥ ಹಮ್ಮುಯೆಂಬೊದೆ ಎಮ್ಮೆ ಗಮ್ಮುಯೆಂಬೊದೆ ಹಗ್ಗ । ಹಮ್ಮುಯೆಂಬೊದೆ ಅದಕೆ ಧಮ್ಮ ಗುದ್ದಿ ॥ ಸುಮ್ಮನ ಮನದಿಂದ ಹಾಲ್ಕರೆದು ಪರ ।

ಬೊಮ್ಮನಿಗರ್ಪಿಸಬೇಕು ನಿತ್ಯದಿ ||೧|| ಚಂಡಿತನವೆಂಬ ಹಿಂಡಿ ಇಡಬೇಕು| ದಿಂಡತನವೆಂಬ ಪೆಂಡೆಮೇವು|| ಪುಂಡತನವೆಂಬೋ ಪಿಂಡಿ ರುಬ್ಬಿಡಬೇಕು| ಪಾಂಡುರಂಗ ಗುಂಡಿ ಒಳಗೆ ಹಿಂಡಿಕೊಬೇಕು ||೨|| ಅಂತರಂಗದ ಒಳಗೆ ಭ್ರಾಂತಿ ಬಿಡಿಸುವ ಎಮ್ಮೆ| ಅಂತುದಾರಿಗೂ ತಿಳಿಯದಂಥ ಎಮ್ಮೆ | ಕಂತು ಜನಕ ಸ್ವಾಮಿ ಪುರಂದರವಿಠಲನ | ಸಂತರ ಮನೆಯೊಳಗೆ ಇಂಥೆಮ್ಮೆ ಇರಬೇಕು || ೩ ||

## ೨೭ ರಾಗ ಕಾಂಭೋಜಿ ಝಂಪೆತಾಳ

ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು | ಪದುಮನಾಭನ ಪಾದದೊಲುಮೆ ಎನಗಾಯಿತು ||ಪ|| ಮುಕ್ತರಾದರು ಎನ್ನ ನೂರೊಂದು ಕುಲದವರು| ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು|| ಮುಕ್ತಿದಾಯಕನ ಭಕ್ತಿಗೆ ಮನವು ನೆಲಸಿತು| ವ್ಯಕ್ತವಾಯಿತು ನಾಲಿಗೆಯೊಳು ಹರಿನಾಮ || || ೧ || ಹರಿಯ ತೀರ್ಥ ಪ್ರಸಾದವಿಂದೆನಗೆ ದೊರಕಿತು | ಹರಿಕಥಾಮೃತ ವೆನ್ನ ಕಿವಿಯೊಳಾಯ್ತು || ಹರಿದಾಸರು ಎನ್ನ ಬಂಧುಬಳಗಾಯಿತು| ಹರಿ ಮುದ್ರೆ ಎನಗಾಭರಣವಾಯಿತು ||೨|| ಹಿಂದೆನ್ನ ಸಂತತಿಗೆ ಸಕಲ ಸಾಧನ ವಾಯ್ತು | ಮುಂದೆನ್ನ ಜನ್ಮವು ಸಫಲವಾಯ್ತು || ತಂದೆ ಪುರಂದರವಿಠಲ ನೆಂದೆಂಬ ಪರದೈವ | ಬಂದು ಹೃದಯದಲಿ ನೆಲೆಯಾಗಿ ನಿಂತ || ೩ ||

## ೨೮ ರಾಗ ಧನ್ಯಾಸಿ ಆದಿತಾಳ

ಧರ್ಮಶ್ರವಣವಿದೇತಕೆ | ಮೂರ್ಖಗೆ | ಧರ್ಮಶ್ರವಣವಿದೇತಕೆ ||ಪ|| ಕರ್ಮಾನುಷ್ಠಾನವನೆಸಗದಿರುವ | ದುರ್ಮತಿಗೇತಕೆ ಬ್ರಾಹ್ಮಣಜನ್ಮ || ||ಅ|| ಕೋಣಗೆ ವೀಣಾಗಾನವಿದೇತಕೆ | ಮಾಣಿಕ್ಯವೇತಕೆ ಮರ್ಕಟಗೆ || ತ್ರಾಣವು ತೊಲಗಿದ ಹೆಣ್ಣಿಗಿದೇತಕೆ ಕ| ಟ್ಟಾಣಿ ಮುತ್ತಿನ ಹಾರವು ಕೊರ ಳಿಗೆ ||೧|| ಷಡುರಸ ಅನ್ನವಿದೇತಕೆ ಗರ್ದಭ| ಉಡುಗೊರೆ ಸಹಿತಲೆ ಶ್ವಾನನಿಗೆ || ಕಡುವೃದ್ಧಗೆ ಮೈನೆರೆದ ಹೆಣ್ಣಿನ | ಒಡನೆ ಭೋಗಿಪೆನೆಂಬಭಿ ಲಾಷೆಯೇಕೆ || ೨ || ಹುಟ್ಟು ಕುರುಡಗೆ ದೀಪವಿದೇತಕೆ | ಭ್ರಷ್ಟನಿಗೇತಕೆ

ಕುಲಧರ್ಮ || ಸೃಷ್ಟಿಯೊಳಧಮಗೆ ಪುರಂದರವಿಠಲನ | ಮುಟ್ಟಿ ಭಜಿಪೆ ನೆಂಬಭಿಲಾಷೆಯೇತಕೆ || ೩ ||

## ೨೯ ರಾಗ ಪಂತುವರಾಳಿ ಅಟತಾಳ

ಹರಿಹರರು ಹೇಗೆ ಸಮರು | ಹರಿಹರಭಕ್ತರೆ ಇದಕೆ ಸಾಕ್ಷಿ || ಪ || ಹರಿಯ ಮಂದಿರ ವೈಕುಂಠಸ್ಥಾನ | ಹರನ ಮಂದಿರ ಸ್ಮಶಾನ || ಹರಿಯ ಪಟ್ಟದ ರಾಣಿ ಸಿರಿದೇವಿ ಎಂಬರು | ಹರನ ಪಟ್ಟದ ರಾಣಿ ಗಿರಿಜೆ ಎಂಬರು|| ||೧|| ಹರಿಯು ಉಡುವೋದು ಪೀತಾಂಬರ | ಹರನುಡುವೋದು ಗಜ ಚರ್ಮಾಂಬರ || ಹರಿಯು ಪೂಸುವುದು ಶ್ರೀಗಂಧ ಕಸ್ತೂರಿ | ಹರನು ಪೂಸುವುದು ಸ್ಮಶಾನದ ಬೂದಿ ||೨|| ಹರಿಯ ಕೊರಳೊಳು ಕೌಸ್ತುಭರನ್ನ | ಹರನ ಕೊರಳೊಳು ಗರಳದ ಚಿಹ್ನ || ಹರಿಯ ಆಯುಧವು ವರ ಶಂಖ ಚಕ್ರ | ಹರನ ಆಯುಧವು ತ್ರಿಶೂಲ ಡಮರು ||೩|| ಹರಿಯ ಪರಿವಾರ ಬ್ರಹ್ಮಾದಿ ಸುರರು | ಹರನ ಪರಿವಾರ ಹೆಣನ ತಿಂಬುವರು || ಹರಿ ಹರಿ ಎಂಬೋರು ಸಿರಿವಂತರಾಗುವರು | ಹರ ಹರ ಎಂಬೋರು ಹತರಾಗುವರು ||೪|| ಹರಿಗೆ ವಾಹನನಾದ ಖಗರಾಜನು | ಹರಗೆ ವಾಹನ ಗೋರಾಜನು || ಪುರಂದರವಿಠಲಗೆ ಸರಸಿಜಾಸನ ಪುತ್ರ | ಹರ ಆಗಮೋಕ್ತ ಆದನು ಪೌತ್ರ ||೫||

## ೩೦ ರಾಗ ಮೋಹನ ಅಟತಾಳ

ವಿಷಯದ ವಿಚಾರ ಬಿಡು ವಿಹಿತಕರ್ಮವ ಮಾಡು | ವೈರಾಗ್ಯ ಭಾಗ್ಯ ಬೇಡು || ಪ || ವಿಷವೆಂದು ಕಾಮಕ್ರೋಧಗಳೆಲ್ಲನೀಡಾಡು | ಮನಣ ಮನವೆ ಮಾಧವನ್ನ ಕೊಂಡಾಡು || ಅ || ಅನುದಿನವು ಹರಿಕಥೆಯ ಕೇಳಿ ಸಂತೋಷಪಡು| ವಿನಯದಿ ಸಜ್ಜನರ ಕೂಡು | ಮನಮುಟ್ಟಿ ದುರಾಚಾರ ಮಾಳ್ಪರನು ನೀ ಕಾಡು| ಹಣ ಹೊನ್ನು ಪರಹೆಣ್ಣು ಹೆಂಚೆಂದು ನೋಡು|| || ೧ || ವೇದ ಶಾಸ್ತ್ರಾರ್ಥ ತತ್ತ್ವದ ವಿಚಾರವ ಮಾಡು | ಮಾಧವನ ಭಕ್ತಿ ಬೇಡು || ಪಾದದಿಂದಲಿ ತೀರ್ಥಯಾತ್ರೆಗಳ ನೀ ಮಾಡು| ಖೇದಪಡದನು- ದಿನದಿ ಸಂತೋಷ ಕೂಡು || ೨ || ನಂಬದಿರು ಈ ದೇಹ ಅಂಬುಗುಳ್ಳೆ

ಯಂತೆ । ನಂಬಿ ನೀ ಕೆಡಲು ಬೇಡ ॥ ಕೊಂಬುವರು ಬಂದರೆ ಕೊಡ ರೊಂದುರುವ್ವಿಯನು। ಅಂಬುಜಾಕ್ಷ ಪುರಂದರವಿಠಲನ್ನ ನೆನೆ ಮನವೆ ॥೩॥

## ೩೧ ರಾಗ ರೇಗುಪ್ತಿ ಅಟತಾಳ

ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ । ಫುಲ್ಲನಾಭ ನೀನಿದ್ದಲ್ಲಿ ಸೇರಿಸೆನ್ನ ॥ ॥ ಪ ॥ ಮರಣವನೊಲ್ಲೆ ಜನನವನೊಲ್ಲೆ । ದುರಿತ ಸಂಸಾರ ಕೋಟಲೆಯ ನಾನೊಲ್ಲೆ ॥ ಕರುಣದಿ ಕರುಗಳ ಕಾಯ್ದ ಗೋವಳ ನಿನ್ನ। ಚರಣಕಮಲದ ಸ್ಮರಣೆಯೊಳಿರಿಸೆನ್ನ ॥೧॥ ಜೆಂದ ಸಂಸಾರೆಂಬೊ ಬೇನೆ ಮಧ್ಯದಲಿ ನೊಂದೆನೊ ನಾ ಬಹಳ ಕರಕರೆಯಲ್ಲಿ ॥ ನಂದಗೋಪನ ಕಂದ ವೃಂದಾವನಪ್ರಿಯ । ಎಂದೆಂದು ನಿನ್ನ ಸ್ಮರಣೆಯೊಳಿರಿಸೆನ್ನ ॥ ೨ ॥ ಪುತ್ರಮಿತ್ರ ಕಳತ್ರ ಬಂಧುಗಳೆಂಬ । ಕತ್ತಲೆಯೊಳು ಸಿಲುಕಿ ಕಡು ನೊಂದೆನಲ್ಲ ॥ ಮುಕ್ತಿದಾಯಕ ಉಡುಪಿಯ ಕೃಷ್ಣರಾಯ । ಭಕ್ತವತ್ಸಲ ಶ್ರೀಪುರಂದರ ವಿಠಲ ॥ ೩ ॥

## ೩೨ ರಾಗ ಕಾಂಭೋಜಿ ಝಂಪೆತಾಳ

ಹರಿಯಧಿಕ ಹರನಧಿಕನೆಂದು ಬಡೆದಾಡದಿರಿ । ಹರಿಹರರ ಭಕುತರೇ ಇದಕೆ ಸಾಕ್ಷಿ॥ಪ॥ ಹರಿಯು ಬಾಗಿಲ ಕಾಯ್ದು ಬಲಿ ಭಾಗ್ಯವಂತನಾದ । ಹರನು ಬಾಗಿಲ ಕಾಯ್ದು ಬಾಣನಳಿದ ॥ ಹರಿಯೊಲಿದು ಭೀಮನಿಗೆ ಪರಿಪೂರ್ಣ ವರವಿತ್ತ । ಹರನೊಲಿದು ಜರಾಸಂಧ ಹತನಾದುದರಿಯ ॥೧॥ ಹರಿಯ ನೆನೆದು ಪ್ರಹ್ಲಾದ ಬಂದ ದುರಿತವ ಗೆದ್ದ । ಹರನ ನೆನೆದವನ ಪಿತ ಹತನಾದನು ॥ ಹರಿಯ ನೆನೆದು ವಿಭೀಷಣ ಪೂರ್ಣ ವರ ಪಡೆದ । ಹರನ ವರ ಪಡೆದ ರಾವಣ ಹತನಾದನರಿಯ ॥೨॥ ಹರನ ವರ ಪಡೆದ ಭಸ್ಮಾಸುರನು ಗರ್ವದಲಿ । ಹರನ ಶಿರದಲಿ ಕರವಿಡಲು ಬರಲು ॥ ಹರಿ ನೀನೆ ಗತಿಯೆಂದು ತ್ರಿಪುರಾರಿ ಮೊರೆಯಿಡಲು । ವರದ ಪುರಂದವಿಠಲ ಕಾಯ್ದನರಿಯ ॥ ೩ ॥

## ೩೩ ರಾಗ ಪೂರ್ವಿ ಕಲ್ಯಾಣಿ ಆದಿತಾಳ

ಹಿಡಕೋ ಬಿಡಬೇಡ । ರಂಗನ ಪಾದ ॥ ಪ ॥ ಹಿಡಕೋ ಬಿಡಬೇಡ ಕೆಡುಕ ಕಾಳಿಂಗನ । ಮಡುವಿನೊಳ್ಧುಮುಕಿ ಕುಣಿದಾಡೊ ಕೃಷ್ಣನ

ಪಾದ ॥ ಅ ॥ ಪುಟ್ಟಿದಾಗಲೆ ಇವ ದುರ್ಜನನೆನಿಸುತಲಿ । ಅಟ್ಟಿದರಾಗಲೆ ತಾಯ್ತಂದೆಯರು ॥ ಮುಟ್ಟಿ ತನಗೆ ಮೊಲೆಗೊಟ್ಟಳ ಮಡುಹಿದ । ದುಷ್ಟ ಕೃಷ್ಣನ ಹೋಗಬಿಟ್ಟರೆ ಸಿಕ್ಕನು ॥೧॥ ಒಪ್ಪೊತ್ತನ್ನಕೆ ನಡೆವರೆ ಭಂಡಿಯ। ನುಚ್ಚು ಮಾಡಿ ಕಾಲಲಿ ಒದ್ದ ॥ ಶಿಕ್ಷಿಸಲು ಜೋಡು ವೃಕ್ಷವ ತರಿದಿಟ್ಟ । ರಟ್ಟೆಗಾರನೆಂದು ಬೆಚ್ಚದೆ ಜಗದೊಳು ॥೨॥ ಇದ್ದಲ್ಲಿ ಇರನಿವ ಬುದ್ಧಿಯೆಳ್ಳಷ್ಟಿಲ್ಲ । ಹದ್ದನೇರಿ ತಿರುಗಾಡುವನು ॥ ಮೆದ್ದೆಯಾತಕೆ ಮಣ್ಣು ತೆಗೆ ಬಾಯ ನೆಂದರೆ । ಆದ್ಯಂತ ಜಗವನು ತೋರಿ ಅಂಜಿಸಿವನ ॥ ೩ ॥ ಮಕ್ಕಳೊಳಗೆ ಪುಂಡ ಮನೆಮನೆಗಳ ಹೊಕ್ಕು। ಸಕ್ಕರೆ ನೊರೆಹಾಲು ಸವಿಸವಿದು॥ ಬಿಕ್ಕಿನ ಮೇಲಿಟ್ಟು ಬೆಣ್ಣೆಯ ತಾ ಮೆದ್ದು । ಸಿಕ್ಕದೆ ಜಿಗಿದೋಡಿ ಪೋಗುವ ಕಳ್ಳನ ॥೪॥ ಸಾರ ಹೃದಯನಲ್ಲ ಭಾರಿಯ ಗುಣವಿಲ್ಲ। ಆರ ಮಾತನು ಇವ ಲೆಕ್ಕಿಸನು ॥ ನೀರೊಳಗಿಳಿದು ನಾರೇರ ಸೀರೆಯ ಕದ್ದು । ಹಾರಿ ಹೊನ್ನೆಯ ಮರವೇರಿದ ಕೃಷ್ಣನ ॥೫॥ ಕಾಳರಕ್ಕಸರೊಳು ಕದನ ಬೇಡೆಂದರೆ। ಹೇಳಿದ ಹಾಗೆ ಕೇಳುವನಲ್ಲ ॥ ಕೂಡೆ ಆಡುವ ಮಕ್ಕಳಂಜಿಕೊಂಡರಾಗ । ಗಾಳಿಯ ಮುರಿದಿಟ್ಟ ಗೈಯಾಳಿ ರಂಗನ ॥೬॥ ಜೀರಿಗೆ ಬೆಲ್ಲವ ಪಿಡಿದಂಬಿಕೆಯನು । ಸಾರಿಬಂದ ರುಕ್ಮಿಯನು ಕೊಂದು॥ ಹೋರಬೇಡೆಂದರೆ ರುಕ್ಮನ ಹೆಡಗಯ್ಯ। ತೇರಿಗೆ ಬಿಗಿದಂಥ ಚೋರಕೃಷ್ಣನ ಪಾದ ॥ ೭ ॥ ಆಟ್ಟ ಹಾಯುವ ಏಳು ಗೂಳಿಗಳನ್ನು । ಕಟ್ಟ ನತ್ರಾಜಿತಗೆ ರತ್ನವಿತ್ತು ॥ ಅಷ್ಟ ಮಹಿಷಿಯರ ಅರ್ತಿಯ ಸಲಿಸಿದ । ಸೃಷ್ಟಿಗೊಡೆಯ ಶ್ರೀಕೃಷ್ಣನ ಪಾದವ ॥ ೮ ॥ ಇರುಳೊಳು ಹೆಂಗಳ ಕೂಡಿ ಆಡುತ್ತಲಿ । ವರ ಯಮುನೆಯ ತೀರದಿ ನಿಂತ ॥ ಬರಿ ಮಾತಿಲ್ಲದಿನಾರು ಸಾವಿರ ತರಳೇರ । ಮರುಳುಮಾಡಿದ ಈ ಮದನ ಗೋಪಾಲನ ॥೯॥ ಫಕ್ಕನೆ ಮಧುರೆಗೆ ಪೋಗಿ ಬರುವೆನೆಂದು । ಅಕ್ಕಯ್ಯ ಗೋಪಿಗೆ ಪೇಳುತಲಿದ್ದ ॥ ಫಕ್ಕನೆ ಬಲರಾಮನೊಡಗೂಡಿ ರಥವೇರಿ । ಸಿಕ್ಕದೆ ಹೋಗುವ ಅಕ್ರೂರವರದನ ॥೧೦॥ ಆನೆಯ ಮಡುಹಿದ ಅಗಸನ ಕೆಡಹಿದ । ತಾನರಸಗೆ ತಂದ ಹೂವನೆ ಮುಡಿದ ॥ ಮಾನಿನಿ ಕುಬುಜೆ ಗೊಲಿದುಗಂಧ ಧರಿಸಿದ ಗಾನವಿನೋದಿ ಶ್ರೀಲಕುಮಿಯ ಅರಸನ ॥೧೧॥ ಮಲ್ಲರನೆಲ್ಲರ ಚೆಲ್ಲಾಡಿ ಕೆಡಹಿದ । ಬಿಲ್ಲು ಮುರಿದು ಮಾವನ ಮಡುಹಿ ॥ ನಿಲ್ಲದೆ ದೇವಕಿ ಸೆರೆಯನು ಬಿಡಿಸಿದ। ಫುಲ್ಲಲೋಚನ ಶ್ರೀಕೃಷ್ಣನ ಪಾದವ॥

||೧೨|| ನರಕುರಿಗಳನೆಲ್ಲ ಭರದಿ ರಕ್ಷಿಪುದಕೆ | ಪರಮಪಾವನ ನಾವು ಇದು ಸಾಲದೆ || ಕರಿ ಧ್ರುವ ಬಲಿ ಪಾಂಚಾಲಿಗೆ ವರವಿತ್ತ | ಪುರಂದರವಿಠಲನ ಚರಣಕಮಲವನು ||೧೩||

## ೩೪ ರಾಗ ನಾದನಾಮಕ್ರಿಯೆ ಆದಿತಾಳ

ಪಗಡಿ ಹಾಕೆ ಪೋರಿ | ತ್ರಿಗುಣಗಳೆಲ್ಲ ಮಾರಿ ||ಪ|| ನೇಮದ ಸೀರೆಯ ನುಟ್ಟು | ನಿನ್ನ | ಕಾಮದ ಕಚ್ಚೆಯ ಕಟ್ಟು || ಪ್ರೇಮದ ಸಜ್ಜನರೊಳಗೆ ನಿಂತು | ಮಾತನಾಡೋಣ ಬಾರೆ ||೧|| ಹಿಂದಕೆ ಹೋಗಲು ಬೇಡ | ನೀ| ಮುಂದಕೆ ಬಂದು ನಿಲ್ಲು || ಹಿಂದಿನ ಮುಂದಿನ ಹಂಬಲಬಿಟ್ಟು | ಒಂದಾಟ ಆಡೋಣ ಬಾರೆ ||೨|| ತೊಡೆಯ ತೆರೆಯಬೇಡ | ನಿ| ನ್ನೊಡೆಯನು ನಗುತಾನೆ|| ತೊಡೆಯ ತೆರೆದು ತೋರಿದರೆ | ನಾಚಿಕೊಂಬರಲ್ಲೆ || ೩ || ನೇಮ ನಿಷ್ಠೆಯ ನೀಗಿ | ಆದು | ಸಾಮದಾನವಾಗಿ || ಝಾಮ ಝಾಮ ಉಸಿರು ಬಿಡದೆ | ಆಟವಾಡೋಣ ಬಾರೆ || ೪ || ಪಗಡಿ ಎಂಬುದು ಅಲ್ಲ | ಪುಗಡಿ ಎಂಬುದು ಸೊಲ್ಲ || ಪಗಡಿ ಸೊಗಸು ಪುರಂದರ | ವಿಠಲನೊಬ್ಬ ಬಲ್ಲ ||೫||

## ೩೫ ರಾಗ ಬಾಗೇಶ್ರೀ ಕಂಡ ಛಾಪುತಾಳ

ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ | ಚಿಂತೆಯನು ಬಿಟ್ಟು ಶ್ರೀ ಹರಿಯ ನೆನೆ ಮನವೆ ||ಪ|| ದಿವ ರಾತ್ರಿಯೆನ್ನದೆ ವಿಷಯಲಂಪಟನಾಗಿ | ಸವಿಯೂಟಗಳನುಂಡು ಭ್ರಮಿಸಬೇಡ || ಅವನ ಕೊಂದಿವನ ಕೊಂದರ್ಥವನು ಗಳಿಸುವರೆ | ಜವನ ದೂತರು ಬರುವ ಹೊತ್ತು ನೀನರಿಯೆ || ೧ || ಮೊನ್ನೆ ಮದುವೆಯನಾದೆ ಕರೆವುದೊಂದೆರಡೆಮ್ಮ| ನಿನ್ನೆ ಕೊಂಡೆನು ಕ್ಷೇತ್ರ ಫಲವು ಬಹುದು || ಹೊನ್ನು ಹಣವುಂಟಿನಗೆ ಸಾಯಲಾರೆನು ಎನಲು | ಬೆನ್ನ ಬಿಡುವಳೆ ಮೃತ್ಯು ವ್ಯರ್ಥಜೀವಾತ್ಮ || ೨ || ಹೊಸ ಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ| ಬಸಿರಿ ಹೆಂಡತಿ ಮಗನ ಮದುವೆ ನಾಳೆ|| ಹಸನಾಗಿ ಇದೆ ಬದುಕು ಸಾಯಲಾರೆನು ಎನಲು | ಕುಸುರಿದರಿಯದೆ ಬಿಡರು ಯಮನವರು ಆಗ ||೩|| ಪುತ್ರ ಹುಟ್ಟಿದ ದಿವಸ ಹಾಲು ಊಟದ

ಹಬ್ಬ। ಮತ್ತೊಬ್ಬ ಮಗನ ಉಪನಯನ ನಾಳೆ ॥ ಅರ್ತಿಯಾಗಿದೆ ಬದುಕು ಸಾಯಲಾರೆನು ಎನಲು। ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದರಿಯೆ ॥೪॥ ಅಟ್ಟುಂಗೆಯುಣಲಿಲ್ಲ ಇಷ್ಟದರುಶನವಿಲ್ಲ । ಕೊಟ್ಟ ಸಾಲವ ಕೇಳ್ವ ಹೊತ್ತ ನರಿಯೆ ॥ ಕಟ್ಟಿ ತುಂಬಿದ ಮೇಲೆ ಕ್ಷಣಮಾತ್ರ ಇರಲಿಲ್ಲ । ಅಷ್ಟರೊಳು ಪುರಂದರವಿಠಲನೆನು ಮನವೆ ॥ ೫ ॥

## ೩೬ ರಾಗ ನಾದನಾಮಕ್ರಿಯೆ ಆದಿತಾಳ

ಉದರವೈರಾಗ್ಯವಿದು । ನಮ್ಮ । ಪದುಮನಾಭನಲ್ಲಿ ಲೇಶಭಕುತಿಯಿಲ್ಲ॥ ॥ಪ॥ ಉದಯಕಾಲದಲೆದ್ದು ಗದಗದ ನಡುಗುತ। ನದಿಯಲಿ ಮಿಂದೆವೆಂದು ಹಿಗ್ಗುತಲಿ ॥ ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು । ಬದಿಯ ಲ್ಲಿದ್ದವರಿಗಾಶ್ಚರ್ಯವ ತೋರುವ ॥ ಉದರ ॥೧॥ ಕಂಚುಗಾರನ ಬಿಡಾರ ದಂದದಿ । ಕಂಚು ಹಿತ್ತಾಳಿ ಪ್ರತಿಮೆಗಳ ನೆರಹಿ ॥ ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ । ವಂಚನೆಯಿಂದಲಿ ಪೂಜೆಯ ಮಾಡುವ ॥ ಉದರ॥ ॥೨॥ ಕರದಲಿ ಜಪಮಣಿ ಬಾಯಲಿ ಮಂತ್ರವು। ಅರಿವೆ ಮುಸುಕು ಮೋರೆಗೆ ಹಾಕಿ ॥ ಪರಸತಿಯರ ಗುಣ ಮನದಲಿ ಸ್ಮರಿಸುತ । ಪರಮ ವೈರಾಗ್ಯ ಶಾಲಿಯೆಂದೆನಿಸುವ ॥ ಉದರ ॥ ೩ ॥ ಬೂಟಕತನದಲಿ ಬಹಳ ಭಕುತಿ ಮಾಡಿ । ತನಗಿನ್ನು ಸರಿಯಾರಿಲ್ಲೆನಿಸಿ ॥ ನಾಟಕಸ್ತ್ರೀಯಂತೆ ಬಯಲ ಡಂಭವ ತೋರಿ । ಊಟದ ಮಾರ್ಗದ ಜ್ಞಾನವಿದಲ್ಲದೆ ॥ ಉದರ ॥ ೪ ॥ ನಾನು ಎಂಬುದು ಬಿಟ್ಟು ಜ್ಞಾನಿಗಳೊಡನಾಡಿ । ಏನಾದರು ಹರಿಪ್ರೇರಣೆ ಯೆಂದು ॥ ಧ್ಯಾನಿಸಿ ಮೌನದಿ ಪುರಂದರವಿಠಲನ । ಕಾಣದೆ ಮಾಡಿದ ಕಾರ್ಯಗಳೆಲ್ಲವು ॥ ಉದರ ॥ ೫ ॥

## ೩೭ ರಾಗ ಪೀಲು ಮಿಶ್ರಛಾಪುತಾಳ

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ । ಕಪಟನಾಟಕಸೂತ್ರಧಾರಿ ನೀನೆ॥ಪ॥ ನೀನೆ ಆಡಿಸದಿರಲು ಜಡ ಒನಕೆಯ ಬೊಂಬೆ। ಏನು ಮಾಡಲು ಬಲ್ಲುದು ತಾನೆ ಬೇರೆ ॥ ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು ।

ನೀನೆ ಮುಗ್ಗಿಸಲು ಮುಗ್ಗುವ ದೇಹದವನು ॥ ೧ ॥ ಒಂದೆಂಟು ಬಾಗಿಲ ಪಟ್ಟಣಕ್ಕೆ ತನ್ನ । ದೆಂದು ಇಪ್ಪತ್ತೆರು ಮನೆಯಾಳ್ಗಳ ॥ ತಂದು ಕಾವಲ ನಿಲಿಸಿ ಎನ್ನ ನೀ ಒಳಗಿಟ್ಟು । ಮುಂದೆ ಭವದಲಿ ಭವಣಿಪುದನ್ಯಾಯ ॥೨॥ ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ । ತಂತ್ರನೆಂದೆನಿಸಿ ಕೊಲಿಸುವರೆ ಹೇಳೋ ॥ ಕಂತುಪಿತ ಲಕ್ಷ್ಮೀಶ ಎಂತಾಡದಂತಾಹುದಾ । ನಂತಮೂರುತಿ ನಮ್ಮ ಪುರಂದರವಿಠಲ ॥೩॥

## ೩೮ ರಾಗ ಮುಖಾರಿ ಝಂಪೆತಾಳ

ಏಕೆ ಈ ದೇಹವನು ದಂಡಿಸುವೆ ವ್ಯರ್ಥ ॥ಪ॥ ಏಕಚಿತ್ತದಲಿ ಲಕ್ಷ್ಮೀ ಪತಿಯೆನ್ನದೆ ॥ ಅ ॥ ಸ್ನಾನವನು ಮಾಡಿ ನೀ ಧ್ಯಾನಿಸುವೆನೆಂದೆನುತ । ಮೌನದಲಿ ಕುಳಿತು ಬಕಪಕ್ಷಿಯಂತೆ॥ ಹೀನ ಬುದ್ಧಿಗಳ ಯೋಚಿಸಿ ಕುಳಿತು ಫಲವೇನು । ದಾನವಾಂತಕನ ಧ್ಯಾನಕೆ ಮೌನವುಂಟೆ ॥ ೧ ॥ ಜಪವ ಮಾಡುವೆನೆನುತ ಕಪಟ ಬುದ್ಧಿಯ ಗುಣಿಸಿ । ಗುಪಿತದಲಿ ಕುಳಿತು ಫಲ ವೇನು ನಿನಗೆ ॥ ಅಪರಿಮಿತಮಹಿಮ ನಾರಾಯಣ ಎಂದೆನಲು । ಸಫಲ ವಲ್ಲದೆ ಬೇರೆ ಜಪವು ಉಂಟೆ ॥೨॥ ಹಿಂದಜಾಮಿಳಗೆ ಮುಕುತಿಯು ನಾಮ ಮಾತ್ರದಲಿ । ಚಂದದಿಂ ಕರುಣಿಸಲಿಲ್ಲವೇನೊ ॥ ಸಂದೇಹವನು ಬಿಟ್ಟು ನೀನೊಂದು ಕ್ಷಣ ಬಿಡದೆ । ತಂದೆ ಪುರಂದರವಿಠಲಯೆನು ಕಂಡ್ಯ ಮನವೆ ॥ ೩ ॥

## ೩೯ ರಾಗ ಪಂತುವರಾಳಿ ಅಟತಾಳ

ಒಲ್ಲೆನೆ ವೈದಿಕ ಗಂಡನ ನಾ । ನೆಲ್ಲಾದರು ನೀರ ಧುಮುಕುವೆನಮ್ಮ॥ ॥ಪ॥ ಉಟ್ಟೇನೆಂದರೆ ಇಲ್ಲ ತೊಟ್ಟೇನೆಂದರೆ ಇಲ್ಲ। ಕೆಟ್ಟ ಸೀರೆಯ ನಾನುಡ ಲಾರೆನೆ ॥ ಹಿಟ್ಟು ತೊಳಿಸಿ ಎನ್ನ ರಟ್ಟೆಲ್ಲ ನೊಂದವು । ಎಷ್ಟೆಂತ ಹೇಳಲಿ ಕಷ್ಟದ ಒಗತನ ॥ ೧ ॥ ಕೃಷ್ಣಾಜಿನವನ್ನು ರಟ್ಟೆಲಿ ಹಾಕಿಕೊಂಡು । ಬೆಟ್ಟಲಿ ಗಿಂಡಿಯ ಹಿಡಿದಿಹನೆ॥ ದಿಟ್ಟತನದಿ ನಾನೆದುರಿಗೆ ಹೋದರೆ। ದೃಷ್ಟಿ ಯಿಂದಲಿ ಎನ್ನ ನೋಡನಮ್ಮ ॥ ೨ ॥ ನಿನ್ನಾಣೆ ಹುಸಿಯಲ್ಲ ಬಿನ್ನಾಣ

ಮಾತಲ್ಲ। ಕಣ್ಣು ಸನ್ನೆಯಂತು ಮೊದಲೆ ಇಲ್ಲ ॥ ಮುನ್ನಿನ ಜನ್ಮದಲಿ ಪುರಂದರವಿಠಲನ। ಚೆನ್ನಾಗಿ ಪೂಜೆಯ ಮಾಡಲಿಲ್ಲಮ್ಮ ॥೩॥

## ೪೦ ರಾಗ ಕಲ್ಯಾಣಿ ಛಾಪುತಾಳ

ಒಲ್ಲನೋ ಹರಿ ಕೊಳ್ಳನೋ ॥ಪ॥ ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ ॥ಅ॥ ಸಿಂಧು ಶತಕೋಟಿ ಗಂಗೋದಕವಿದ್ದು । ಗಂಧ ಸುಪರಿಮಳ ವಸ್ತ್ರವಿದ್ದು ॥ ಚಂದುಳ್ಳ ಆಭರಣ ಧೂಪದೀಪಗಳಿದ್ದು । ಬೃಂದಾವನ ಶ್ರೀತುಳಸಿಯಿಲ್ಲದ ಪೂಜೆ ॥೧॥ ದಧಿ ಕ್ಷೀರ ಮೊದಲಾದ ಅಭಿಷೇಕಗಳಿದ್ದು। ಮಧುಪರ್ಕ ಪಂಚೋಪಚಾರವಿದ್ದು ॥ ಮುದದಿಂದ ಮುದ್ದು ಶ್ರೀಕೃಷ್ಣನ ಪೂಜೆಗೆ । ಸದಮಲಳಾದ ಶ್ರೀತುಳಸಿಯಿಲ್ಲದ ಪೂಜೆ ॥೨॥ ಮಂತ್ರ ಮಹಾ ಮಂತ್ರ ಪುರುಷಸೂಕ್ತಗಳಿದ್ದು। ತಂತು ತಪ್ಪದೆ ತಂತ್ರಸಾರವಿದ್ದು ॥ಸಂತತ ಸುಖಸಂಪೂರ್ಣನ ಪೂಜೆಗ । ತ್ಯಂತ ಪ್ರಿಯಳಾದ ತುಳಸಿಯಿಲ್ಲದ ಪೂಜೆ॥ ॥ ೩ ॥ ಕಮಲ ಮಲ್ಲಿಗೆ ಜಾಜಿ ಸಂಪಿಗೆ ಕೇದಿಗೆ । ವಿಮಲ ಘಂಟೆ ಪಂಚ ವಾದ್ಯವಿದ್ದು ॥ ಅಮಲ ಪಂಚಭಕ್ಷ್ಯ ಪರಮಾನ್ನಗಳಿದ್ದು । ಕಮಲನಾಭನು ಶ್ರೀತುಳಸಿಯಿಲ್ಲದ ಪೂಜೆ॥೪॥ ಪೂಜೆಯ ಮಾಡದೆ ತುಳಸಿಮಂಜರಿಯಿಂದ। ಮೂಜಗದೊಡೆಯ ಮುರಾರಿಯನು ॥ ರಾಜಾಧಿರಾಜನೆಂಬ ಮಂತ್ರಪುಷ್ಪ ಗಳಿಂದ । ಪೂಜಿಸಿದರು ಒಲ್ಲ ಪುರಂದರವಿಠಲನು ॥ ೫ ॥

## ೪೧ ರಾಗ ಶಂಕರಾಭರಣ ಆದಿತಾಳ

ಕಡು ಕೃಪೆಯಿಂದಲಿ ಹರಿ ಒಲಿದವನಿಗೆ । ನಡೆ ನುಡಿ ಸತ್ಯವೆ ಸಾಕ್ಷಿ ॥ ದೃಢಭಕ್ತಿಯಿಂದಲಿ ಉಣಲಿಕ್ಕಿದವರಿಗೆ । ಷಡುರಸಾನ್ನವೆ ಸಾಕ್ಷಿ ॥ ೧ ॥ ಮಡದಿ ಮಕ್ಕಳಿಗೆ ಒಡವೆಯನೀಯದಗೆ। ಕಡು ದಾರಿದ್ರ್ಯವೆ ಸಾಕ್ಷಿ॥ ಪಡೆ ದೊಡವೆಯ ಧರ್ಮಕೆ ಈಯದವನ ಬಾಯಿ । ಬಿಡುವುದೆ ಪರರಿಗೆ ಸಾಕ್ಷಿ॥ ॥೨॥ ಅನ್ನದಾನವ ಮಾಡಿದ ಮನುಜ ದಿ । ವ್ಯಾನ್ನ ಉಂಬುವುದೆ ಸಾಕ್ಷಿ॥ ಅನ್ನದಾನವ ಮಾಡದವನು ಕಡು । ದೈನ್ಯಬಿಡುವುದೆ ಸಾಕ್ಷಿ॥೩॥ ಕನ್ಯಾ ದಾನವ ಮಾಡಿದವಗೆ ದಿವ್ಯ । ಹೆಣ್ಣಿನ ಭೋಗವೆ ಸಾಕ್ಷಿ॥ ಕನ್ಯಾದಾನವ

ಮಾಡದವನು ಹೆಣ್ಣು । ಹೆಣ್ಣೆಂದು ಒರಲುವುದೆ ಸಾಕ್ಷಿ॥೪॥ ವಸ್ತ್ರದಾನವ ಮಾಡಿದವನು ದಿವ್ಯ । ।ವಸ್ತ್ರವ ಹೊದೆವುದೆ ಸಾಕ್ಷಿ ॥ ವಸ್ತ್ರದಾನವ ಮಾಡ ದವನು ನಿರ। ವಸ್ತ್ರನಾಗಿಹುದೆ ಸಾಕ್ಷಿ॥ ಪುಣ್ಯತನದಿ ಪರಸ್ತ್ರೀಯರಳುಪಿವವ। ಹೆಂಡಿರ ಕಳೆವುದೆ ಸಾಕ್ಷಿ ॥ ೬ ॥ ಪರರಿಗೆ ಒಂದು ತಾನೊಂದುಂಬಗೆ । ಜ್ವರ ಗುಲ್ಮ ರೋಗವೆ ಸಾಕ್ಷಿ ॥ ಪರಿಪರಿಯಲಿ ಹಿರಿಯರ ದೂಷಿಸುವವ । ತಿರಿ ದುಂಬುವುದೆ ಸಾಕ್ಷಿ ॥೭॥ ಕ್ಷೇತ್ರದಾನವ ಮಾಡಿದ ಮನುಜಗೆ ಏಕ। ಚ್ಛತ್ರಾ ಧಿಪತ್ಯವೆ ಸಾಕ್ಷಿ॥ ಪಾತ್ರಾಪಾತ್ರವರಿತು ದಾನವ ಮಾಡಿವಗೆ ಸು। ಪುತ್ರರ ಪಡೆವುದೆಸಾಕ್ಷಿ॥೮॥ ಭಕ್ತಿಯನರಿಯದ ಅಧಮನಿಗೊಂದು। ಕತ್ತಲೆಮನೆಯೆ ಸಾಕ್ಷಿ ॥ ಮುಕ್ತಿಯ ಪಡೆವರು ಪುರಂದರವಿಠಲನ । ಭಕ್ತರಾಗಿರುವುದೆ ಸಾಕ್ಷಿ॥ ೯ ॥

## ೪೨ ರಾಗ ಧನ್ಯಾಸಿ ಆದಿತಾಳ

ಕರುಣಾಕರ ನೀನೆಂಬುವುದೇತಕೊ । ಭರವಸವಿಲ್ಲೆನಗೆ ॥ಪ॥ ಪರಿಪರಿ ಯಲಿ ನರಜನ್ಮವನಿತ್ತು । ತಿರುಗಿ ತಿರುಗಿ ಮನ ಕರಗಿಸುವುದ ಕಂಡು ॥ ॥ ಅ ॥ ಕರಿ ಧ್ರುವ ಬಲಿ ಪಾಂಚಾಲೆ ಅಹಲ್ಯೆಯ। ಪೊರೆದವ ನೀನಂತೆ ॥ ಅರಿತು ವಿಚಾರಿಸಿ ನೋಡಲದೆಲ್ಲವು । ಪರಿಪರಿ ಕಂತೆಗಳಂತಿದೆ ಕೃಷ್ಣ ॥೧॥ ಕರುಣಾಕರ ನೀನಾದರೆ ಈಗಲೆ । ಕರಪಿಡಿದೆನ್ನನು ಹರಿ ಕಾಯೊ ॥ ಸರಿಸಿ ಜಾಕ್ಷನೆ ಸರಸ ನೀನಾದರೆ। ದುರಿತಗಳೆನ್ನನು ಪೀಡಿಪುದುಂಟೆ ॥೨॥ ಮರಣ ಕಾಲದಲಿ ಅಜಮಿಳಗೊಲಿದೆ । ಗರುಡಧ್ವಜನೆಂಬ ನಾಮದಿಂದ ॥ ವರ ಬಿರುದುಗಳು ಉಳಿಯಬೇಕಾದರೆ । ತ್ವರಿತದಿ ಕಾಯೊ ಶ್ರೀ ಪುರಂದರ ವಿಠಲ ॥ ೩ ॥

## ೪೩ ರಾಗ ಭೈರವಿ ಅಟತಾಳ

ಕಾಯಲಾರೆನು ಕೃಷ್ಣ ಕಂಡುವರ ಬಾಗಿಲನು । ನಾಯಿಕುನ್ನಿಯಂತೆ ನರರ ಪೀಡಿಸುತ ॥ ಪ ॥ ಉದಯದಲಿಯೆದ್ದು ಸಂಧ್ಯಾವಿಧಿಗಳ ಬಿಟ್ಟು। ಪದುಮನಾಭನ ಸ್ಮರಣೆ ಮೊದಲಿಲ್ಲದೆ ॥ ಮುದದಿ ನಿನ್ನರ್ಚಿಸದೆ ನರರ ಸದ

ನವ ಪೊಕ್ಕು । ಒದಗಿ ಸೇವೆಯ ಮಾಡಿ ಅವರ ಬಾಗಿಲನು ॥ ೧ ॥ ಕಲ್ಲ ಕರಗಿಸಬಹುದು ಕಡಲೆ ಹುರಿಗಡಲೆಯೊಳು । ತೈಲವನು ತೆಗೆದಾದರುಣ್ಣ ಬಹುದು ॥ ಬಲ್ಲಿದರ ಮನಸು ಮೆಚ್ಚಿಸಲಾಲೆ ಪ್ರತಿದಿನದಿ । ಹಲ್ಲುಗಿರಿಗಿರಿದು ಹಂಬಲಿಸಿ ಬಾಯ ಬಿಡುತ ॥೨॥ ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ । ಭ್ರಾಂತಿಯೆಂದೆಂಬ ಹೆಬ್ಬಲೆಗೆ ಸಿಕ್ಕಿ ॥ ಅಂತ್ಯಮೊದಲನು ಕಾಣೆ ಅರಿಕೆ ನಿನಗಿನಿತೆಲ್ಲ ನಿ । ಶ್ಚಿಂತನಾಗಿರಿಸಯ್ಯ ಪುರಂದರವಿಠಲ ॥೩॥

## ೪೪ ರಾಗ ನವರೋಜು ಆದಿತಾಳ

ಡೊಂಕು ಬಾಲದ ನಾಯಕರೆ ನೀವೇನೂಟವ ಮಾಡಿದಿರಿ ॥ ಪ ॥ ಕಣಕಕುಟ್ಟೋ ಅಲ್ಲಿಗೆ ಹೋಗಿ । ಹಣಿಕಿ ಇಣಿಕಿ ನೋಡುವಿರಿ ॥ ಕಣಕ ಕುಟ್ಟೋ ಒನಕೆಲಿ ಬಡೆದರೆ । ಕೈಂ ಕುಂಯಿ ರಾಗವ ಮಾಡುವಿರಿ ॥ ೧ ॥ ಹುಗ್ಗಿ ಮಾಡೋ ಅಲ್ಲಿಗೆ ಹೋಗಿ । ತಗ್ಗಿ ಬಗ್ಗಿ ನೋಡುವಿರಿ ॥ ಹುಗ್ಗಿ ಮಾಡೋ ಸೌಟಲಿ ಬಡೆದರೆ। ಕೈಂ ಕುಂಯಿ ರಾಗವ ಮಾಡುವಿರಿ॥೨॥ ಹಿರೇಬೀದಿಯಲಿ ಓಡುವಿರಿ। ಕರೇಬೂದಿಯಲಿ ಹೊರಳುವಿರಿ॥ ಪುರಂದರವಿಠ್ಠಲ ರಾಯ ಈ ಪರಿ । ಪರಿಯಾಟದಿ ಸದಾ ಚರಿಸುವಿರಿ ॥ ೩ ॥

## ೪೫ ರಾಗ ಕಾಂಭೋಜಿ ಝಂಪೆತಾಳ

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ ಪ ॥ ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ॥ಅ॥ ಯಾರೇನು ಅಂದರೂ ಮೋರೆಯನು ತಿರುಹದಿರು। ಮೋರೆ ಮೇಲೆ ಕೈಯಿತ್ತಿ ಬಲ್ಲಳೆಂದೆಣಿಸಿ ॥ ವಾರಿಗೇವರ ಕೂಡಿ ನೀರನ್ನು ತರುವಾಗ । ವಾರೆಗಣ್ಣಿಲಿ ನೋಟ ನೋಡದಿರು ಕಂಡ್ಯ ॥೧॥ ಪರರ ಒಡವೆಯ ಕಂಡು ದುರುಳ ಮಾತಾಡದಿರು । ನೆರೆಹೊರೆಯರಿಗೆ ನೀನು ತಲೆವಾಗಿ ನಡೆಯೆ ॥ ಪರರ ಮಾತುಗಳಿಂದ ದುರುಳಳೆಂದು ಎಣಿಸಬೇಡ। ನೆರೆಹೊರೆಯರ ಕಂಡು ನೀ ಬದುಕು ಮಾಡಮ್ಮ ॥ ೨ ॥ ಭಂಗಾರದ ಪೇಟಿಯೊಳು ಅಂಗಡಿಗೆ ಹೋಗದಿರು । ಅಂಗನೇರಿಗೆ ಮಾನಭಂಗಾಗಿ ನಡೆಯೆ॥ ಅಂಗನೇರಿಗೆ ನಿನ್ನಂತರಂಗವ ಹೇಳದಿರು । ಭಂಗಾರವಸ್ತ್ರಗಳ ಮುಚ್ಚಿಕೊಳ್ಳಮ್ಮ ॥ ೩ ॥ ಹಾಕಿದ್ದು ನೀನುಂಡು ಬೇಕೆಂದು ಬೇಡದಿರು । ಸಾಕು

ಸಾಕು ಎಂಬ ನಾಚಿಕೆಯ ಹಿಡಿಯೆ ॥ ನಾಕುಮಂದಿಯರೊಡನೆ ಕೋಕೆ ಮಾತಾಡದಿರು । ಲೋಕದೊಳಿವಳೊಬ್ಬ ಮೂಕಿಯೆಂದೆನಿಸೆ ॥೪॥ ಇಷ್ಟರು ಅಂದರು ನಿಷ್ಠೂರವಾಡದಿರು । ಘಟ್ಟಿ ಮಾಡಮ್ಮ ನಿನ್ನ ಮನಸು ॥ ಸೃಷ್ಟಿ ಯೊಳಗೆ ನಮ್ಮ ಪುರಂದರವಿಠಲನ್ನ । ಶ್ರೇಷ್ಠನಾದ ಕೃಷ್ಣನ್ನ ತಂಗಿ ಯೆಂದೆನಿಸೆ ॥ ೫ ॥

## ೪೬ ರಾಗ ಮುಖಾರಿ ಝಂಪೆತಾಳ

ಆರೇನುಮಾಡುವರು ಆರಿಂದಲೇನಹುದು। ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು ॥ಪ॥ ಐದು ವರ್ಷದ ಹಸುಳೆ ವನವೆತ್ತ ತಪವೆತ್ತ । ಬೈದು ಮಲತಾಯಿ ಪಡವಿಗೆ ನೂಕಲು ॥ ಸುಡುವ ಕೋಪಾಗ್ನಿಯಲಿ ಪುರ ಹೊರಟು ಪೋಪಾಗ । ಐದೆ ಪಿತರುಗಳಿದ್ದು ಏನು ಮಾಡಿದರು ॥೧॥ ಪಾಪಿ ದುಶ್ಶಾಸ ದ್ರೌಪದಿಯ ಸೀರೆಯ ಸೆಳೆದು । ಕೋಪದಿಂ ಮಾನಭಂಗವ ಮಾಡಲು ॥ ಶ್ರೀಪತಿಯೆ ಕಾಯೆಂದು ಮೊರೆಯಿಡುವ ಸಮಯದಲಿ । ಭೂಪರೈವರು ಇದ್ದು ಏನು ಮಾಡಿದರು ॥೨॥ ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು । ಸೆಣಸಿ ಷಡುರಥರೊಡನೆ ಹೊಯ್ದಾಡಲು ॥ ಅಣಕವಿಲ್ಲದೆ ಕಾದುತಸುವಳಿದು ಪೋಪಾಗ। ತ್ರಿಣಯಸಖಪಾರ್ಥರಿದ್ದೇನು ಮಾಡಿದರು ॥ ೨ ॥ ನೃಪರೊಳಗೆ ಅತಿಶ್ರೇಷ್ಠ ಬಲವಂತ ಸಿರಿರಾಮ । ಅಪ ರಿಮಿತ ಶೌರಿ ಲಕ್ಷ್ಮಣದೇವರು ॥ ಚಪಲಾಕ್ಷಿ ಸೀತೆಯನು ಖಳನು ಕದ್ದೊ ಯ್ವಾಗ। ನಿಪುಣರಿವರಿದ್ದು ಇನ್ನೇನು ಮಾಡಿದರು ॥೪॥ ಬ್ರಹ್ಮಶಿರ ಶಿವನ ಕರವನು ಕಟ್ಟಿ ಕಾಡುತಿರೆ। ಸುಮ್ಮನೇ ಜಗವೆಲ್ಲ ತಿರುಗುತಿರಲು॥ ಬೊಮ್ಮ ಮೂರುತಿ ನಮ್ಮ ಪುರಂದರಾವಿಠ್ಠಲನೆ । ನಿಮ್ಮ ಆಜ್ಞೆಯ ಮೀರಿ ಬದುಕಿ ಬಾಳುವರೆ ॥ ೫ ॥

## ೪೭ ರಾಗ ಯಮುನಾಕಲ್ಯಾಣಿ ಅಟತಾಳ

ಪನ್ನಗಾದ್ರಿಪತಿ ನಮಗೆ ನೀ ಗತಿ। ಯೆಂಬುವ ಮತಿಯರಿತು ಈ ಸ್ಥಿತಿ॥ ವೈಕುಂಠವಾಸ ಪರಮಂದಹಾಸ । ಭಕ್ತರುಲ್ಲಾಸ ಲಕ್ಷ್ಮೀವಿಲಾಸ ॥ ೧ ॥ ಮಾನವವೇಷ ಮಂಜುಳಭಾಷ । ವಿನುತವಿಶೇಷ ಕೌಸ್ತುಭಭೂಷ ॥ ೨ ॥ ಶಂಕಿಸುತಿರಲು ಸಾಕುವ ಬಾಲ । ಸಂಖ್ಯೆಯು ಬಲ್ಲ ಪುರಂದರವಿಠ್ಠಲ ॥೩॥

## ೪೮ ರಾಗ ಕಾನಡ ರೂಪಕತಾಳ

ನಾ ನಿನ್ನ ಧ್ಯಾನದೊಳಿರಲು । ಸದಾ । ಹೀನಮಾನವರೇನು ಮಾಡ ಬಲ್ಲರೊ ರಂಗ ॥ಪ॥ ಮತ್ಸರಿಸುವರೆಲ್ಲ ಕೂಡಿ ಮಾಡುವುದೇನು । ಅಚ್ಯುತ ನಿನದೊಂದು ದಯೆಯಿರಲು ॥ ವಾತ್ಸಲ್ಯ ಬಿಡದಿರು ನಿನ್ನ ನಂಬಿದೆ ದೇವ । ಕಿಚ್ಚಿಗೆ ಇರುವೆ ಮುಚ್ಚುವುದೆ ಕೇಳೆಲೊ ರಂಗ ॥ ೧ ॥ ಧೂಳಿಲಿ ಕುದುರೆ ವೈಯಾರದಿ ಕುಣಿಯಲು । ಧೂಳು ರವಿಯ ಮೇಲೆ ಮುಸುಕುವುದೆ ॥ ತಾಳಿದವರಿಗೆ ವಿರುದ್ಧ ಲೋಕದಲುಂಟೆ । ಗಾಳಿಗೆ ಗಿರಿಯು ಅಲ್ಲಾಡ ಬಲ್ಲುದೆ ರಂಗ ॥೨॥ ಕನ್ನಡಿಯೊಳಗಿನ ಗಂಟು ಕಂಡು ಕಳ್ಳ । ಕನ್ನ ವಿಕ್ಕಲ ವನ ವಶವಹುದೆ ॥ ನಿನ್ನ ನಂಬಲು ಮುದ್ದು ಪುರಂದರವಿಠ್ಠಲ । ಚಿನ್ನಕೆ ಪುಟವನಿಟ್ಟಂತೆ ಅಹುದು ರಂಗ ॥ ೩ ॥

## ೪೯ ರಾಗ ಮುಖಾರಿ ಝಂಪೆತಾಳ

ಮೂಢ ಬಲ್ಲನೆ ಜ್ಞಾನ ದೃಢಭಕ್ತಿಯ । ಕಾಡಕಪಿ ಬಲ್ಲುದೇ ಮಾಣಿಕದ ಬೆಲೆಯ ॥ ಪ ॥ ಕೋಣ ಬಲ್ಲುದೆ ವೀಣೆ ನುಡಿಯುವ ಸುನಾದವನು । ಗೋಣಿ ಬಲ್ಲುದೆ ಎತ್ತಿನ ದುಃಖವ ॥ ಪ್ರಾಣ ತೊಲಗಿದ ದೇಹ ಕಿಚ್ಚಿಂದು ಬಲ್ಲುದೇ । ಕ್ಷೋಣಿಯೊಳು ಕುರುಡ ಬಲ್ಲನೆ ಹಗಲು ಇರುಳ ॥೧॥ ಬಧಿರ ಬಲ್ಲನೆ ಸುಸಂಗೀತ ಸ್ವಾರಸ್ಯವನು। ಚದುರ ನುಡಿಯಾಡಬಲ್ಲನೆ ಮೂಕನು॥ ಕ್ಷುಧೆ ಇಲ್ಲದಾ ಮನುಜ ಅಮೃತಾನ್ನ ಸವಿವಸನೆ । ಮಧುರ ವಚನವ ಬಲ್ಲನೇ ದುಷ್ಟ ಮನುಜ ॥೨॥ ಅಜ ಬರೆದ ಬರೆಹವನು ತೊಳೆಯಬಲ್ಲನೆ ಜಾಣ । ನಿಜಭಕ್ತಿ ಮುಕ್ತಿಸುಖವನು ಕೊಡುವಾ ॥ ಭುಜಗೇಂದ್ರಶಯನ ಸಿರಿಪುರಂದರವಿಠ್ಠಲನ । ಭಜಿಸಲರಿಯದವ ಬಲ್ಲನೆ ಮುಕ್ತಿಸುಖವ ॥ ೩ ॥

## ೫೦ ರಾಗ ಸಾವೇರಿ ಅಟತಾಳ

ಧರ್ಮವೇ ಜಯವೆಂಬ ದಿವ್ಯ ಮಂತ್ರ ॥ ಪ ॥ ಮರ್ಮವನ್ನರಿತು ಮಾಡಲುಬೇಕು ತಂತ್ರ ॥ಅ॥ ವಿಷವಿಕ್ಕಿದವಗೆ ಷಡ್ರಸವನುಣಿಸಲುಬೇಕು। ದ್ವೇಷಮಾಡಿದವನ ಪೋಷಿಸಲುಬೇಕು ॥ ಪುಸಿಯಾಡಿ ಕೆಡಿಸುವನ ಹಾಡಿ

ಹರಸಲುಬೇಕು । ಮೋಸಮಾಡುವನ್ನೆಸರು ಮಗನಿಗಿಡಬೇಕು ॥ ೧ ॥ ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು। ಬಂಧನದೊಳಿಟ್ಟವರ ಬೆರೆಯಬೇಕು॥ ಕೊಂದ ವೈರಿಯ ಮನೆಗೆ ನಡೆದು ಹೋಗಲುಬೇಕು। ಕುಂದೆಣಿಸುವವರ ಗೆಳೆತನ ಮಾಡಬೇಕು ॥ ೨ ॥ ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು । ಕಂಡು ಸಹಿಸದವರ ಕರೆಯಬೇಕು ॥ ಪುಂಡರೀಕಾಕ್ಷ ಶ್ರೀಪುರಂದರವಿಠ್ಠಲನ । ಕೊಂಡಾಡಿ ತಾ ಧನ್ಯನಾಗಬೇಕು ॥೩॥

## ೫೧ ರಾಗ ಕಾಂಭೋಜಿ ಝಂಪೆತಾಳ

ಶಕ್ತನಾದರೆ ನೆಂಟರೆಲ್ಲ ಹಿತರು ॥ ಪ ॥ ಅ । ಶಕ್ತನಾದರೆ ಅವರೆ ವೈರಿಗಳು ಲೋಕದಲಿ ॥ ಅ ॥ ಕಮಲ ಅರ್ಕನಲಿರುವ ಕಡು ನೆಂಟತನದಿಂದ । ವಿಮಲ ಜಲದೊಳಗೆ ಓಡಾಡುತಿಹುದು ॥ ಕ್ರಮಗೆಟ್ಟು ನೀರಿಂದ ತಡಿಗೆ ಬೀಳಲು ರವಿಯ । ಅಮಿತ ಕಿರಣಗಳಿಂದ ಕಂದಿ ಹೋಗುವುದು ॥ ೧ ॥ ವನಸುತ್ತಿ ಸುಡುವಾಗವಾಯು ಬೀಸಲು ಉರಿಯು । ಘನಪ್ರಜ್ವಲಿಸುತಿಹುದು ಗಗನಕಡರಿ ॥ ಮನೆಯೊಳಿಹ ದೀಪಕ್ಕೆ ಮಾರುತನು ಸೋಂಕಿದರು। ಘನಶಕ್ತಿಯುಡುಗಿ ತಾ ನಂದಿಹೋಗುವುದು ॥ ೨ ॥ ವರದ ಶ್ರೀಪುರಂದರವಿಠ್ಠಲನು ಒಲಿದಿರಲು । ಸರ್ವ ಜನರೆಲ್ಲ ಮೂಜಗದಿ ಹಿತರು ॥ ಕರಿಯ ಕಾಯಿದ ಹರಿಯ ಕರುಣ ತಪ್ಪಿದಮೇಲೆ । ಮರೆಯ ಹೊಕ್ಕರು ಕಾಯ್ವ ಮಹಿತರಾರಯ್ಯ ॥೩॥

## ೫೨ ರಾಗ ಪಂತುವರಾಳಿ ಆಟತಾಳ

ಸುಮ್ಮನೆ ಕಾಲವ ಕಳೆವರೆ। ಯಮ । ಧರ್ಮರಾಯನ ದೂತರೆಳೆಯರೆ॥ ॥ಪ॥ ನರಿ ನಾಯಿ ಜನ್ಮದಿ ಬಾರದೆ॥ ಈ । ನರಜನ್ಮದಲಿ ಬಂದು ಸೇರಿದೆ ॥ ಹರಿಯ ಸ್ಮರಣೆಯನು ಮಾಡದೆ । ಸುಮ್ಮ । ನಿರಲು ಪಾಪದ ವಿಷವೇರದೆ॥ ॥ ೧ ॥ ಬಾಲನಾಗಿದ್ದಾಗ ಬಹು ಲೀಲೆ । ಸ್ತ್ರೀ । ಲೋಲನಾಗಿ ಬಾಳಿದ ಮೇಲೆ ॥ ಮೂಳ ವೃದ್ಧಾಪ್ಯ ಬಂತಾಗಲೆ । ಮುಂದೆ। ಬಾಳುವುದೆಲ್ಲ ನೂಲ ಮಾಲೆ ॥ ೨ ॥ ಮಡದಿ ಮಕ್ಕಳ ಕೂಡಣ ಬಾಳು । ಬರಿದೆ । ಒಡಲಿಗಾಗಿ

ಚಿಂತನೆ ಕೇಳು ॥ ಬಿಡದೆ ಸಂಕೀರ್ತನೆ ಮಾಡೇಳು। ನೀ। ನುಡಿವ ನುಡಿಗಳೆಲ್ಲವು ಬೀಳು ॥ ೩ ॥ ಮನೆವಾರ್ತೆಯು ತರವಲ್ಲ। ಈ। ಮನುಜರ ಪಾಡೇನು ಘನವಲ್ಲ ॥ ವನಜಸಂಭವಗೇ ನಿಶ್ಚಯವಿಲ್ಲ। ಮುಂದೆ। ಹನುಮಂತ ಪಟ್ಟಕ್ಕೆ ಬಹನಲ್ಲ ॥ ೪ ॥ ಇಂದಿನ ಹಮ್ಮು ನಾಳೆಗೆ ಇಲ್ಲ। ಭವ। ಬಂಧನದೊಳು ನೀನಿರೆ ಸಲ್ಲ ॥ ಮುಂದಿನ ಪರಯರಿತವನಲ್ಲ। ಮೃತ್ಯು। ಬಂದಾಗ ಬಿಡಿಸಿಕೊಂಬುವರಿಲ್ಲ ॥ ೫ ॥ ಕರಣಂಗಳಾವಾಗ ಜರಿವುದೊ। ತನ್ನ। ಗರುವ ತನಗಾವಾಗ ಮುರಿವುದೊ ॥ ಹರಣ ತನ್ನಾವಾಗ ಮರೆವುದೊ। ಇನ್ನು। ಮರಣ ಕೊನೆಗಾವಾಗ ಬರುವುದೊ ॥ ೬ ॥ ಮರಣಕಾಲದಲಜಾಮಿಳನಾಗ। ತನ್ನ। ತರಳ ನಾಗರನೆಂದು ಕರೆದಾಗ ॥ ಕರುಣದಿ ವೈಕುಂಠಪದವಾಗ। ಇತ್ತ ಪುರಂದರವಿಠಲನ ನೆನೆ ಬೇಗ ॥ ೭ ॥

## ೫೩ ರಾಗ ಕಾಂಭೋಜಿ ಝಂಪೆತಾಳ

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ॥ ಪ ॥ ನಿಖಿಳರಕ್ಷಕ ನೀನೆ ವಿಶ್ವವ್ಯಾಪಕನೆ ॥ಅ॥ ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ। ಕವಿಗುರು ಶನಿಯು ಮಂಗಳನು ನೀನೆ ॥ ದಿನರಾತ್ರಿಯು ನೀನೆ ನವವಿಧಾನವು ನೀನೆ। ಭವರೋಗಹರ ನೀನೆ ಭೇಷಜನು ನೀನೆ ॥೧॥ ಪಕ್ಷಮಾಸವು ನೀನೆ ಪರ್ವಕಾಲವು ನೀನೆ। ನಕ್ಷತ್ರ ಯೋಗ ತಿಥಿ ಕರಣ ನೀನೆ ॥ ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ। ಪಕ್ಷಿವಾಹನ ದೀನರಕ್ಷಕನು ನೀನೆ ॥೨॥ ಋತುವತ್ಸರವು ನೀನೆ ವ್ರತ ಯುಗಾದಿಯು ನೀನೆ। ಕ್ರತು ಹೋಮ ಯಜ್ಞ ಸದ್ಗತಿಯು ನೀನೆ ॥ ಜಿತವಾಗಿ ಎನ್ನೊಡೆಯ ಪುರಂದರವಿಠ್ಠಲನೆ। ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮ ನೀನೆ ॥ ೩ ॥

## ೫೪ ರಾಗ ತೋಡಿ ಅಟತಾಳ

ನೀನೆ ಅನಾಥಬಂಧು। ಕಾರುಣ್ಯಸಿಂಧು ॥ಪ॥ ಮದಗಜವೆಲ್ಲ ಕೂಡಿದರೇನು। ಅದರ ವೇಳೆಗೆ ಒದಗಲಿಲ್ಲ ॥ ಮದನನಯ್ಯ ಮಧುಸೂದನ ಎನ್ನಲು। ಮುದದಿಂದಲಿ ಬಂದೊದಗಿದೆ ಕೃಷ್ಣ ॥೧॥ ಪತಿಗಳೈವರಿದ್ದರೇನು।

ಸತಿಯ ಭಂಗ ಬಿಡಿಸಲಿಲ್ಲ ॥ ಗತಿ ಮುಕುಂದ ಎನ್ನಲು । ಅತಿವೇಗದಿ ಅಕ್ಷಯ ವಿತ್ತೆ ಕೃಷ್ಣ ॥ ೨ ॥ ಶಿಲೆಯ ರಕ್ಷಿಸಿ ಕುಲಕೆ ತಂದೆ । ಬಲಿಗೆ ಒಲಿದು ಪದವಿಯನಿತ್ತೆ ॥ ಸುಲಭದಿ ಭಕ್ತರ ಸಲಹುವ ನಮ್ಮ । ಚೆಲುವ ಪುರಂದರವಿಠ್ಠಲರಾಯ ॥ ೩ ॥

## ೫೫ ರಾಗ ಕಾಂಭೋಜಿ ಝಂಪೆತಾಳ

ಬಿನ್ನಹಕೆ ಬಾಯಿಲ್ಲವಯ್ಯ । ಅನಂತ ಅಪರಾಧ ಎನ್ನಲ್ಲಿ ಇರಲಾಗಿ ॥ಪ॥ ಶಿಶುಮೋಹ ಸತಿಮೋಹ ಜನನಿ ಜನಕರ ಮೋಹ। ರಸಿಕ ಭ್ರಾತರ ಮೋಹ ರಾಜಮೋಹ॥ ಪಶುಮೋಹ ಭೂಮೋಹ ಬಂಧುವರ್ಗದ ಮೋಹ। ಅಸುರಾರಿ ನಿನ್ನ ಮರೆತೆನೊ ಕಾಯೊ ಹರಿಯೆ ॥೧॥ ಅನ್ನಮದ ಅರ್ಥ ಮದ ಅಖಿಲ ವೈಭವದ ಮದ। ಮುನ್ನ ಪ್ರಾಯದ ಮದವು ರೂಪಮದವು॥ ತನ್ನ ಸತ್ತ್ವದ ಮದವು ಧಾತ್ರಿ ವಶವಾದ ಮದ । ಇನ್ನು ತನಗೆದುರಿಲ್ಲವೆಂತೆಂಬ ಮದದಿಂದ ॥೨॥ ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ । ಅಷ್ಟು ದೊರಕಿದರು ಮತ್ತಷ್ಟರಾಸೆ ॥ ಕಷ್ಟ ಬೇಡೆಂಬಾಸೆ ಕಡು ಸುಖವ ಕಾಂಬಾಸೆ । ನಷ್ಟ ಜೀವನದಾಸೆ ಪುರಂದರವಿಠಲ ॥೩॥

## ೫೬ ರಾಗ ಶಂಕರಾಭರಣ ಅಟತಾಳ

ಮಣ್ಣಿಂದ ಕಾಯ ಮಣ್ಣಿಂದ ॥ಪ॥ ಮಣ್ಣಿಂದ ಸಕಲ ದರುಶನಗಳೆಲ್ಲ । ಮಣ್ಣಿಂದ ಸಕಲ ವಸ್ತುಗಳೆಲ್ಲ ॥ ಮಣ್ಣು ಬಿಟ್ಟವರಿಗೆ ಆಧಾರವಿಲ್ಲ । ಅಣ್ಣಗಳಿರೆಲ್ಲರು ಕೇಳಿರಯ್ಯ ॥ಅ॥ ಅನ್ನ ಉದಕ ಊಟವೀಯೋದು ಮಣ್ಣು । ಬಣ್ಣ ಭಂಗಾರ ಬೊಕ್ಕಸವೆಲ್ಲ ಮಣ್ಣು ॥ ಉನ್ನತವಾದ ಪರ್ವತವೆಲ್ಲ ಮಣ್ಣು । ಕಣ್ಣು ಮೂರುಳ್ಳನ ಕೈಲಾಸ ಮಣ್ಣು ॥೧॥ ದೇವರ ಗುಡಿ ಮಠ ಮನೆಯೆಲ್ಲ ಮಣ್ಣು । ಆವಾಗ ಅಡುವ ಮಡಕೆಯು ತಾ ಮಣ್ಣು ॥ ಕೋವಿದರಸರ ಕೋಟೆಗಳೆಲ್ಲ ಮಣ್ಣು । ಪಾವನ ಗಂಗೆಯ ತಡಿಯಲ್ಲ ಮಣ್ಣು ॥೨॥ ಭಕ್ತಭರಣ ಧಾನ್ಯ ಬೆಳೆವುದೆ ಮಣ್ಣು । ಸತ್ತವರನು ಹೂಳಿ ಸುಡುವುದೆ ಮಣ್ಣು ॥ ಉತ್ತಮವಾದ ವೈಕುಂಠವೆ ಮಣ್ಣು । ಪುರಂದರವಿಠಲನ್ನ ಪುರವೆಲ್ಲ ಮಣ್ಣು ॥೩॥

## ೫೭ ರಾಗ ಮುಖಾರಿ ಝಂಪೆತಾಳ

ಪಥ ನಡೆಯದಯ್ಯ ಪರಲೋಕಕ್ಕೈದುವರೆ ||ಪ|| ಮ| ನ್ಮಥನೆಂಬ ಕಳ್ಳ ಮಾರ್ಗವ ಕಟ್ಟಿ ಸುಲಿಯುತಿರೆ || ಅ || ಗಿಳಿವಿಂಡು ಕೋಗಿಲೆ ವಸಂತ ಮಾರುತ ಭ್ರಮರ | ಬಲವೆರಸಿ ಮದನ ಮಾರ್ಗವ ಕಟ್ಟಿಲು || ಬಲವುಳ್ಳ ಭಟರು ಬಲು ಸನ್ಯಾಸಿ ಯೋಗಿಗಳು | ಸುಲಿಸಿಕೊಂಡರು ಕೆಲರು ಸಿಕ್ಕಿದರು ಕೆಲರು || ೧ || ತನು ರೋಮಗಿಡವೃಕ್ಷತಳಿತ ಭುಜಲತೆ ಮೆರೆಯೆ | ಘನ ಸಿಂಹ ಖಗಮೃಗಗಳಟ್ಟಣಿಸುವ || ವನಿತೆಯರ ಕಾಯಕಾಂತಾರದಲಿ ದುರ್ಗಮ| ಸ್ತನಪರ್ವತದ ಕಣಿವೆಯಲಿ ಕಟ್ಟಿ ಸುಲಿಯುತಿರೆ ||೨|| ಕಾಳಗದೊಳಿದಿರಿಲ್ಲ ಸುರನರೋರಗರ ಕ | ಟ್ಟಾಳು ಮನ್ಮಥನ ಛಲದಂಕ ಬಿರುದು || ಪೇಳಲೆನ್ನಳವಲ್ಲ ಪುರಂದರವಿಠಲನ | ಆಳು ಸಂಗಡವಿದ್ದರವಗೆ ಭಯವಿಲ್ಲ ||

## ೫೮ ರಾಗ ಪಂತುವರಾಳಿ ಅಟತಾಳ

ವ್ಯಾಪಾರ ನಮಗಾಯಿತು | ಶ್ರೀಪತಿಪಾದಾರವಿಂದಸೇವೆಯೆಂಬೊ || ||ಪ|| ಹರಿಕರುಣವೆ ಅಂಗಿ ಗುರುಕರುಣ ಮುಂಡಾಸು | ಹರಿದಾಸರ ದಯವೆಂಬೊ ವಲ್ಲಿ || ಪರಮ ಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ| ದುರಾತ್ಮರಾದವರ ಎದೆ ಮೇಲೆ ನಡೆದಂಥ ||೧|| ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ | ನಾಲಿಗೆ ಎಂಬೋದು ಲೇಖನಿಯು || ಶ್ರೀಲೋಲನ ಕಥೆ ದಿವ್ಯ ನಾಮಂಗಳ | ಶೀಲ ಮನವಿ ಬರೆದು ಹರಿಗೆ ಒಪ್ಪಿಸುವಂಥ || ೨ || ಮುಂದಣ ಆಗಮ ಸಂಸಾರದ ಬಾಧೆ| ಎಂದೆಂದಿಗು ಅದರ ಭಯ ಬಿಟ್ಟಿತು|| ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ | ಸಂದಾಯವನು ಮಾಡಿ ಕತಬಿ ಹರಿಸಿಬಿಟ್ಟ ||೩|| ನುಡಿನುಡಿಗಾನಂದಬಾಷ್ಪ ರೋಮಾಂಚನ | ಮುಡುಪಿನೊಳಗೆ ಇಟ್ಟ ಕೈ ಜೀತವು || ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು | ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ ||೪|| ಕಂಡಕಂಡವರಿಗೆ ಕಾರ್ಪಣ್ಯವ ಪಟ್ಟು | ಮಂಡೆ ಅಡ್ಡಾಗಿ ನಾ ಬಳಲಲಿಲ್ಲ || ಪುಂಡರೀ

ಕಾಕ್ಷ ಶ್ರೀಪುರಂದರವಿಠಲನು । ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ ॥ ೫ ॥

### ೫೮ ರಾಗ ಶಂಕರಾಭರಣ ತ್ರಿಪುಟತಾಳ

ಹೀಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ । ನಾಗಶಯನನೆ ನಾರದವಂದ್ಯನೆ ದೇವ ॥ಪ॥ ಮಂಗಳಾಭಿಷೇಕಕೆ ಉದಕ ತರುವೆನೆನೆ । ಗಂಗೆಯುಂಗುಷ್ಟದಿ ಪಡೆದಿರುವೆ ॥ ಸಂಗೀತ ಕೀರ್ತನೆ ಪಾಡುವನೆಂದರೆ। ತುಂಬುರು ನಾರದರು ಪಾಡುತಿಹರೋ ದೇವ ॥ ೧ ॥ ಪುಷ್ಪವ ತಂದು ನಿನಗರ್ಪಿಸುವೆನೆಂದರೆ । ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ ॥ ಇಪ್ಪ ತೆತ್ತಿನಕೋಟಿ ದೇವರ್ಕಳದ । ನೊಪ್ಪಿ ನೈವೇದ್ಯ ನೀಡಲು ತೃಪ್ತನಾಗುವೆ ॥೨॥ ಕೋಟಿ ಸೂರ್ಯರ ಪ್ರಭೆ ಮಿಗಿಲಾದಾತನಿಗೊಂದು । ದೀಪವನು ಹಚ್ಚಿದರೆ ಬೆಳಕಹುದೆ ॥ ನಾಟಿ ಗಾಣದೆ ಲಕ್ಷ್ಮಿ ಉರಸ್ಥಳವಾಗಿರೆ । ಲೋಷ್ಠ ಕಾಸು ಎಂತು ಕಾಣಿಕೆ ನೀಡಲೊ॥೩॥ ಹಾಸಿಯಗೆನು ತಂದು ಹಾಸುವೆನೆಂದರೆ। ಶೇಷನ ಮೇಲೆ ನೀ ಪವಡಿಸಿರ್ಪೆ ॥ ಬೀಸಣಿಗೆಯನು ತಂದು ಬೀಸುವೆನೆಂದರೆ । ಬೀಸುತಿಹನು ಖಗ ತನ್ನ ಪಕ್ಕದಲಿ ॥೪॥ ನಿತ್ಯಗುಣಾರ್ಣವ ನಿಜಗುಣಪರಿಪೂರ್ಣ। ಸಚ್ಚಿದಾನಂದ ಸನಕಾದಿವಂದ್ಯ ॥ ಮುಕ್ತಿದಾಯಕ ನಮ್ಮ ಪುರಂದರವಿಠಲ । ಭಕ್ತಿದಾಯಕನೆಂದು ಸ್ತುತಿಸಿ ಕೊಂಡಾಡುವೆನೊ ॥ ೫ ॥

### ೫೯ ರಾಗ ಮಧ್ಯಮಾವತಿ ಆದಿತಾಳ

ರಾಮಮಂತ್ರವ ಜಪಿಸೊ ಹೇ ಮನುಜ ॥ಪ॥ ಆ ಮಂತ್ರ ಈ ಮಂತ್ರ ಜಪಿಸಿ ಕೆಡಲು ಬೇಡ । ಸೋಮಶೇಖರ ತನ್ನ ಭಾಮೆಗೆ ಪೇಳಿದ ಮಂತ್ರ॥ ॥ ಅ ॥ ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ । ಜಲಜಪಾಣಿ ನಿತ್ಯ ಜಪಿಪ ಮಂತ್ರ ॥ ಕಲುಷಪರ್ವತಕಿದು ಕುಲಿಶವಾಗಿಪ್ಪ ಮಂತ್ರ । ಸುಲಭದಿಂದಲಿ ಮೋಕ್ಷ ಸೂರೆಗೊಂಬುವ ಮಂತ್ರ ॥ ೧ ॥ ಮರುತಾತ್ಮಜ ನಿತ್ಯ ಸ್ಮರಣೆ ಮಾಡುವ ಮಂತ್ರ । ಸರುವ ಋಷಿಗಳಲ್ಲಿ ಸೇರಿದ ಮಂತ್ರ ॥ ದುರಿತಕಾನನಕಿದು ದಾವಾನಲ ಮಂತ್ರ । ಪೊರೆದು ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ॥ ೨ ॥ ಜ್ಞಾನನಿಧಿ ನಮ್ಮ ಆನಂದತೀರ್ಥರು । ಸಾನು

ರಾಗದಿ ನಿತ್ಯ ಸೇವಿಪ ಮಂತ್ರ ॥ ಭಾನುಕುಲಾಂಬುಧಿಸೋಮನೆನಿಪ ನಮ್ಮ । ದೀನರಕ್ಷಕ ಪುರಂದರವಿಠಲನ ಮಂತ್ರ ॥ ೩ ॥

## ೬೦ ರಾಗ ನಾದನಾಮಕ್ರಿಯೆ ಆದಿತಾಳ

ಯಾರು ಬಿಟ್ಟರು ಕೈಯ ನೀ ಬಿಡದಿರು ಕಂಡ್ಯ । ನಾರಾಯಣ ॥ ಸ್ವಾಮಿ ॥ ನೀ ಬಿಟ್ಟರೆ ಮುಂದಿನ್ನಾರು ಕಾಯ್ವರ ಕಾಣೆ । ನಾರಾಯಣ ॥ ೧ ॥ ಮುಂದೆ ನೋಡಿದರೆ ಹೆಬ್ಬಾವು ನುಂಗುತಲಿದೆ । ನಾರಾಯಣ ॥ ಸ್ವಾಮಿ ॥ ಹಿಂದೆ ನೋಡಿದರೆ ಹೆಬ್ಬುಲಿ ಬಾಯ್ಬಿಡುತಿದೆ । ನಾರಾಯಣ ॥ ॥ ೨ ॥ ನಂಬಿ ನಾ ಪಿಡಿದರೆ ಕೊಂಬೆಲ್ಲ ಮುರಿದಾವು । ನಾರಾಯಣ ॥ ಸ್ವಾಮಿ ॥ ತುಂಬಿದ ಹೊಳೆಯಲ್ಲಿ ಹರಿಗೋಲನೇರಿದೆ । ನಾರಾಯಣ ॥೩॥ ಶಿಶು ಅವತಾರದಿ ಪಶುಗಳ ನೀ ಕಾಯ್ದೆ । ನಾರಾಯಣ ॥ ಸ್ವಾಮಿ ॥ ದಶ ಅವತಾರಾದಿ ಚಕ್ರವ ತಾಳಿದೆ । ನಾರಾಯಣ ॥ ೪ ॥ ವಿಷದ ಕಾಳಿಂಗನ ಮಡುವ ಧುಮುಕಿ ಬಂದೆ । ನಾರಾಯಣ ॥ ಸ್ವಾಮಿ ॥ ವಸುಧೆಯೊಳಧಿಕ ಪುರಂದರವಿಠಲನೆ । ನಾರಾಯಣ ॥ ೫ ॥

## ೬೧ ರಾಗ ಪಂತುವರಾಳಿ ಅಟತಾಳ

ಮನೆಯೊಳಗಾಡೊ ಗೋವಿಂದ । ನೆರೆ । ಮನೆಗಳಿಗೇಕೆ ಪೋಗುವೆಯೊ ಮುಕುಂದ ॥ಪ॥ ನೊಸಲಿಗೆ ತಿಲಕವನಿಡುವೆ । ಅಚ್ಚ । ಹೊಸ ಬೆಣ್ಣೆಯ ನಿಕ್ಕಿ ಕಜ್ಜಾಯ ಕೊಡುವೆ। ಹೊಸ ಆಭರಣಗಳನಿಡುವೆ। ಮುದ್ದು। ಹಸುಳೆ ನಿನ್ನನು ನೋಡಿ ಸಂತೋಷವಡುವೆ ॥೧॥ ಅಣ್ಣಯ್ಯ ಬಲರಾಮ ಸಹಿತ । ನೀ । ನಲ್ಲಲ್ಲಿ ತಿರುಗಾಡುವುದೇನೊ ವಿಹಿತ ॥ ಹೆಣ್ಣುಗಳೊಕೊ ಸಂಗಾತ। ಎನ್ನ। ಬಿನ್ನಪವನು ಪರಿಪಾಲಿಸೊ ದಾತ ॥೨॥ ಚೋರನೆನಿಸಿಕೊಳಲೇಕೊ। ಲಕ್ಷ್ಮೀ । ನಾರಾಯಣನೆಂಬ ಬಿರದು ನಿನಗೇಕೊ ॥ ವಾರಿಜಾಕ್ಷರ ಕೂಟ ಸಾಕೊ । ನಮ್ಮ । ಪುರಂದರವಿಠಲ ನೀ ಮನೆಯೊಳಿರಬೇಕೊ ॥ ೩ ॥

## ೬೨ ರಾಗ ಶಂಕರಾಭರಣ ರೂಪಕತಾಳ

ಮರೆಯಬೇಡ ಮನವೆ ನೀನು । ಹರಿಯ ಚರಣವ ॥ ಅರುಣ ಕಿರಣ ಚರಣ ಶರಣ । ಪಾತಕ ಪಾವನ ॥ ಪ ॥ ಸಾಧು ಸಜ್ಜನ

ಸಂಗವ ಮಾಡಿ । ವೇದಶಾಸ್ತ್ರವನೋದು ನೀ ॥ ಮೋದದಿಂದಲಿ ವೇದ ಗಮ್ಯನ । ಪಾದಪಂಕಜ ಧ್ಯಾನಿಸೊ ॥ ೧ ॥ ಸತಿಯು ಸುತರು ಗತಿಯು ಎಂದು । ಮತಿಯು ಕೆಟ್ಟು ತಿರುಗಬೇಡ ॥ ಮತಿಯು ಕೆಟ್ಟು ಹೋದ ಮೇಲೆ । ಸತಿಯು ಸುತರು ಬರುವರೇನು ॥೨॥ ಮನುಜಜನ್ಮ ದುರ್ಲಭ ವಿದು । ಮಾಧವನ ಕೃಪೆಯಲಿ ಬಂದಿದೆ ॥ ಹೀನ ಜನರ ಕೂಡಿ ನೀನು । ಹಾನಿ ಮಾಡಿಕೊಳ್ಳಬೇಡ ॥ ೩ ॥ ಪಂಥ ಪಗಡೆಯಾಡಿ ನೀನು । ವ್ಯರ್ಥ ಕಾಲ ಕಳೆಯಬೇಡ ॥ ಅಂತಕನ ದೂತಕರಿಗೆ । ಲೇಶ ಕರುಣವಿಲ್ಲವಯ್ಯ ॥೪॥ ಯಾಗ ಯಜ್ಞ ಮಾಡಲೇಕೆ । ಯೋಗಿಯತಿಯು ಆಗಲೇಕೆ ॥ ನಾಗ ಶಯನ ನಾರದವಂದ್ಯನ । ಕೂಡಿ ಭಜನೆ ಮಾಡು ಬೇಗ ॥೫॥ ಗೋಪುರದ ಗೊಂಬೆಯಂತೆ । ಗ್ರಾಮ ಗೃಹ ರಕ್ಷಿಪೆನೆಂದು ॥ ತಾಪ ಪಡುತ ಹಗಲು ಇರುಳು । ತಾಮಸಜನರ ಕೂಡದೆ ॥ ೬ ॥ ಹರಿಯ ಸ್ಮರಣೆ ಮಾತ್ರದಿಂದ । ಘೋರ ದುರಿತವೆಲ್ಲ ನಾಶ ॥ ವರದ ಪುರಂದರವಿಠಲನ । ನಿರತ ಭಜನೆ ಮಾಡು ಬೇಗ ॥ ೭ ॥

## ೬೩ ರಾಗ ಶಂಕರಾಭರಣ ಅಟತಾಳ

ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ ॥ ಪ ॥ ಭಾಗವತರು ಕಂಡ ರೆತ್ತಿಕೊಂಡೊಯ್ವರೋ ॥ಅ॥ ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ। ಪರಮಾತ್ಮನ ಕಾಣದರಸುವರೋ ॥ ದೊರಕದ ವಸ್ತುವು ದೊರಕಿತು ತಮಗೆಂದು । ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರು ॥ ೧ ॥ ಅಗಣಿತ ಗುಣ ನಿನ್ನ ಜಗದ ನಾರಿಯರೆಲ್ಲ । ಹಗೆಯಾಗಿ ನುಡಿವರೊ ಗೋಪಾಲನೆ॥ ಮಗುಗಳ ಮಾಣಿಕ್ಯ ತಗಲಿತು ಕರಕೆಂದು । ಬೇಗದಿಂದಲಿ ಬಂದು ಬಿಗಿ ದಪ್ಪಿ ಕೊಂಬರೊ ॥೨॥ ದಿಟ್ಟ ನಾರಿಯರೆಲ್ಲ ಇಷ್ಟವ ಸಲಿಸೆಂದು। ಅಟ್ಟಟ್ಟಿ ಬೆನ್ನಿಂದೆ ತಿರುಗುವರೊ ॥ ಸೃಷ್ಟೀಶ ಪುರಂದರವಿಠ್ಠಲರಾಯನೆ ಇಷ್ಟಿಷ್ಟು । ಬೆಣ್ಣೆಯ ಕೊಟ್ಟೇನೊ ರಂಗಯ್ಯ ॥ ೩ ॥

## ೬೪ ಪಂತುವರಾಳಿ ಅಟತಾಳ

ಸುಜ್ಞೆಯಿಂದಾಳಬೇಕಣ್ಣ ॥ ಪ ॥ ಗಂಡ । ನಾಜ್ಞೆಯ ಮೀರಿ ನಡೆವ ಲಂಡ ಹೆಣ್ಣ ॥ ಅ ॥ ಅತ್ತೆ ಮಾವಗೆ ಅಂಜದವಳ । ತನ್ನ। ಉತ್ತಮ ಪುರು

ಷನ ಜರೆದು ನುಡಿವಳ ॥ ಭಕ್ತರು ಕಂಡು ಬಂಧಿಸಳ । ಸಡು ನೆತ್ತಿಯು ಚರ್ಮವ ಕೆತ್ತಬೇಕವಳ ॥೧॥ ಕೂಳು ಕೊಬ್ಬಿಲಿ ಉರಿವವಳ । ಗಂಡ । ಹೇಳಿದ ಮಾತ ಕೇಳದೆ ಮೀರುವವಳ ॥ ಸೂಳೆಯಂದದಿ ನಡೆವವಳ। ತಲೆ। ಬೋಳಿಸಿ ಕಸಹೆಡಿಗೆ ಹೊರಿಸಬೇಕವಳ ॥೩॥ ಹಟ್ಟಿ ಹಟ್ಟಿ ತಿರುಗುವವಳ। ತನ್ನ। ಗಟ್ಟಿತನದಲಿ ಮಾರುಮಲೆತವಳ ॥ ಬಟ್ಟೆ ಕುಚವ ತೋರಿಸುವಳ। ಹುಟ್ಟು। ಹುಟ್ಟಿಲಿ ಬಾಯೊಳು ಹೆಟ್ಟಬೇಕವಳ ॥೩॥ ನಲ್ಲರ ಕಂಡು ನಗುವವಳ । ತನ್ನ । ಬಲ್ಲಿದ ಗಂಡನ ಬೈದು ಕರೆವಳ ॥ ಮಲ್ಲರಂದದಿ ಹೋರುವವಳ । ಅವಳ । ಹಲ್ಲು ಮುರಿದು ಜಿಹ್ವೆ ಸೀಳಬೇಕವಳ ॥೪॥ ಎಂದೂ ಈ ಪರಿಯಲ್ಲಿರುವಳ । ಅವಳ । ಅಂಪಮಾಡುವದೇಕೆ ಬಿಡಬೇಕಿನ್ನವಳ ॥ ಒಂದಿಷ್ಟು ಗುಣವಿಲ್ಲದವಳ । ಶ್ರೀಪು । ರಂದರವಿಠಲರಾಯಗಲ್ಲವವಳ ॥೫॥

## ೬೫ ರಾಗ ಸೌರಾಷ್ಟ್ರ ಅಟತಾಳ

ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ ನಿಶ್ಚಯವೆಚ್ಚರಿಕೆ ॥ ಪ ॥ ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ ॥ಅ॥ ಪೊಡವಿಪನೊಲುಮೆಯ ಕಚು ನೆಚ್ಚಿ ಗರ್ವದಿ ನಡೆಯದಿರೆಚ್ಚರಿಕೆ॥ ಕೊಡನ ಅಂಧಕ ಪೂತ್ತು ನಡೆವಂತೆ ಅಧಿಕಾರ ಕಡೆಯಲಿ ಎಚ್ಚರಿಕೆ। ಕಡು ಚಳಕನು ತಾನೆನುತ್ತ ಪರರ ಅವಘಡಿಸದಿರೆಚ್ಚರಿಕೆ। ಬಡಬಗ್ಗರ ಬಾಯ ಬಡಿದು ಪಾಪದಿ ಹೆಜ್ಜೆ ಇಡಬೇಡ ಎಚ್ಚರಿಕೆ ॥ ೧ ॥ ದೊರೆ ಎನ್ನ ಬಲವು ಸುಸ್ಥಿರವೆಂದೆಲ್ಲರ ಹಗೆ ತರವಲ್ಲ ಎಚ್ಚರಿಕೆ। ಉರಗನ ಮುತ್ತಿ ಕಟ್ಟಿರುವೆಯು ಕೊರೆದಂತ ತೆರನಪ್ಪುದೆಚ್ಚರಿಕೆ। ಕರವ ಮುಗಿದು ಸಜ್ಜನರಿಗೆ ಶಿರ ಬಾಗಿ ಚರಿಸುತಿರೆಚ್ಚರಿಕೆ। ಸಿರಿಸೊಡರಿಗೆ ಗುರುಹಿರಿಯರ ಅವಮಾನ ಬಿರುಗಾಳಿ ಎಚ್ಚರಿಕೆ ॥೨॥ ಲೋಕಾಪವಾದಕೆ ಅಂಜಿ ನಡೆವುದು ವಿವೇಕ ಕೇಳೆಚ್ಚರಿಕೆ। ನಾಕೇಶಗಾದರು ಬಿಡದಪಕೀರ್ತಿ ಪರಾಕು ಕೇಳೆಚ್ಚರಿಕೆ ॥ ಕಾಕು ಜನರ ಚಾಡಿ ನೀ ಕೇಳಿ ಕೋಪೋದ್ರೇಕ ಬೇಡೆಚ್ಚರಿಕ। ಭೂಕಾಂತೆ ನಡನಡುಗುವಳು ನಿಷ್ಠುರವಾದ ವಾಕು ಬೇಡೆಚ್ಚರಿಕೆ ॥೩॥ ನಳಮಾಂಧಾತರೇನಾದರೆಂಬುವ ನೀ ತಿಳಿದು ನೋಡೆಚ್ಚರಿಕೆ। ಅಳಿವುದು ಕಾಯವು ಉಳಿವುದೊಂದೇ ಕೀರ್ತಿ ಇಳೆಯೊಳಗೆಚ್ಚರಿಕೆ ॥ ಅಳಲಿಸಿ ಪರರನು ಗಳಿಸಿ ತಂದರ್ಥವು ಉಳಿಯದು

ಎಚ್ಚರಿಕೆ। ಉಳಿದಲ್ಪ ಕಾಲವು ಧರ್ಮವ ಹಾದಿಯ ಹಳಿಯಬೇಡೆಚ್ಚರಿಕೆ ॥ ೪ ॥ ಪರಸತಿ ಧನ ಅಪಹರಿಸಲು ಸಿರಿ ಮೊಗದಿರುಹುವಳೆಚ್ಚರಿಕೆ। ನೆರೆ ಛಿದ್ರಕುಂಭದ ನೀರಿನಂತಾಯುಷ್ಯ ಸರಿಯುತಿದೆಚ್ಚರಿಕೆ॥ ಬರುವ ಹಾನಿ ವೃದ್ಧಿ ತನ್ನ ಕಾಲವ ಮೀರಲರಿಯದು ಎಚ್ಚರಿಕೆ ॥ ವರದ ಪುರಂದರವಿಠಲನ ಚರಣವ ಮರೆಯದಿರೆಚ್ಚರಿಕೆ ॥ ೫ ॥

## ೬೬. ರಾಗ ಶಂಕರಾಭರಣ ಅಟತಾಳ

ಕಂಡೆ ನಾ ಕನಸಿನಲಿ ಗೋವಿಂದನ ॥ ಪ ॥ ಕಂಡೆ ನಾ ಕನಸಿನಲಿ ಕನಕ ರತ್ನದ ಮಣಿಮಯ। ನಂದನ ಕಂದ ಮುಕುಂದನ ಚರಣವ ॥ಅ॥ ಅಂದುಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ। ಬಂದು ಕಾಳಿಂಗನ ಹೆಡೆಯ ನೇರಿ॥ ಧಿಂ ಧಿಮಿ ಧಿಮಿಕೆಂದು ತಾಳಗತಿಗಳಿಂದಾ। ನಂದದಿ ಕುಣಿವ ಮುಕುಂದನ ಚರಣವ ॥ ೧ ॥ ಉಟ್ಟ ಪೀತಾಂಬರ ಉಡಿಯ ಕಾಂಚಿಯ ದಾಮ। ತೊಟ್ಟ ಮುತ್ತಿನ ಹಾರ ಕೌಸ್ತುಭವು ॥ ಕಟ್ಟಿದ ವೈಜಯಂತೀ ತುಳಸೀ ವನಮಾಲೆ। ಇಟ್ಟ ದ್ವಾದಶನಾಮ ನಿಗಮಗೋಚರನ ॥೨॥ ಕಿರಿ ಬೆರಳಿನ ಮುದ್ರೆಯುಂಗುರ ಮುಂಗೈಯ। ಕರದಲ್ಲಿ ಕಂಕಣ ನಳಿದೋಳುಗಳ ॥ ವರ ಚತುರ್ಭುಜ ಶಂಖಚಕ್ರದಿ ಮೆರೆವನ। ನಿರತದಿ ಒಪ್ಪುವ ಕರುಣಾಮೂರುತಿಯ ॥೩॥ ಬಣ್ಣದ ತುಟಿ ಭಾವ ರಚನೆಯ ಸುಲಿಪಲ್ಲು। ಸಣ್ಣ ನಗೆಯ ನುಡಿ ಸವಿಮಾತಿನ॥ ಪುಣ್ಯಚರಿತ್ರನ ಪೊಳೆವ ಕಿರೀಟವ। ಕಣ್ಣು ಮನ ತಣಿಯುವ ಕಂಸಾರಿ ಕೃಷ್ಣನ॥ ೪ ॥ ಮಂಗಳ ವರ ತುಂಗಭದ್ರದಿ ಮೆರೆವನ। ಅಂಗಜಪಿತ ಶ್ರೀಲಕ್ಷ್ಮೀಪತಿಯ॥ ಶೃಂಗಾರಮೂರುತಿ ಪುರಂದರವಿಠಲನ। ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ॥೫॥

## ೬೭ ರಾಗ ಸುರುಟಿ ಆದಿತಾಳ

ನಾಚಿಕೆಗೊಳಬೇಡ। ಮನದಲಿ। ಯೋಚಿಸಿ ಕೆಡಬೇಡ॥ ಪ ॥ ನೀಚವೇನೊ ನಮ್ಮಚ್ಯುತನೋಲಗ। ಮೆಚ್ಚಿ ಕೊಟ್ಟಿದೆ ನಿನಗೊಚ್ಚಿನ ಪದವಿಯ ॥ಅ॥ ಹರಿ ಹರಿ ಎಂದೊದರೊ। ಹತ್ತಿದ। ಪಾಶಗಳಿಗೆ ಬೆದರೊ ॥

ನೀರಜಾಕ್ಷ ನಿರ್ಜರಪತಿ ಹರಿಯೆಂದು । ಚೀರಿ ಹಾರಿ ಭೋರಿಡುತಲಿ ಕುಣಿಯೊ ||೧|| ಯಾರ ಗೊಡವೆಯೇನೊ। ನರಕದ। ದಾರಿ ತಪ್ಪಿಪರೇನೊ। ಸಾರಿ ನಾರಿಗೆ ಸರ್ವೇಶನ ನಾಮವ । ಚೀರಿ ಚೀರಿ ಕೈಮುಗಿದು ಕೊಂಡಾಡೊ || ೨ || ಭಕ್ತಜನರ ಕೂಡೊ । ಭವ ಭಯ । ಬತ್ತಿಪ್ಪೆ... ನೋಡೋ || ಮುಕ್ತಿದಾಯಕ ಶ್ರೀಪುರಂದರವಿಠಲನ । ಭಕ್ತಿಯಿಂ... ನೀ ಪಾಡುತ ಕುಣಿಯೊ || ೩ ||

## ೬೮ ರಾಗ ಭೈರವಿ ಝಂಪೆತಾಳ

ಏಕೆ ಚಿಂತಿಸುತಿದ್ದಿ ಕೋತಿಮನವೆ ||ಪ|| ಲೋಕನಾಥನ ನೆನೆದು ಸುಖಿಯಾಗು ಮನವೆ || ಅ || ಹುಟ್ಟುವಾಗಾಪತ್ತಿಗಾರು ಚಿಂತಿಸಿದವರು । ಕಟ್ಟಕಡೆಯಲಿ ಲಯಕೆ ಯಾರ ಚಿಂತೆ || ನಟ್ಟನಡುವಿನ ಬಾಳಿಗೇಕೆ ಚಿಂತಿಸುತಿರುವೆ । ಹುಟ್ಟಿದವರಿಗೆ ಮೂರು ಬಟ್ಟಿಲ್ಲವೆ ಮರುಳೆ || ೧ || ನವಿಲಿಂಗೆ ಚಿತ್ರಪತ್ರವನಾರು ಬರೆದವರು । ಪವಳದಾ ಲತೆಗೆ ಕೆಂಪಿಟ್ಟವರು ಯಾರು|| ಸವಿಮಾತಿನರಗಿಣಿಗೆ ಹಸುರು ಬಳಿದವರಾರು । ಅವ ಮಾಡಿದವ ನಮ್ಮ ಮರೆತಿಹನೆ ಮರುಳೆ ||೨|| ಬಸಿರೊಳಗೆ ಶಿಶುವನು ಆದಾರು ಸಲಹಿದವರು । ವಸುಧೆಯನು ಬಸಿರೊಳಿಟ್ಟಿರುವರಾರು|| ಹಸಗೆಡದೆ ನಮ್ಮ ಶ್ರೀಪುರಂದರಾ ವಿಠ್ಠಲನ । ಬಿಸಜಪಾದವ ನಂಬಿ ಸುಖಿಯಾಗು ಮರುಳೆ || ೩ ||

## ೬೯ ರಾಗ ಸುರುಟಿ ಆದಿತಾಳ

ಬಂದದ್ದೆಲ್ಲ ಬರಲಿ । ಗೋ । ವಿಂದನ ದಯವೊಂದಿರಲಿ || ಪ || ಇಂದಿರೆ ರಮಣನ ಧ್ಯಾನವ ಮಾಡಲು । ಬಂದ ದುರಿತ ಬಯಲಾದುದಿಲ್ಲವೆ ||ಅ|| ಅರಗಿನ ಮನೆಯೊಳಗಂದು । ಪಾಂಡ । ವರನು ಕೊಲಬೇಕೆಂದು ! ದುರುಳ ಕೌರವ ಬಂದು । ಅತಿ । ಹರುಷದಲಿರುತಿರಲಂದು || ಹರಿಕೃಪೆಯವರಲ್ಲಿದ್ದ ಕಾರಣ ಬಂದ । ಘೋರ ದುರಿತ ಬಯಲಾದುದಿಲ್ಲವೆ ||೧|| ಆರು ಒಲಿಂ... ದಿರಲೆನ್ನ । ಮು । ರಾರಿ ಎನಗೆ ಪ್ರಸನ್ನ । ಹೋರುವ ದುರಿತ ಬನ್ನ । ನಿ । ವಾರಿಪ ಕರುಣಸಂಪನ್ನ || ಶ್ರೀರಮಣನ ಸಿರಿಚರಣಶರಣರಿಗೆ । ಕ್ರೂರ

ಯಮನು ಶರಣಾಗತನಲ್ಲವೆ ॥ ೨ ॥ ಸಿಂಗನ ಪೆಗಲೇರಿದವಗೆ । ಕರಿ । ಭಂಗವೇಕೆ ಮತ್ತವಗೆ । ರಂಗನ ಕೃಪೆಯುಳ್ಳವಗೆ । ಭವ । ಭಂಗಗಳೇತಕ್ಕವಗೆ ॥ ಮಂಗಳಮಹಿಮ ಪುರಂದರವಿಠಲ ಶು । ಭಾಂಗನ ದಯವೊಂದಿದ್ದರೆ ಸಾಲದೆ ॥ ೩ ॥

## ೭೦ ರಾಗ ಧನ್ಯಾಸಿ ಆದಿತಾಳ

ಹರಿನಾಮಕೀರ್ತನೆ ಅನುದಿನ ಮಾಳ್ಪಗೆ ನರಕಭಯಗಳುಂಟೆ ॥ ಪ ॥ ನಾಮವೊಂದೆ ಯಮನಾಳ್ಗಳನೊದೆದು ಅ । ಜಾಮಿಳನಿಗೆ ಸುಕ್ಷೇಮವಿತ್ತ ಹರಿ ॥ಅ॥ ಕೇಸರಿಗಂಜದ ಮೃಗವುಂಟೆ । ದಿ । ನೇಶನಿಗಂಜದ ತಮವುಂಟೆ॥ ವಾಸುದೇವ ವೈಕುಂಠ ಜಗನ್ಮಯ। ಕೇಶವ ಕೃಷ್ಣಾ ಎಂದುಚ್ಚರಿಸುತ ॥೧॥ ಕುಲಿಶಕ್ಕೆದುರಹ ಗಿರಿಯುಂಟೆ। ಬಲು । ಪ್ರಳಯ ಬಂದಾಗ ಜೀವಿಪರುಂಟೆ ॥ ಜಲಜನಾಭ ಗೋವಿಂದ ಜನಾರ್ದನ। ಕಲುಷಹರಣ ಕರಿರಾಜವರದನೆಂದು ॥ ೨ ॥ ಗರುಡನಿಗಂಜದ ಫಣಿಯುಂಟೆ । ದ । ಳ್ಳುರಿಯಲಿ ಬೇಯದ ತೃಣವುಂಟೆ ॥ ನರಹರಿ ನಾರಾಯಣ ದಾಮೋದರ । ಪುರಂದರವಿಠಲನೆಂದುಚ್ಚರಿಸುತ ॥ ೩ ॥

## ೭೧ ರಾಗ ಕಲ್ಯಾಣಿ ಅಟತಾಳ

ದಾರಿ ಯಾವುದಯ್ಯ । ವೈಕುಂಠಕ್ಕೆ । ಹಾದಿ ತೋರಿಸಯ್ಯ ॥ ಪ ॥ ದಾರಿ ಯಾವುದಯ್ಯ ,ದಾರಿ ತೋರಿಸಯ್ಯ ಆ । ಧಾರಮೂರುತಿ ನಿನ್ನ ಪಾದ ಸೇರುವುದಕ್ಕೆ ॥ಅ॥ ಬಲು ಭವದನುಭವದಿ । ಕತ್ತಲೆಯೊಳು । ಬಲು ಅಂಜುತೆ ನಡುಗಿ ॥ ಬಳಲುತ ತಿರುಗಿದೆ ಹಾದಿಯ ಕಾಣದೆ । ಹೊಳೆವಂಥ ದಾರಿಯ ತೋರೊ ನಾರಾಯಣ ॥ ೧ ॥ ಪಾಪ ಪೂರ್ವದಲ್ಲಿ । ಮಾಡಿದುದಕೆ । ಲೇಪವಾಗಿದೆ ಕರ್ಮ ॥ ಈ ಪರಿಯಿಂದಲಿ ನಿನ್ನ ನೆನಸಿಕೊಂಬೆ । ಶ್ರೀಪತಿ ಸಲಹೆನ್ನ ಭೂಪ ನಾರಾಯಣ ॥ ೨ ॥ ಇನ್ನು ನಾ ಜನಿಸಲಾರೆ । ಭೂಮಿಯಮೇಲೆ । ನಿನ್ನ ದಾಸನಾದೆನೊ ॥ ಪನ್ನಗಶಯನ ಶ್ರೀಪುರಂದರವಿಠಲ । ಇನ್ನು ಪುಟ್ಟಿಸದಿರೊ ಎನ್ನ ನಾರಾಯಣ ॥ ೩ ॥

## ೭೨ ರಾಗ ಸಾವೇರಿ ಅಟತಾಳ

ನಾರಾಯಣ ನಿನ್ನ ನಾಮದ ಸ್ಮರಣೆಯ । ಸಾರಾಮೃತವೆನ್ನ ಬಾಯಿಗೆ ಬರಲಿ ॥ ಬಾ ರಂಗ ॥ ಪ ॥ ಆಡುವಾಗ ನಲಿದಾಡುವಾಗಲಿ । ನೋಡುತ ನಿಂದು ಮಾತಾಡುವಾಗ ॥ ಕೇಡುತನದಿಂದ ಕೂಡಿ ಈ ಭವದೊಳು । ಮಾಡಿದ ಪಾಪವು ಓಡಿ ಹೋಗುವ ಹಾಗೆ ॥ ೧ ॥ ಉರಿ ಬಂದಾಗಲಿ ಛಳಿ ಬಂದಾಗಲಿ । ಗಡಗಡ ನಡುಗುತ್ತಿರುವಾಗಲಿ ॥ ಹರಿ ನಾರಾಯಣ ದುರಿತ ನಿವಾರಣ । ಇರುಳು ಹಗಲು ನಿನ್ನ ಸ್ಮರಣೆ ಮಾಡುವಂತೆ ॥೨॥ ಕಷ್ಟವಾಗಿರಲಿ ಉತ್ಕೃಷ್ಟವಾಗಿರಲಿ । ಇಷ್ಟಾರ್ಥಗಳೆಲ್ಲ ಕೂಡಿರಲಿ ॥ ಕೃಷ್ಣ ಕೃಷ್ಣ ಯೆಂಬಭೀಷ್ಟದ ನಾಮದ । ಅಷ್ಟಾಕ್ಷರಿ ಮಂತ್ರ ಜಪಿಸುವ ಹಾಗೆ ॥ ೩ ॥ ಕನಸಿನೊಳಾಗಲಿ ಮನಸಿನೊಳಾಗಲಿ । ಮನಸು ಕೆಟ್ಟಿರಲಿ ಮುನಿದಿರಲಿ ॥ ಜನಕಜಾಪತಿ ನಿನ್ನ ನಾಮದ ಸ್ಮರಣೆಯು । ಮನಸಿನೊಳಗೆ ಒಮ್ಮೆ ನೆನಸುವ ಹಾಗೆ ॥ ೪ ॥ ಸಂತತ ನಿನ್ನಯ ಸಾಸಿರನಾಮವೆನ್ನ । ಅಂತರಂಗದೊಳಗಿರುತಲಿ ॥ ಸಂತತ ವರದ ಶ್ರೀಪುರಂದರವಿಠಲ ಎ । ನ್ನಂತ್ಯಕಾಲದೊಳೊಮ್ಮೆ ನೆನಸುವ ಹಾಗೆ ॥ ೫ ॥

## ೭೩ ರಾಗ ಆನಂದಭೈರವಿ ಆದಿತಾಳ

ಎಂಥ ಪಾಪಿದೃಷ್ಟಿ ತಾಗಿತು । ಗೋಪಾಲಕೃಷ್ಣಗೆ । ಕೆಟ್ಟ ಪಾಪಿದೃಷ್ಟಿ ತಾಗಿತು ॥ ಪ ॥ ಶಿಶು ಹಸಿದನೆಂದು ಗೋಪಿ । ಮೊಸರು ಕುಡಿಸುತ್ತಿರಲು ನೋಡಿ ॥ ಹಸಿದ ಬಾಲರ ದೃಷ್ಟಿ ತಾಗಿ । ಮೊಸರು ಕುಡಿಯಲೊಲ್ಲನೆ ॥೧॥ ಕೃಷ್ಣ ಹಸಿದನೆಂದು ಗೋಪಿ । ಬಟ್ಟಲೊಳಗೆ ಕ್ಷೀರ ಕೊಡಲು ॥ ಕೆಟ್ಟ ಬಾಲರ ದೃಷ್ಟಿ ತಾಗಿ । ಕೊಟ್ಟ ಹಾಲು ಮುಟ್ಟನೆ ॥೨॥ ಚಿಣ್ಣ ಹಸಿದನೆಂದು ಗೋಪಿ । ಬೆಣ್ಣೆ ಕೈಯಲಿ ಕೊಡಲು ನೋಡಿ ॥ ಸಣ್ಣ ಬಾಲರ ದೃಷ್ಟಿ ತಾಗಿ । ಬೆಣ್ಣೆ ವಿಷಮವಾಯಿತೆ ॥೩॥ ಅಂಗಿ ಹಾಕಿ ಉಂಗುರವಿಟ್ಟು । ಕಂಗಳಿಗೆ ಕಪ್ಪನಿಟ್ಟು ॥ ಅಂಗಳದೊಳು ಆಡೊ ಕೃಷ್ಣಗೆ । ಹೆಂಗಳಾ ದೃಷ್ಟಿಯಿದೇನೋ॥೪॥ ಶಲ್ಲೆ ಉಡಿಸಿ ಮಲ್ಲೆ ಮುಡಿಸಿ। ಚೆಲ್ವ ಫಣೆಗೆ ತಿಲಕನಿಟ್ಟು॥ ವಲ್ಲಭ ಪುರಂದರವಿಠಲನ । ಫುಲ್ಲನೇತ್ರೇರು ನೋಡಿದರೇನೋ ॥ ೫ ॥

## ೭೪ ರಾಗ ಕಲ್ಯಾಣಿ ಅಟತಾಳ

ಅಂಜಿಕಿನ್ನ್ಯಾತಕಯ್ಯ । ಸಜ್ಜನರಿಗೆ! ಅಂಜಿಕಿನ್ನ್ಯಾತಕಯ್ಯ ॥ ಪ ॥ ಸಂಜೀವರಾಯರ ಸ್ಮರಣೆ ಮಾಡಿದಮೇಲೆ ॥ ಅ ॥ ಕನಸಿಲಿ ಮನಸಿಲಿ ಕಳವಳವಾದರೆ ॥ ಹನುಮನ ನೆನೆವರೆ ಹಾರಿ ಹೋಗದೆ ಪಾಪ ॥೧॥ ರೋಮರೋಮಕೆ ಕೋಟಿ ಲಿಂಗವುದುರಿಸಿದ॥ ಭೀಮನ ನೆನೆವರೆ ಬಿಟ್ಟು ಹೋಗದೆ ಪಾಪ ॥ ೨ ॥ ಪುರಂದರ ವಿಠಲನ ಪೂಜೆಯ ಮಾಡುವ ॥ ಗುರು ಮಧ್ವರಾಯರ ಸ್ಮರಣೆ ಮಾಡಿದವ ಮೇಲೆ ॥ ೩ ॥

## ೭೫ ರಾಗ ಕಾಂಭೋಜಿ ತ್ರಿಪುಟತಾಳ

ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ ॥ ಪ ॥ ಕಷ್ಟಗಳೆಲ್ಲವ ಪರಿಹರಿಸಿ ಮನ! ದಿಷ್ಟಾರ್ಥಗಳನೆಲ್ಲ ಕೊಟ್ಟು ರಕ್ಷಿಸುವಂಥ ॥ಅ॥ ಮಸ್ತಕದಲಿ ಮಾಣಿಕದ ಕಿರೀಟ । ಕಸ್ತುರಿತಿಲಕದಿಂದೆಸೆವ ಲಲಾಟ ॥ ಶಿಸ್ತಿಲಿ ಕೊಳಲನೂದುವ ಓರೆನೋಟ । ಕೌಸ್ತುಭ ಎಡಬಲದಲಿ ಓಲಾಟ ॥೧॥ ಮುಖಮುಖಿಸುವ ಸೊಬಗಿನ ಸುಳಿಗುರುಳು! ಚಿಗುರು ತುಳಸಿ ವನಮಾಲೆಯ ಕೊರಳು॥ ಬಗೆಬಗೆ ಹೊನ್ನುಂಗುರನಿಟ್ಟ ಬೆರಳು । ಸೊಗಸಿನ ನಾಭಿಯ ತಾವರೆಯರಳು ॥೨॥ ಉಡಿದಾರ ಒಡ್ಯಾಣ ನಿಖಿಲಾಭರಣ॥ ಉಡುಗೆ ಪೀತಾಂಬರ ರವಿಶತಕಿರಣ ॥ ಕಡಗ ನೂಪುರ ಗೆಜ್ಜೆಗಳನಿಟ್ಟ ಚರಣ । ಒಡೆಯ ಶ್ರೀಪುರಂದರ ವಿಠಲನ ಕರುಣ ॥ ೩ ॥

## ೭೬ ರಾಗ ಕೇದಾರಗೌಳ ತ್ರಿಪುಟತಾಳ

ನಿನಗಾರು ಸರಿಯಿಲ್ಲ! ಎನಗನ್ಯ ಗತಿಯಿಲ್ಲ॥ ನಿನಗೂ ಎನಗೂ ನ್ಯಾಯ ಹೇಳುವರಿಲ್ಲೋ ॥ ಪ ॥ ಒಂದೇ ಗುಡಿನೊಳಿದ್ದು ಒಂದು ಕ್ಷಣವಗಲದೆ । ಎಂದೆಂದು ನಿನ್ನನು ಪೊಂದಿರುವೆ ॥ ಬಂಧ ವಿಷಯಗಳಿಗೆನ್ನನೊಪ್ಪಿಸುವುದು! ಇಂದು ನಿನಗೆ ಇದು ಉಚಿತವಲ್ಲವೊ ದೇವ ॥೧॥ ಪರಸತಿಗಳುಕಲು ಪರಮ ಪಾಪಿಷ್ಠನೆಂದು । ಪರಿಪರಿ ನರಕಕ್ಕೆ ಸೇರಿಸುವೆ ॥ ಪರಸತಿಯು ರೊಲುಮೆ ನಿನಗೆ ಒಪ್ಪಿತೊ ದೇವ । ದೊರೆತನಕಂಜಿ ನಾ ಶರಣೆಂಬೆನಲ್ಲದೆ

||೨|| ನಿನ್ನ ಧ್ಯಾನವನು ನಾ ನಿನ್ನ ಪ್ರೇರಣೆಯಿಂದ । ಅನ್ನಂತ ಕರ್ಮವ ನಾ ಮಾಡಿದೆ || ಇನ್ನಾದರು ಎನ್ನ ದಯದಿಂದ ನೋಡಯ್ಯ। ಪನ್ನಗಶಯನನೆ ಪುರಂದರ ವಿಠಲ || ೩ ||

## ೭೭ ರಾಗ ನಾರವಿ ಏಕತಾಳ

ದಾಸರ ನಿಂದಿಸಬೇಡ ಮನುಜ । ಹರಿ । ದಾಸರ ನಿಂದಿಸಬೇಡ || ಪ || ರಾಮರ ನಿಂದಿಸಿ ರಾವಣ ಕೆಟ್ಟ। ವಿಭೀಷಣಗಾಯಿತು ಪಟ್ಟ|| ಭೂಮಿಯ ಲೋಭದಿ ಕೌರವ ಕೆಟ್ಟ । ಧರ್ಮಗೆ ರಾಜ್ಯವ ಬಿಟ್ಟ || ೧ || ಉಡಿಯಲ್ಲಿ ಕೆಂಡವ ಕಟ್ಟಿಕೊಂಡರೆ । ಸುಡದಲೆ ಬಿಡುವುದೇನಣ್ಣ || ಪೊಡವಿಯ ಜನರಿಗೆ ಬಡತನ ಬಂದರೆ । ಬಿರುನುಡಿ ಆಡದಿರಣ್ಣ ||೨|| ದೇವಕಿ ಸೆರೆಯನು ಬಿಡಿಸಿದ ದಾಸರು । ನರರೇನ್ಸೈ ಈ ಜಗದೊಳು || ಭಾವಜನಯ್ಯನ ಭಕುತರ ಸೇವಿಸೆ । ಪಾವನ ಮಾಡುವ ಪುರಂದರವಿಠಲ || ೩ ||

## ೭೮ ರಾಗ ಕಾಂಭೋಜಿ ಝಂಪೆತಾಳ

ಹೂವ ತರುವರ ಮನೆಗೆ ಹುಲ್ಲ ತರುವ || ಪ || ಅವ್ವ ಲಕುಮೀರಮಣ ಇವಗಿಲ್ಲ ಗರುವ ||ಅ|| ಒಂದು ದಳ ಶ್ರೀತುಳಸಿ ಬಿಂದು ಗಂಗೋದಕವ । ಇಂದಿರಾರಮಣಗರ್ಪಿತವೆನ್ನಲು || ಒಂದೆ ಮನದಲಿ ಸಿಂಧುಶಯನ ಮುಕುಂದ ಎನೆ। ಎಂದೆಂದು ವಾಸಿಪನಾ ಮಂದಿರದೊಳಗೆ||೧|| ಪರಿಪರಿಯ ಪುಷ್ಪಗಳ ಪರಮಾತ್ಮಗರ್ಪಿಸಿ । ಪರಿಪೂರ್ಣನೆಂದು ಪೂಜೆಯನು ಮಾಡೆ || ಪರಮ ಆಸಕ್ತಿಯಲಿ ಸೇವೆಯನು ಮಾಡಿದರೆ। ಸರಿಭಾಗ ಕೊಡುವ ತನ್ನರ ಮನೆಯೊಳಗೆ ||೨|| ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು। ಪುಂಡರೀಕಾಕ್ಷ ಹುಲ್ಲನು ತಿನಿಸಿದ || ಅಂಡಜವಾಹನ ಶ್ರೀ ಪುರಂದರವಿಠಲನು । ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು ||೩||

## ೭೯ ರಾಗ ಮಧ್ಯಮಾವತಿ ಆದಿತಾಳ

ದಯಮಾಡೊ ದಯಮಾಡೊ । ರಂಗ । ದಯಮಾಡೊ ನಿನ್ನ ದಾಸ ನಾನೆಂದು || ಪ || ಹಲವು ಕಾಲದಿಂ ನಿನ್ನ ಹಂಬಲ ಎನಗೆ || ಒಲಿದು

ಪಾಲಿಸಬೇಕು ವಾರಿಜನಾಭ || ದಯ || ೧ || ಇಹಪರಗತಿ ನೀನೆ ಇಂದಿರಾ ರಮಣ || ಸಹಾಯ ನಿನ್ನದೆ ಸರ್ವದಾ ತೋರಿ ಕರುಣ || ದಯ || ೨ || ಕರಿರಾಜವರದನೆ ಕಾಮಿತಫಲದ|| ಪುರಂದರವಿಠಲನೆ ಹರಿಸಾರ್ವಭೌಮ|| ದಯ || ೩ ||

## ೮೦ ರಾಗ ಮುಖಾರಿ ಅಟತಾಳ

ಋಣವೆಂಬ ಸೂತಕವು ಬಹು ಬಾಧೆಪಡಿಸುತಿದೆ || ಪ || ಗುಣನಿಧಿಯೆ ನೀನೆನ್ನ ಋಣವ ಪರಿಹರಿಸೋ ||ಅ|| ಕೊಟ್ಟವರು ಬಂದೆನ್ನ ನಿಷ್ಠುರಂಗಳ ನಾಡಿ । ಕೆಟ್ಟ ಬೈಗಳ ಬೈದು ಮನವಣಿಯಲು || ದಿಟ್ಟತನವನು ಬಿಟ್ಟು ಕಳೆಗುಂದಿದೆನಯ್ಯ । ಸೃಷ್ಟಿಗೊಡೆಯನೆ ಎನ್ನ ಋಣವ ಪರಿಹರಿಸೋ || ೧ || ಅವನ ಒಡವೆಯ ತಂದು ದಾನಧರ್ಮವ ಮಾಡೆ । ಅವನಿಗಲ್ಲದೆ ಪುಣ್ಯ ಇವಗ್ಯಾವುದು|| ಅವನ ಒಡವೆಗಳಿಂದ ತೀರ್ಥಯಾತ್ರೆಯ ಮಾಳ್ಪ । ಇವನ ಜೀವನ ಬಾಡಿಗೆತ್ತಿನಂದದಲಿ ||೨|| ಆಳಿದೊಡೆಯನ ಮಾತು ಕೇಳಿ ನಡೆಯಲು ಬಹುದು । ಊಳಿಗವ ಮಾಡಿ ಮನದಣಿಯ ಬಹುದು || ಕಾಳಗದಿ ಪೊಕ್ಕು ಕಡಿದಾಡಿ ಜಯಿಸಲು ಬಹುದು । ಪೇಳಲಳವಲ್ಲ ಋಣದವಗೊಂದು ಸೊಲ್ಲ||೩|| ಹೆತ್ತ ಸೂತಕ ಹತ್ತು ದಿನಗಳಿಗೆ ಪರಿಹಾರ । ಮೃತ್ಯು ಸೂತಕವು ಹನ್ನೊಂದು ದಿನಕೆ || ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ । ಎತ್ತ ಹೋದರು ಬಿಡದೆ ಬೆನ್ನಟ್ಟಿ ಬಹುದು ||೪|| ಬಂಧುಬಳಗದ ಮುಂದೆ ಬಹುಮಾನವು ಹೋಗಿ। ಅಂದವಳಿದೆನೊ ಈ ವಿಧ ಋಣದೊಳು|| ಇಂದಿರಾರಮಣ ಶ್ರೀಪುರಂದರವಿಠಲನೆ । ಇಂದೆನ್ನ ಋಣವ ಪರಿಹರಿಸಯ್ಯ ದೊರೆಯೆ || ೫ ||

## ೮೧ ರಾಗ ಆನಂದಭೈರವಿ ಅಟತಾಳ

ನೀನೇ ದಯಾಳೋ ನಿರ್ಮಲಚಿತ್ತ ಗೋವಿಂದ । ನಿಗಮಗೋಚರ ಮುಕುಂದ || ಪ || ಜ್ಞಾನಿಗಳರಸ ನೀನಲ್ಲದೆ ಜಗಕಿನ್ನು । ಮಾನದಿಂದಲಿ ಕಾಯ್ವ ದೊರೆಗಳ ನಾ ಕಾಣೆ ||ಅ|| ನಾನಾವಾಂತಕ ದೀನಜನಮಂದಾರನೆ|

ಧ್ಯಾನಿಪರ ಮನಸಂಚಾರನೆ ॥ ಮೌನವಾದೆಸು ನಿನ್ನ ಧ್ಯಾನಾನಂದದಿ ಈಗ । ಸಾನುರಾಗದಿ ಕಾಯೊ ಸನಕಾದಿವಂದ್ಯ ॥೧॥ ಬಗೆಬಗೆಯಲಿ ನಿನ್ನ ನುತಿಪೆನೊ ನಗಧರ। ಖಗಪತಿವಾಹನನೆ ॥ ಮಗುವಿನ ಮಾತೆಂದು ನಗುತ ಕೇಳಿ ನೀನು । ಬೇಗದಿಂದಲಿ ಕಾಯೊ ನಾಗರಶಯನನೆ ॥೨॥ ಮಂದರಧರ ಅರವಿಂದಲೋಚನ ನಿನ್ನ । ಕಂದನೆಂದೆಣಿಸೊ ಎನ್ನ ॥ ಸಂದೇಹವೇಕಿನ್ನು ಸ್ವಾಮಿ ಮುಕುಂದನೆ । ಬಂದೆನ್ನ ಕಾಯೊ ಶ್ರೀಪುರಂದರವಿಠಲನೆ ॥೩॥

## ೬೨ ರಾಗ ಮುಖಾರಿ ಝಂಪೆತಾಳ

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ । ಶ್ರೀಹರಿಯ ಸ್ಮರಣೆಯನು ಬಲ್ಲವರು ಹೇಳಿ ॥ಪ॥ ಶೀಲವನು ಕೈಗೊಂಡು ನಡೆಸದಾತನೆ ಹೊಲೆಯ । ಪೇಳಿದ ಹರಿಕಥೆಯ ಕೇಳದವ ಹೊಲೆಯ ॥ ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ । ಸೂಳೆಯನು ಕಾಮಿಸುವ ಶುದ್ಧ ಹೊಲೆಯ ॥ ೧ ॥ ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ। ಲಂಡತನದಲಿ ನಡೆವ ಭಂಡ ಹೊಲೆಯ ॥ ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ । ಹೆಂಡತಿಯ ಇಚ್ಛೆಯವ ಹೇಡಿ ಹೊಲೆಯ ॥೨॥ ಇದ್ದಾಗ ದಾನಧರ್ಮವ ಮಾಡದವ ಹೊಲೆಯ । ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ ॥ ಬದ್ಧವಾದ ನಯ ನುಡಿಯು ಇಲ್ಲದಾತನೆ ಹೊಲೆಯ । ಶುದ್ಧ ತಾನೆಂಬಾತ ಶುಂಠ ಹೊಲೆಯ ॥ ೩ ॥ ಆಸೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ । ಲೇಸು ಉಪಕಾರಗಳ ಮಾಡದವ ಹೊಲೆಯ ॥ ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ । ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ ॥ ೪ ॥ ಅರಿತು ಆಚಾರವನು ನಡೆಸದಾತನೆ ಹೊಲೆಯ । ಪರಸತಿಗೆ ಅಳುಕದವ ಪಾಪಿ ಹೊಲೆಯ ॥ ಗುರುಹಿರಿಯರನು ನಮಿಸದಾತನೆ ಹೊಲೆಯ । ಪುರಂದರವಿಠ್ಠಲನ ನೆನೆಯದವ ಹೊಲೆಯ ॥೫॥

## ೬೩ ರಾಗ ಬೇಹಾಗ್ ಝಂಪೆತಾಳ

ಆರೇನು ಮಾಡುವರು ತಾ ಪಾಪಿಯಾದರೆ ॥ ಊರೆಲ್ಲ ನೆಂಟರು ಉಣಬಡಿಸುವರ ಕಾಣೆ ॥ ಪ ॥ ಬಾಯಾರಿ ಹೋದರೆ ಬಾವಿ ಜಲ ಬತ್ತಿತು ।

ತಾಯಿ ಸೋದರರೆಂದು ಹಾರೈಸಿದರೆ। ಆಂತಾಸದಿಂದಲಿ ಕಣ್ಣಿಗೆ ತೋರದೆ। ಮಾಯದಿಂದಲಿ ದೂರ ನಡೆಯುವರು ಜಗದಿ ॥ ೧ ॥ ಹಸಿದು ನೆಂಟರ ಮನೆಗೆ ಉಣಲಿಕ್ಕೆ ಪೋದರೆ। ಹಸಿವರಿತು ಬಡಿಸುವವರ ಕಾಣೆ॥ ರಸದಾಳಿ ಕಬ್ಬು ಮೆಲಲೆಂದು ಹೋದರೆ । ವಿಷವಾಗಿ ತೋರುತಿದೆ ಪ್ರಾರಬ್ಧ ಬಲ ದಿಂದ ॥೨॥ ಗಿಡದ ನೆರಳು ಎಂದು ಅಡಿಗೆ ಹೋದರೆ ಮರವು । ಘಡಘಡನೆ ಉರುಳಿ ಕೆಂಡಗಳುಗುಳ್ವುದು'। ಮಡದಿ ಮಕ್ಕಳು ಎನ್ನ ರಕ್ಷಿಪರು ಎಂದರೆ । ಹಿಡಿದು ಬಂಧಿಪರು ತವ್ಮೊಡಲ ಗತಿಯೇನೆಂದು ॥ ೩ ॥ ಕಷ್ಟಪಡಲಾರೆ ನಾ ಕಾನನದೊಳಿರಲಾರೆ । ನಿಷ್ಠುರವು ಬಂದ ಕಡೆ ನಿಲಲಾರೆನೊ ॥ ಕಷ್ಟ ಪಡು ಮಗನೆಂದು ಎನ್ನ ಜನನಿಯು ಹೆತ್ತು । ನಿಷ್ಠುರದಿಂದಲಿ ಎರೆದಳೋ ಏನೋ ॥೪॥ ಮನಕೆ ಬಾರದ ಹೆಣ್ಣು ಮನೆಗೆ ಹಬ್ಬಿದ ಬಳ್ಳಿ । ಗುಣವಿಲ್ಲದ ಮನುಜ ಸಂಗ ಸಮವೊ ॥ ಹಣೆಯ ಬರಹದ ವಶದಿ ದಣಿಯುತಿದ್ದರು ಮುಂದೆ । ಬಿನುಗು ಭವ ಬಿಡಿಸೆ ಪುರಂದರವಿಠಲನೆನ್ನಿರೋ ॥ ೫ ॥

## ೮೪ ರಾಗ ರಾಗ ಸಾವೇರಿ ತ್ರಿಪುಟತಾಳ

ನಾ ಮಾಡಿದ ಕರ್ಮ ಬಲವಂತವಾದರೆ। ನೀ ಮಾಡುವುದೇನೊ ದೇವ॥ ॥ ಪ ॥ ಸಾಮಾನ್ಯವಲ್ಲವಿದು ಬ್ರಹ್ಮ ಬರೆದ ಬರೆಹ । ನೇಮದಿಂದಲಿ ಎನ್ನ ಫಣೆಯಲ್ಲಿ ಬರೆದುದಕೆ ॥ಅ॥ ಅತಿಥಿಗಳಿಗೆ ಅನ್ನ ಕೊಟ್ಟವನಲ್ಲ ಪರ । ಸತಿ ಯರ ಸಂಗಗಳ ಬಿಟ್ಟವನಲ್ಲ ॥ ಮತಿಹೀನ ನಾನಾಗಿ ಮರುಳಾಗಿದ್ದೆನೊ ದೇವ । ಗತಿ ಯಾವುದಿನ್ನು ಗರುಡಗಮನ ಕೃಷ್ಣ ॥೧॥ ಅನ್ನಪಾನಂಗಳಿಗೆ ಅಗ್ರಗಣ್ಯನಾಗಿ । ಸ್ನಾನ ಜಪ ಸಂಧ್ಯಾನ ತಪವ ನೀಗಿ ॥ ದಾನವಾಂತಕ ನಿನ್ನ ಧ್ಯಾನವ ಮಾಡದೆ। ಶ್ವಾನನಂತೆ ಮನೆಮನೆ ತಿರುಗುತಲಿದ್ದೆ ॥ ೨ ॥ ಇನ್ನಾದರೂ ನಿನ್ನ ದಾಸರ ಸಂಗವಿತ್ತು । ಮನ್ನಿಸಿ ಸಲಹಯ್ಯ ಮನ್ಮಥ ಜನಕ॥ ಅನ್ಯರೊಬ್ಬರ ಕಾಣೆ ಆದರಿಸುವರಿಲ್ಲ । ಪನ್ನಗಶಯನ ಶ್ರೀಪುರಂ ದರವಿಠಲ ॥೩॥

## ೮೫ ನಾದನಾಮಕ್ರಿಯೆ ಅಟತಾಳ

ದಾಸನ ಮಾಡಿಕೋ ಎನ್ನ । ಸ್ವಾಮಿ । ಸಾಸಿರನಾಮದ ವೇಂಕಟ ರಮಣ ॥ಪ॥ ದುರುಬುದ್ಧಿಗಳನೆಲ್ಲ ಬಿಡಸೊ । ನಿನ್ನ । ಕರುಣಕವಚವೆನ್ನ

ಹರಣಕ್ಕೆ ತೊಡಿಸೊ ॥ ಚರಣಸೇವೆ ಎನಗೆ ಕೊಡಿಸೋ । ಅಭಯ । ಕರ ಪುಷ್ಪವನೆನ್ನ ಶಿರದಲ್ಲಿ ಮುಡಿಸೊ ॥ ೧ ॥ ದೃಢಭಕ್ತಿ ನಿನ್ನಲ್ಲಿ ಬೇಡಿ । ನಾ । ನಡಿಗೆರಗುವೆನಯ್ಯ ಅನುದಿನ ಪಾಡಿ ॥ ಕಡೆಗಣ್ಣಲೇಕೆನ್ನ ನೋಡಿ । ಬಿಡುವೆ। ಕೊಡು ನಿನ್ನ ಧ್ಯಾನವ ಮನ ಶುಚಿ ಮಾಡಿ ॥೨॥ ಮರೆಹೊಕ್ಕವರ ಕಾವ ಬಿರುದು । ಎನ್ನ । ಮರೆಯದೆ ರಕ್ಷಣೆಮಾಡಯ್ಯ ಪೊರೆದು ॥ ದುರಿತ ಗಳೆಲ್ಲವ ತರಿದು । ಸಿರಿ । ಪುರಂದರವಿಠ್ಠಲ ಎನ್ನನು ಪೊರೆದು ॥೩॥

## ೮೬ ರಾಗ ಮುಖಾರಿ ಝಂಪೆತಾಳ

ಪಾಪಿ ಬಲ್ಲನೆ ಪರರ ಸುಖದುಃಖವ। ಕೋಪಿ ಬಲ್ಲನೆ ಶಾಂತ ಸುಗುಣದ ಘನವ ॥ ಪ ॥ ಕತ್ತೆ ಬಲ್ಲುದೆ ಹೊತ್ತ ಕಸ್ತುರಿಯ ಪರಿಮಳವ । ಮೃತ್ಯು ಬಲ್ಲಳೆ ವೇಳೆ ಹೊತ್ತೆಂಬುದ ॥ ತೊತ್ತು ಬಲ್ಲಳೆ ಮಾನಾಪಮಾನವೆಂಬು ದನು । ಮತ್ತೆ ಬಲ್ಲುದೆ ಬೆಕ್ಕು ಹರಿಯ ಮೀಸಲವ ॥೧॥ ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ। ಶ್ವಾನ ಬಲ್ಲುದೆ ರಾಗಭೇದಂಗಳ ॥ ಮೀನು ಬಲ್ಲುದೆ ನೀರು ಸೌಳು ಸ್ವಾದೆಂಬುದನು। ಹೀನ ಬಲ್ಲನೆ ಸುಗುಣ ದುರ್ಗುಣ ವನು ॥ ೨ ॥ ಬಾಳೆ ಬಲ್ಲುದೆ ಮರಳಿ ಫಲವಾಗೊ ಸುದ್ದಿಯನು । ಸೂಳೆ ಬಲ್ಲಳೆ ಗೆಳೆಯಗಿಹ ಬಡತನ ॥ ಕೇಳಬಲ್ಲನೆ ಕಿವುಡನೇಕಾಂತ ಮಾತುಗಳ। ಹೇಳ ಬಲ್ಲನೆ ಮೂಕ ಕನಸ ಕಂಡುವನು॥೩॥ ಕಾಗೆ ಬಲ್ಲುವೆ ಒಳ್ಳೆ ಕೋಗಿ ಲೆಯ ಸ್ವರವನ್ನು । ಗೂಗೆ ಬಲ್ಲುದೆ ಹಗಲ ಹರಿದಾಟವ ॥ ಜೋಗಿ ಬಲ್ಲನೆ ಮನೆಯೊಳಿಲ್ಲ ಉಂಟೆಂಬುದನು । ರೋಗಿ ಬಲ್ಲನೆ ಮೃಷ್ಟಾನ್ನದ ರುಚಿಯ ॥ ೪ ॥ ಹೇಡಿ ಬಲ್ಲನೆ ರಣದ ಸಾಹಸದ ಶೌರ್ಯವನು । ಕೋಡಗವು ಬಲ್ಲುದೆ ರತ್ನದ ಬೆಲೆಯ ॥ ಬೇಡಿದುದ ಕೊಡಲು ಪುರಂದರವಿಠಲನಲ್ಲದೆ। ನಾಡ ದೈವಗಳೇನು ಕೊಡಬಲ್ಲವೋ ॥ ೫ ॥

## ೮೭ ರಾಗ ತೋಡಿ ಅಟತಾಳ

ಏನು ಧನ್ಯಳೋ । ಲಕುಮಿ ಎಂಥ ಮಾನ್ಯಳೋ ॥ ಸಾನುರಾಗದಿಂದ ಹರಿಯ। ತಾನೆ ಸೇವೆ ಮಾಡುತಿಹಳು ॥ ಪ ॥ ಕೋಟಿ ಕೋಟಿ ಭೃತ್ಯ

ರಿರಲು । ಹಾಟಕಾಂಬರನ ಸೇವೆ ॥ ಸಾಟಿಯಿಲ್ಲದೆ ಮಾಡಿ ಪೂರ್ಣ । ನೋಟದಿಂದ ಸುಖಿಸುತಿಹಳು ॥೧॥ ಛತ್ರ ಚಾಮರ ವ್ಯಜನ ಪರಿಯಂಕ । ಪಾತ್ರ ರೂಪದಲ್ಲಿ ನಿಂತು ॥ ಚಿತ್ರಚರಿತನಾದ ಹರಿಯ। ನಿತ್ಯ ಸೇವೆ ಮಾಡುತಿಹಳು ॥೨॥ ಸರ್ವತ್ರದಿ ವ್ಯಾಪ್ತನಾದ । ಸರ್ವದೋಷರಹಿತನಾದ॥ ಸರ್ವವಂದ್ಯನಾದ ಪುರಂದರ । ವಿಠ್ಠಲನ್ನ ಸೇವಿಸುವಳು ॥ ೩ ॥

## ೮೮ ರಾಗ ಧನ್ಯಾಸಿ ಆದಿತಾಳ

ಹರಿ ಕೃಪೆಯಲಿ ತಾನೊಲಿದದ್ದಾದರೆ । ಉರುತರ ಮೋಕ್ಷವೆ ಸಾಕ್ಷಿ ॥ ॥ಪ॥ ಹರಿಶರಣರ ಸೇವಿಸುವ ನರರಿಗೆ । ಧರೆಯ ಸೌಖ್ಯವೆ ಸಾಕ್ಷಿ ॥ ಅ ॥ ಮಡದಿ ಮಕ್ಕಳ ಸಾಕದೆ ಬಿಡುವಗೆ । ಕಡು ದಾರಿದ್ರ್ಯವೆ ಸಾಕ್ಷಿ ॥ ಕಡು ಬಡವಗೆ ಧರ್ಮವ ಕೊಡದಿರೆ ಬಾಯಿ । ಬಿಡುವುದೆ ಪರರಿಗೆ ಸಾಕ್ಷಿ ॥೧॥ ಅನ್ನದಾನವ ಮಾಡಿದವಗೆ ದಿವ್ಯ । ಅನ್ನ ಉಂಬುವುದೆ ಸಾಕ್ಷಿ॥ ಹೊನ್ನು ದಾನವ ಮಾಡದವಗೆ ಪರ ದೈನ್ಯ ಬಡುವುದೆ ಸಾಕ್ಷಿ ॥ ೨ ॥ ಕನ್ಯಾದಾನವ ಮಾಡಿದವಗೆ ದಿವ್ಯ । ಹೆಣ್ಣಿನ ಭೋಗವೆ ಸಾಕ್ಷಿ ॥ ಕನ್ಯಾದಾನವ ಮಾಡ ದವಗೆ ಹೆಣ್ಣಿನ ಹೋರಾಟವೆ ಸಾಕ್ಷಿ ॥ ೩ ॥ ಕಂಡ ಪುರುಷಗೆ ಕಣ್ಣಿಕ್ಕುವ ಳಿಗೆ । ಗಂಡನ ಕಳೆವುದೆ ಸಾಕ್ಷಿ ॥ ೪ ॥ ಕ್ಷೇತ್ರದಾನವ ಮಾಡಿದವಗೆ ಏಕ। ಛತ್ರ ರಾಜ್ಯವೆ ಸಾಕ್ಷಿ॥ ಪಾತ್ರಾಪಾತ್ರವನರಿತು ದಾನ ಮಾಡಿದವಗೆ। ಪುತ್ರರ ಪಡೆವುದೆ ಸಾಕ್ಷಿ॥ ೫ ॥ ಪರಿಪರಿ ತಾನುಂಡು ಪರರಿಗೊಂದಿಕ್ಕಿದ । ನರಗೆ ಗುಲ್ಮರೋಗವೆ ಸಾಕ್ಷಿ ॥ ಪರಿಪರಿಯಿಂದಲಿ ಹಿರಿಯರ ದೂಷಿಸೆ । ತಿರಿದುಂಬೋದೆ ಬಲು ಸಾಕ್ಷಿ ॥ ೬ ॥ ಭಕ್ತಿಯಿಲ್ಲದ ಅಧಮರಿಗೊಂದು । ಕತ್ತಲೆಮನೆಯೆ ಸಾಕ್ಷಿ ॥ ಮುಕ್ತಿ ಪಡೆವುದೆ ಶ್ರೀಪುರಂದರ ವಿಠಲನ । ಭಕ್ತ ನಾಗಿರುವುದಕೆ ಸಾಕ್ಷಿ ॥ ೭ ॥

## ೮೯ ರಾಗ ಬೇಹಾಗ್ ಆದಿತಾಳ

ಬೇವು ಬೆಲ್ಲದೊಳಿಡಲೇನು ಫಲ । ಹಾವಿಗೆ ಹಾಲೆರೆದೇನು ಫಲ ॥ಪ॥ ಕುಟಿಲವ ಬಿಡದಿಹ ಕುಜನರು ಮಂತ್ರವ। ಪಠನೆಯ ಮಾಡಿದರೇನು ಫಲ॥ ಸಟೆಯನ್ನಾಡುವ ಮನುಜರು ಮನದಲಿ। ವಿಠಲನ ನೆನೆದರೆಯೇನು ಫಲ॥

॥ ೧ ॥ ಕಪಟತನದಿ ವಂಚಿಸುವ ಮನುಜರು । ಜಪಗಳ ಮಾಡಿದರೇನು ಫಲ ॥ ಕುಪಿತಬುದ್ಧಿಯನು ತ್ಯಜಿಸದೆ ನಿತ್ಯದಿ । ಉಪವಾಸವಿದ್ದರಿನ್ನೇನು ಫಲ ॥ ೨ ॥ ಮಾತಾಪಿತರನು ಬಳಲಿಸುವ ಮಗ । ಯಾತ್ರೆಯ ಮಾಡಿದರೇನು ಫಲ॥ ಘಾತಕತನವನು ಬಿಡದೆ ನಿರಂತರ। ಗೀತೆಯನೋದಿದರೇನು ಫಲ ॥೩॥ ಪತಿಯನು ನಿಂದಿಸಿ ಬೊಗಳುವ ಸತಿಯಳು । ವ್ರತಗಳ ಮಾಡಿದರೇನು ಫಲ ॥ ಅತಿಥಿಗಳೆಡೆಯಲಿ ಭೇದವ ಮಾಡುತ । ಗತಿಯನು ಬಯಸಿದರೇನು ಫಲ ॥ ೪ ॥ ಹೀನಕೃತ್ಯಗಳ ಮಾಡುತ ನದಿಯಲಿ । ಸ್ನಾನವ ಮಾಡಿದರೇನು ಫಲ ॥ ಶ್ರೀನಿಧಿ ಪುರಂದರವಿಠಲನ ನೆನೆಯದೆ । ಮೌನವ ಮಾಡಿದರೇನು ಫಲ ॥ ೫ ॥

## ೯೦ ರಾಗ ಬೇಹಾಗ್ ಝಂಪೆತಾಳ

ಮನುಜಶರೀರವಿದೇನು ಸುಖ। ಇದು। ನೆನೆದರೆ ಘೋರವಿದೇನು ಸುಖ॥ ॥ ಪ ॥ ಜನನ ಮರಣ ಮಲದ ಕೂಪದಲ್ಲಿದ್ದು । ಅನುಭವಿಸುವುದಿದೇನು ಸುಖ ॥ ತನುವಿದ್ದಾಗಲೆ ಹೃದಯದ ಶೌಚದ । ಸ್ತನಗಳನುಂಬುವುದೇನು ಸುಖ ॥೧॥ ದಿನ ದಿನ ಹಸಿತೃಷೆ ಘನಘನ ರೋಗದೊ । ಳನುಭವಿಸುವುದು ಇದೇನು ಸುಖ ॥ ನೆನೆಯಲುನಿತ್ಯನೀರ್ಗುಳ್ಳೆಯಂತಿರುತಿಪ್ಪ । ತನು ಮಲ ಭಾಂಡವಿದೇನು ಸುಖ ॥೨॥ ಪರಿಪರಿ ವಿಧದಲಿ ಪಾಪವ ಗಳಿಸುತ್ತ । ನರಕಕ್ಕೆ ಬೀಳುವುದೇನು ಸುಖ ॥ ಪುರಂದರವಿಠಲನ ಮನದಿ ನೆನೆದು ಸ । ದ್ಧರ್ಮದೊಳ್ ನಡೆದರೆ ಆಗ ಸುಖ ॥೩॥

## ೯೧ ರಾಗ ಪೂರ್ವಿ ಅಟತಾಳ

ಧರ್ಮಕ್ಕೆ ಕೈಬಾರದೀ ಕಾಲ । ಪಾಪ । ಕರ್ಮಕ್ಕೆ ಮನಸೋಲೋದೀ ಕಾಲ ॥ ಪ ॥ ದಂಡ ದ್ರೋಹಕೆ ಉಂಟು । ಪುಂಡು ಪೋಕರಿಗುಂಟು । ಹೆಂಡತಿ ಮಕ್ಕಳಿಗಿಲ್ಲವೀ ಕಾಲ ॥ ದಿಂಡೇರಿಗುಂಟು ಜಗಭಂಡರಿಗುಂಟು । ಅಂಡಲೆವರಿಗಿಲ್ಲವೀ ಕಾಲ ॥ ೧ ॥ ಮತ್ತೆ ಸುಳ್ಳರಿಗುಂಟು । ನಿತ್ಯ ಹಾದರಕುಂಟು । ಉತ್ತಮರಿಗಿಲ್ಲವೀ ಕಾಲ ॥ ತೊತ್ತೇರಿಗುಂಟು ತಾಟಕಿಗುಂಟು ।

ಹೆತ್ತ ತಾಯಿಗಿಲ್ಲವೀ ಕಾಲ ॥ ೨ ॥ ಹುಸಿ ದಿಟವಾಯಿತು । ರಸ ಕಸ ವಾಯಿತು । ಸೊಸೆ ಅತ್ತೆ ದಂಡಿಸೋದೀ ಕಾಲ ॥ ಬಿಸಜಾಕ್ಷ ಪುರಂದರ ವಿಠಲನ ಮನದಲ್ಲಿ । ಸ್ತುತಿಸುವವರಿಗಿಲ್ಲವೀ ಕಾಲ ॥೩॥

## ೯೨ ರಾಗ ಮೋಹನ ಅಟತಾಳ

ಬಿಡೆ ನಿನ್ನ ಪಾದವ ಬಿಂಕವಿನ್ನೇಕೊ । ಕೊಡು ಮನದಿಷ್ಟವ ಕೋಪ ವಿದೇಕೋ॥ಪ॥ ನೀರ ಪೊಕ್ಕರು ಬಿಡೆ ಬೆನ್ನಿನೊಳಗೆ ಬಹು । ಭಾರ ಪೊತ್ತೆನೆಂದು ಬಿದ್ದರು ಬಿಡೆನು॥ ಕೋರೆಯ ಮಸೆಯುತ ಕೆಸರು ಕೊಂಡರು ಬಿಡೆ। ಘೋರ ರೂಪವ ತಾಳಿ ಘುರಘುರಿಸಲು ನಾನು ॥೧॥ ತಿರುಕನೆಂದರು ಬಿಡೆ ತಿಳಿದು ತಾಯ ಕೊರಳ। ತರಿದೆನೆಂದರು ನಿನ್ನ ನಾ ಬಿಡೆನೋ ॥ ಪೊರೆಯೆ ಪಿತನ ವಾಕ್ಯ ಕಾಡ ಸೇರಲು ಬಿಡೆ। ಮುರುಳ ಮಡುವಿನಲ್ಲಿ ಧುಮುಕಿದರೆಯು ನಾನು ॥೨॥ ಕಡು ಬತ್ತಲಾಗಿ ಎನ್ನ ಕೈಲಿ ಕಾಸಿಲ್ಲೆಂದರು । ಒಡನೆ ಹಯವೇರಿ ಓಡಿದರು ಬಿಡೆನು ॥ ಪೊಡವಿಯೊಳಗೆ ನಮ್ಮ ಪುರಂದರವಿಠಲನೆ । ಕಡೆಹಾಯಿಸುವ ಭಾರ ನಿನ್ನದದಕೆ ನಾನು ॥ ೩ ॥

## ೯೩ ರಾಗ ಆನಂದಭೈರವಿ ಆದಿತಾಳ

ಶ್ರೀನಿವಾಸ ನೀನೇ ಪಾಲಿಸೋ । ಶ್ರಿತಜನಪಾಲ । ಗಾನಲೋಲ ಶ್ರೀ ಮುಕುಂದನೇ ॥ ಪ ॥ ಧ್ಯಾನಮಾಳ್ಪ ಸಜ್ಜನರ ಮಾನದಿಂ ಪರಿಪಾಲಿಪ । ವೇಣುಗೋಪಾಲ ಮುಕುಂದ ವೇದವೇದ್ಯ ನಿತ್ಯಾನಂದ ॥ ಅ ॥ ಎಂದಿಗೆ ನಿನ್ನ ಪಾದಾಬ್ಜವ। ಪೊಂದುವ ಸುಖ। ಎಂದಿಗೆ ಲಭ್ಯವೋ ಮಾಧವ ॥ ಅಂಧಕಾರಣ್ಯದಲ್ಲಿ ನಿಂದು ತತ್ತರಿಸುತಿಹೆನೊ । ಅಂದದಿಂ ಭವಾಬ್ಧಿಯೊಳು ಮಿಂದುನೊಂದೆನೊ ಮುಕುಂದ ॥ ೧ ॥ ಎಷ್ಟು ದಿನ ಕಷ್ಟಪಡುವುದೊ । ಯಶೋದೆಕಂದ । ದೃಷ್ಟಿಯಿಂದ ನೋಡಲಾಗದೆ ॥ ಮುಟ್ಟಿ ನಿನ್ನ ಭಜಿಸಲಾರೆ ಕೆಟ್ಟನರಜನ್ಮದವ । ದುಷ್ಟಕಾರ್ಯ ಮಾಡಿದಾಗ್ಯೂ ಇಷ್ಟನಾಗಿ ಕೈಯ ಪಿಡಿದು ॥೨॥ ಅನುದಿನ ಅನೇಕ ರೋಗಂಗಳ । ಅನುಭವಿಸಿದೆನು। ಜನಮಹಿಮನೆ ಕೇಳಯ್ಯ ॥ ತನುವಿನಲ್ಲಿ ಬಲವಿಲ್ಲ ನೆನೆದ ಮಾತ್ರ ಸಲಹುವ । ಹನುಮದೀಶ ಪುರಂದರವಿಠ್ಠಲನೇ ಕೈಯ ಪಿಡಿದು ॥ ೩ ॥

## ೯೪ ರಾಗ ಶಂಕರಾಭರಣ ತ್ರಿಪುಟತಾಳ

ಜೋ ಜೋ ಶ್ರೀಕೃಷ್ಣ ಪರಮಾನಂದ। ಜೋ ಜೋ ಗೋಪಿಯ ಕಂದ ಮುಕುಂದ॥ ಜೋ ಜೋ ॥ಪ॥ ಪಾಲುಗಡಲೊಳು ಪವಡಿಸಿದವನೇ ಒಂ। ದಾಲದೆಲೆಯ ಮೇಲೆ ಮಲಗಿದ ಶಿಶುವೇ ॥ ಶ್ರೀಲತಾಂಗಿಯರ ಚಿತ್ತದೊಲ್ಲಭನೇ । ಬಾಲ ನಿನ್ನನು ಪಾಡಿ ತೂಗುವೆನಯ್ಯ ॥ ಜೋಜೋ ॥೧॥ ಹೊಳೆವಂಥ ರನ್ನದ ತೊಟ್ಟಿಲ ಮೇಲೆ । ಥಳಥಳಿಸುವ ಗುಲಗುಂಜಿಯ ಮಾಲೆ ॥ ಅಳದೆ ನೀ ಪಿಡಿದಾಡೆನ್ನಯ ಮುದ್ದು ಬಾಲ। ನಳಿನನಾಭನೆ ನಿನ್ನ ಪಾಡಿ ತೂಗುವೆನು ॥ ಜೋ ಜೋ ॥೨॥ ಯಾರ ಕಂದ ನೀನಾರ ನಿಧಾನೀ । ಆರ ರತ್ನವೊ ನೀನಾರ ಮಾಣಿಕವೋ ॥ ಸೇರಿತು ಎನಗೊಂದು ಚಿಂತಾಮಣಿ ಎಂದು । ಪೋರ ನಿನ್ನನು ಪಾಡಿ ತೂಗುವೆನಯ್ಯ ॥ ಜೋ ಜೋ ॥ ೩ ॥ ಗುಣನಿಧಿಯೆ ನಿನ್ನ ಎತ್ತಿಕೊಂಡಿದ್ದರೆ । ಮನೆಯ ಕೆಲಸವಾರು ಮಾಡುವರಯ್ಯ ॥ ಮನಕೆ ಸುಖ ನಿದ್ರೆ ತಂದುಕೊ ಬೇಗ । ಫಣಿಶಯನನೆ ನಿನ್ನ ಪಾಡಿ ತೂಗುವೆನು ॥ ಜೋ ಜೋ ॥ ೪ ॥ ಅಂಡಜವಾಹನ ಅನಂತ ಮಹಿಮ । ಪುಂಡರೀಕಾಕ್ಷ ಶ್ರೀಪರಮಪಾವನ ॥ ಹಿಂಡು ದೈವದ ಗಂಡ ಉದ್ದಂಡನೆ । ಪಾಂಡುರಂಗ ಶ್ರೀಪುರಂದರವಿಠಲ ॥ ಜೋ ಜೋ ॥೫॥

## ೯೫ ರಾಗ ಕಾಂಭೋಜಿ ಝಂಪೆತಾಳ

ಕಂಡು ಕಂಡು ನೀಯೆನ್ನ ಕೈ ಬಿಡುವರೆ । ಕೃಷ್ಣ । ಪುಂಡರೀಕಾಕ್ಷ ಪುರುಷೋತ್ತಮ ಹರೇ॥ಪ॥ ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ। ನಿಂದೆಯಲಿ ನೊಂದೆನೈ ನೀರಜಾಕ್ಷ॥ ತಂದೆತಾಯಿಯು ನೀನೆ ಬಂಧುಬಳಗವು ನೀನೆ। ಎಂದೆಂದಿಗೂ ನಿನ್ನ ನಂಬಿದೆನೊ ಕೃಷ್ಣ ॥೧॥ ಕ್ಷಣ ಒಂದು ಯುಗವಾಗಿ ತೃಣಕಿಂತ ಕಡೆಯಾಗಿ । ಎಣಿಸಲಾರದ ಭವದಿ ನೊಂದೆ ನಾನು ॥ ಸನಕಾದಿ ಮುನಿವಂದ್ಯ ವನಜಸಂಭವಜನಕ । ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀಕೃಷ್ಣ ॥ ೨ ॥ ಭಕ್ತವತ್ಸಲನೆಂಬ ಬಿರುದು ಪೊತ್ತಾ ಮೇಲೆ । ಭಕ್ತರಾಧೀನ ನಾಗಿರಬೇಡವೆ ॥ ಮುಕ್ತಿದಾಯಕ ನೀನು ಹೊನ್ನೂರುಪುರವಾಸ। ಶಕ್ತಗುರು ಪುರಂದರವಿಠಲ ಶ್ರೀಕೃಷ್ಣ ॥೩॥

## ೯೬ ರಾಗ ಧನ್ಯಾಸಿ ಆದಿತಾಳ

ಇಸಬೇಕು । ಇದ್ದು । ಜಯಿಸಬೇಕು || ಪ || ಹೇಸಿಗೆ ಸಂಸಾರದಲ್ಲಿ । ಆಸೆ ಲೇಶ ಇಡದ್ಹಾಗೆ || ಅ || ತಾಮರಸಜಲದಂತೆ । ಪ್ರೇಮವಿಟ್ಟು ಭವದೊಳು || ಸ್ವಾಮಿ ರಾಮ ಎನುತ ಪಾಡಿ । ಕಾಮಿತ ಕಯ್ಗೊಂಬರೆಲ್ಲ ||೧|| ಗೇರುಹಣ್ಣಿನಲ್ಲಿ ಬೀಜ । ಸೇರಿದಂತೆ ಸಂಸಾರದಿ || ಮೀರಿಯಾನೆ ಮಾಡದಲೆ । ಧೀರ ಕೃಷ್ಣನ ಭಕುತರೆಲ್ಲ ||೨|| ಮಾಂಸವಾಸೆಗೆ ಮತ್ಸ್ಯಸಿಲುಕಿ । ಹಿಂಸೆಪಟ್ಟ ಪರಿಯಂತೆ || ಮೋಸಹೋಗದ್ಹಾಗೆ ಜಗ । ದೀಶ ಪುರಂದರವಿಠಲನ ನೆನೆದು ||೩||

## ೯೭ ರಾಗ ಭೈರವಿ ಅಟತಾಳ

ಹಿಗ್ಗುವೆ ಯಾಕೋ । ಈ ದೇಹಕ್ಕೆ । ಹಿಗ್ಗುವೆಯಾಕೋ । ಪ|| ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ । ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ ||ಅ|| ಸತಿಪುರುಷರು ಕೂಡಿ । ರತಿಕ್ರೀಡೆಗಳ ಮಾಡಿ || ಪತನವಾದಿಂದ್ರಿಯ। ಪ್ರತಿಮೆಯ ದೇಹಕ್ಕೆ ||೧|| ಆಗಭೋಗಗಗಳನ್ನು। ಆಗುಮಾಡುತಲಿದ್ದು || ರೋಗ ಬಂದರೆ ಬಿದ್ದು । ಹೋಗುವ ದೇಹಕ್ಕೆ || ೨ || ಪರರ ಸೇವೆಮಾಡಿ। ನರಕಭಾಜನನಾಗಿ || ಮರಳಿ ಮರಳಿ ಬಿದ್ದು । ಉರುಳುವ ದೇಹಕ್ಕೆ || ೩ || ಸೋರುವುದೊಂಬತ್ತು। ದ್ವಾರದಿಂದಲಿ ಮಲ || ನೀರಿಲ್ಲದಿದ್ದರೆ। ನಾರುವ ದೇಹಕ್ಕೆ ||೪|| ಪುರಂದರವಿಠಲನ । ಚರಣಕಮಲಕ್ಕೆ || ಎರಗದೆ ಇರುತಿಹ । ಗರುವದ ದೇಹಕ್ಕೆ || ೫ ||

## ೯೮ ರಾಗ ಆನಂದಭೈರವಿ ಅಟತಾಳ

ನಾರಾಯಣ ನಿನ್ನ ನಾಮದ ಸ್ಮರಣೆಯು । ಸಾರಾಮೃತವೆನ್ನ ನಾಲಿಗ್ಗೆ ಬರಲಿ || ಪ || ಕೂಡುವಾಗಲಿ ನಿಂತಾಡುವಾಗಲಿ ಮತ್ತೆ । ಹಾಡುವಾಗಲಿ ಹರಿದಾಡುವಾಗಲಿ || ಖೋಡಿ ವಿನೋದದಿ ನೋಡದೆ ನಾ ಬಲು। ಮಾಡಿದ ಪಾಪ ಬಿಟ್ಟೋಡಿಹೋಗೋ ಹಾಗೆ ||೧|| ಊರಿಗೆ ಹೋಗಲಿ ಊರೊಳಗಿರಲಿ। ಕಾರಣಾರ್ಥಂಗಳೆಲ್ಲ ಕಾದಿರಲಿ || ವಾರಿಜನಾಭ ನರಸಾರಥಿಸ

ನ್ನಿತ । ಸಾರಿಸಾರಿಗೆ ನಾ ಬೇಸರಿಸದ್ದಾಗೆ ॥೨॥ ಹಸಿವಿದ್ದಾಗಲಿ ಹಸಿವಿಲ್ಲ ದಾಗಲಿ । ರಸಕಸಿ ಇರಲಿ ಹರುಷಿರಲಿ ॥ ವಸುದೇವಾತ್ಮಕ ಶಿಶುಪಾಲಕ್ಷಯ। ಅಸುರಾಂತಕ ನಿನ್ನ ಹೆಸರು ಮರೆಯುದ್ದಾಗೆ ॥೩॥ ಕಷ್ಟದಲ್ಲಿರಲಿ ಉತ್ಕೃಷ್ಟ ದಲ್ಲಿರಲಿ । ಎಷ್ಟಾದರೆ ಮತಿಗೆಟ್ಟಿರಲಿ । ಕೃಷ್ಣ ಕೃಷ್ಣ ಎಂದು ಶಿಷ್ಟರು ಪೇಳುವ । ಅಷ್ಟಾಕ್ಷರ ಮಹಾಮಂತ್ರದ ನಾಮದ ॥೪॥ ಕನಸಿನೊಳಾಗಲಿ ಕಳವಳಿಕಾಗಲಿ । ಮನಸುಗೊಟ್ಟಿರಲಿ ಮುನಿದಿರಲಿ ॥ ಜನಕಜಾಪತಿ ನಿನ್ನ ಚರಣ ಕಮಲವನು । ಮನಸಿನೊಳಗೆ ಒಮ್ಮೆ ನೆನಸಿಕೊಳ್ಳೋ ಹಾಗೆ ॥೫॥ ಜ್ವರ ಬಂದಾಗಲಿ ಚಳಿ ಬಂದಾಗಲಿ । ಮರಳಿ ಮತ್ತೆ ನಡುಗುವಾ ಗಲಿ ॥ ಹರಿ ನಾರಾಯಣ ದುರಿತನಿವಾರಣೆಂದು । ಇರುಳು ಹಗಲು ನಿನ್ನ ಸ್ಮರಣೆಯ ಮರೆಯದ್ದಾಗೆ ॥೬॥ ಸಂತತ ಹರಿ ನಿನ್ನ ಸಾಸಿರ ನಾಮವು । ಅಂತರಂಗದ ಒಳಗಿರಿಸಿ ॥ ಎಂತೊ ಪುರಂದರವಿಠ್ಠಲರಾಯನೆ । ಅಂತ್ಯ ಕಾಲದಲ್ಲಿ ಚಿಂತಿಸೋ ಹಾಗೆ ॥೭॥

### ೯೯ ರಾಗ ಕಲ್ಯಾಣಿ ಅಟತಾಳ

ಕಲ್ಲುಸಕ್ಕರೆ ಕೊಳ್ಳಿರೋ । ನೀವೆಲ್ಲರು । ಕಲ್ಲುಸಕ್ಕರೆ ಕೊಳ್ಳಿರೋ ॥ಪ॥ ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು । ಫುಲ್ಲಲೋಚನ ಶ್ರೀಕೃಷ್ಣನಾಮ ವೆಂಬ ॥ ಅ ॥ ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ । ಒತ್ತ್ಯೊತ್ತಿ ಗೋಣಿಯೊಳ್ತುಂಬುವುದಲ್ಲ ॥ ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ । ಉತ್ತಮ ಸರಕಿದು ಅತಿ ಲಾಭ ಬರುವಂಥ ॥೧॥ ನಷ್ಟ ಬೀಳುವದಲ್ಲ ನಾತ ಹುಟ್ಟುವುದಲ್ಲ । ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ ॥ ಕಟ್ಟಿರುವೆಯು ತಿಂದು ಕಡಿಮೆಯಾಗುವದಲ್ಲ। ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ॥೨॥ ಸಂತೆ ಸಂತೆಗೆ ಹೋಗಿ ಶ್ರಮಪಡಿಸುವದಲ್ಲ । ಸಂತೆಯೊಳಗೆ ಇಟ್ಟು ಮಾರುವುದಲ್ಲ ॥ ಸಂತತ ಭಕ್ತರ ನಾಲಿಗೆ ಸವಿಗೊಂಬ । ಕಾಂತ ಪುರಂದರ ವಿಠಲನ ನಾಮವೆಂಬ ॥ ೩ ॥

### ೧೦೦ ರಾಗ ಮುಖಾರಿ ಝಂಪೆತಾಳ

ಏಕೆನ್ನೊಳಿಂತು ಕೃಪೆಯಿಲ್ಲ ಹರಿಯೆ । ಕಾಕು ಮಾಡದೆ ಕಾಯೊ ಸಂಗ ದೊಳು ಬಳಲಿದೆನು ॥ಪ॥ ಕಂದರ್ಪಬಾಧೆಯಿಂ ಮಾನಿನಿಯರೊಶನಾಗಿ ।

ಮಂದಮತಿಯಿಂದ ನಾ ಮರುಳಾದೆನು ॥ ಸಂದಿತ್ತೈ ಯೌವನವು ಬುದ್ಧಿ ಬಂದಿತು ಈಗ । ಸಂದೇಹಬಡದೆ ನೀ ಕರುಣಿಸೈ ಎನ್ನ ॥೧॥ ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ । ಹಿಂಡು ಮಕ್ಕಳು ಎನ್ನ ಕಾಡುತಿಹರು ॥ ಮುಂಡ ಮೋಚಿದೆ ನಾನು ಇನ್ನಾರು ಗತಿಯೆನಗೆ। ಪುಂಡರೀಕಾಕ್ಷ ನೀ ಪಾಲಿಸೈ ತಂದೆ ॥೨॥ ಅಟ್ಟ ಮೇಲೆ ಒಲೆಯು ಉರಿವಂತೆ ಎನಗೀಗ । ಕೆಟ್ಟ ಮೇಲೆ ಅರಿವು ಬಂದಿತಯ್ಯ ॥ ನೆಟ್ಟನೇ ಪುರಂದರ ವಿಠ್ಠಲನೆ ಕೈ ಬಿಡದೆ । ದೃಷ್ಟಿಯಿಂದಲಿ ನೋಡಿ ಪರಿಪಾಲಿಸಯ್ಯ ॥ ೩ ॥

## ೧೦೧ ರಾಗ ಮುಖಾರಿ ಝಂಪೆತಾಳ

ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ । ನಾರಿಯೋ ಧಾರಿಣಿಯೊ ಬಲು ಧನದ ಸಿರಿಯೋ ॥ ಪ ॥ ಅನ್ಯರಲಿ ಜನಿಸಿರ್ದ ಅಂಗನೆಯು ಕರೆತಂದು । ತನ್ನ ಮನೆಗವಳ ಯಜಮಾನಿಯೆನಿಸಿ ॥ ಭಿನ್ನವಿಲ್ಲದಲರ್ಧ ದೇಹವೆನಿಸುವ ಸತಿಯು । ಕಣ್ಣಿನಲಿ ನೋಡಲಂಜ್ವಳು ಕಾಲವಶದಿ ॥ ಆರು ॥ ೧ ॥ ಮುನ್ನ ಶತಕೋಟಿ ರಾಯರುಗಳಾಳಿದ ನೆಲವ । ತನ್ನದೆಂದೆನುತ ಶಾಸನವ ಬರೆಸಿ ॥ ಬಿನ್ನಣದ ಮನೆಕಟ್ಟಿ ಕೋಟೆಕೊತ್ತಳವಿಕ್ಕಿ । ಚೆನ್ನಿಗನಅಸುವಳಿಯೆ ಹೊರಗೆ ಹಾಕುವರು॥ ಆರು॥೨॥ ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ। ಕ್ಷುದ್ರತನ ಕಳವು ಪರದ್ರೋಹದಿಂದ। ಬುದ್ಧಿಯಿಂದಲಿ ಗಳಿಸಿ ಸಿಕ್ಕಿದಂಥರ್ಥವನು। ಸದ್ಯದಲ್ಲಾರು ಉಂಬುವರ್ ಹೇಳು ಮನುಜ॥ ಆರು ॥೩॥ ಶೋಕವನು ಗೆಯ್ಯುವರು ಸತಿಸುತರು ಬಾಂಧವರು। ಜೋಕೆ ತಪ್ಪಿದ ಬಳಿದ ಅರ್ಥ ವ್ಯರ್ಥ ॥ ಲೋಕದೊಳು ಗಳಿಸಿರ್ದ ಪುಣ್ಯ ಪಾಪಗಳೆರಡು ! ಸಾಕಾರವಾಗಿ ಸಂಗಡ ಬಾಹೋದಲ್ಲದೆ ॥ ಆರು ॥ ೪ ॥ ಅಸ್ಥಿರದ ದೇಹವಿದು ನೆಚ್ಚಿ ನಂಬಿರಬೇಡ। ಸ್ವಸ್ಥದಲಿ ನೆನೆ ಕಂಡ್ಯ ಹರಿ ಪಾದವ ||| ಚಿತ್ತದೊಳು ಶುದ್ಧಿಯಿಂ ಪುರಂದರವಿಠಲನೇ। ಉತ್ತಮೋತ್ತಮನೆಂದು ಸುಖಿಯಾಗು ಮನುಜ || ಆರು ॥ ೫ ॥

## ೧೦೨ ರಾಗ ಮುಖಾರಿ ಝಂಪೆತಾಳ

ಮೂರ್ಖರಾದರು ಜನರು ಲೋಕದೊಳಗೆ ॥ ಪ ॥ ಏಕ ದೇವನ ಬಿಟ್ಟು ಕಾಕು ದೈವವ ಭಜಿಸಿ ॥ ಅ ॥ ಒಂಟಿಯಲಿ ಹೆಂಡತಿಯ ಬಿಡುವಾತನೇ

ಮೂರ್ಖ । ಗಂಟನೊಬ್ಬರ ಕೈಯಲಿಡುವಾತ ಮೂರ್ಖ ॥ ನೆಂಟರಿಗೆ ಸಾಲವನು ಕೊಡುವಾತ ಮೂರ್ಖ । ಜನ । ಕಂಟಕನಾಗಿರುವ ಕಡು ಮೂರ್ಖನಯ್ಯ ॥೧॥ ಪಡೆದ ಮಕ್ಕಳ ಮಾರಿ ಒಡಲ ಪೊರೆವವ ಮೂರ್ಖ ಮಡದಿ ಹುಟ್ಟಿದ ಮನೆಯಲಿರುವವನು ಮೂರ್ಖ ॥ ಬಡತನವು ಬಂದಾಗ ಬೈದು ಕೊಂಬವ ಮೂರ್ಖ ।ದೃಢ। ಭಕ್ತಿಯಿಲ್ಲದವ ಕಡು ಮೂರ್ಖನಯ್ಯ ॥೨॥ ಮುಪ್ಪಿನಲಿ ಮದುವೆಯನು ಮಾಡಿಕೊಂಬವ ಮೂರ್ಖ । ಸರ್ಪನಲಿ ಸರಸವಾಡುವನೆ ಮೂರ್ಖ ॥ ಇಪ್ಪತ್ತವೊಂದು ಕುಲ ಉದ್ಧರಿಸದವ ಮೂರ್ಖ । ಅಪ್ಪ। ರಂಗಯ್ಯನ ಭಜಿಸದವ ಮೂರ್ಖ ॥೩॥ ರಾಮನಾಮವ ಭಜಿಸಿ ನೆನೆಯದವ ಮೂರ್ಖ । ಹೇಮವನು ಗಳಿಸಿ ಉಣದವನು ಮೂರ್ಖ ॥ ಕಾಮದಲಿ ಹಿರಿಯಳನು ಕೂಡಿಕೊಂಡವ ಮೂರ್ಖ। ಭೂಮಿ ದಾನವ ತೆಗೆದ ಭೂಪತಿಯು ಮೂರ್ಖ ॥ ೪ ॥ ಕಾಶಿಯಲಿ ದೇಹವನು ತೊಳೆಯದಿದ್ದವ ಮೂರ್ಖ। ಭೂಸುರರಿಗನ್ನವನು ಕೊಡದವನು ಮೂರ್ಖ। ಶೇಷಗಿರಿ ಕೃಷ್ಣನ್ನ ಭಜಿಸದಿದ್ದವ ಮೂರ್ಖ। ದಾಸನಾಗದ ಮನುಜ ಕಡು ಮೂರ್ಖನಯ್ಯ ॥೫॥ ಸತ್ತ ಕರುವಿನ ತಾಯ ಹಾಲ ಕರೆವವ ಮೂರ್ಖ । ಒತ್ತೆಯಿಲ್ಲದೆ ಸಾಲ ಕೊಡುವವನು ಮೂರ್ಖ ॥ ಹತ್ತೆಂಟು ಬಗೆಯಲ್ಲಿ ಹಂಬಲಿಸುವವ ಮೂರ್ಖ। ಹೆತ್ತ ತಾಯಿಯನು ಬೈವ ಕಡು ಮೂರ್ಖನಯ್ಯ ॥೬॥ ಸ್ವಾಮಿನಾಮವ ಬಿಡದೆ ಭಜಿಸದಿದ್ದವ ಮೂರ್ಖ। ಸ್ವಾಮಿ ಗುರುಹಿರಿಯರಿಗೆ ಎರಗದವ ಮೂರ್ಖ ॥ ನೇಮದಲಿ ಹರಿಕಥೆಯ ಕೇಳದವ ತಾ ಮೂರ್ಖ । ತಾಮಸರ ಕೂಡಿಕೊಂಡವನೆ ಕಡು ಮೂರ್ಖ ॥೭॥ ಉಂಡ ಮನೆಗೆರಡನ್ನು ಬಗೆಯುವಾತನೆ ಮೂರ್ಖ। ಕೊಂಡೆ ಮಾತನು ಕೇಳಿ ಕುಣಿವವನು ಮೂರ್ಖ ॥ ಪುಂಡರೀಕಾಕ್ಷ ಶ್ರೀಪುರಂದರವಿಠಲನ । ಕೊಂಡಾಡಿ ಭಜಿಸದವ ಕಡು ಮೂರ್ಖನಯ್ಯ ॥ ೮ ॥

### ೧೦೩ ರಾಗ ಮುಖಾರಿ ಝಂಪೆತಾಳ

ಸತ್ಯವಂತರಿಗಿದು ಕಾಲವಲ್ಲ ॥ ಪ ॥ ದುಷ್ಟಜನರಿಗೆ ಸುಭಿಕ್ಷಕಾಲ ॥ ॥ಅ॥ ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ । ಪರಮ ಪಾಪಿಗಳಿಗೆ

ಸುಭಿಕ್ಷಕಾಲ ‖ ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ। ಧರೆಗೆ ಜಾರೆಯಳ ಕೊಂಡಾಡುವ ಕಾಲ‖೧‖ ಉಪಕಾರ ಮಾಡಿದರೆ ಅಪಕರಿಸುವ ಕಾಲ। ಸಕಲವು ತಿಳಿದವಗೆ ದುರ್ಭಿಕ್ಷಕಾಲ‖ ಸತಿಸುತರು ಎಂಬವರ ನಂಬಲರಿಯದ ಕಾಲ। ಸಟೆಯಲ್ಲವಿದೆ ವಿಪರೀತ ಕಾಲ ‖ ೨ ‖ ಧರ್ಮಮಾಡುವಗೆ ನಿರ್ಮೂಲವಾಗುವ ಕಾಲ । ಕಾರ್ಮಿಪಾತಕರಿಗೆ ಬಹು ಸೌಖ್ಯ ಕಾಲ ‖ ನಿರ್ಮಲಾತ್ಮಕ ಸಿರಿಪುರಂದರವಿಠ್ಠಲನ । ಮರ್ಮದೊಳು ಭಜಿಸಲರಿಯದ ಕಾಲವಯ್ಯ ‖೩‖

## ೧೦೪ ರಾಗ ಪೂರ್ವಿ ಅಟತಾಳ

ಹರಿಯ ನೆನೆಯದ ನರಜನ್ಮವೇಕೆ । ನರ । ಹರಿಯ ಕೊಂಡಾಡದ ನಾಲಿಗೆಯೇಕೆ ‖ಪ‖ ವೇದವನೋದದ ವಿಪ್ರ ತಾನೇಕೆ! ಕಾದಲರಿಯದ ಕ್ಷತ್ರಿಯನೇಕೆ ‖ ಕ್ರೋಧವ ಬಿಡದ ಸಂನ್ಯಾಸಿ ತಾನೇಕೆ । ಆದರವಿಲ್ಲದ ಅನ್ನ ತಾನ್ನವೇಕೆ ‖೧‖ ಸತ್ಯಶೌಚವಿಲ್ಲದಾಚಾರವೇಕೆ । ನಿತ್ಯ ನೇಮವಿಲ್ಲದ ಜಪತಪವೇಕೆ ‖ ಭಕ್ತಿಲಿ ಮಾಡದ ಹರಿಪೂಜೆಯೇಕೆ । ಉತ್ತಮರಿಲ್ಲದ ಸಭೆಯು ತಾನೇಕೆ ‖೨‖ ಮಾತಾಪಿತರ ಪೊರೆಯದ ಮಕ್ಕಳೇಕೆ । ಮಾತು ಕೇಳದ ಸೊಸೆಗೊಡವೆ ತಾನೇಕೆ ‖ ನೀತಿ ನೇಮವಿಲ್ಲದ ಕೂಟ ತಾನೇಕೆ। ಅ। ನಾಥನಾದ ಮೇಲೆ ಕೋಪವದೇಕೆ ‖ ೩ ‖ ಅಳಿದು ಅಳಿದು ಹೋಗುವ ಮಕ್ಕಳೇಕೆ । ತಿಳಿದು ಬುದ್ಧಿಯ ಹೇಳದ ಗುರುವೇಕೆ ‖ ನಳಿನನಾಭ ಶ್ರೀ ಪುರಂದರ ವಿಠಲನ । ಚೆಲುವ ಮೂರುತಿಯ ನೋಡದ ಕಂಗಳೇಕೆ ‖ ೪ ‖

## ೧೦೫ ರಾಗ ಮಧ್ಯಮಾವತಿ ಆದಿತಾಳ

ಭಾಗ್ಯದ ಲಕ್ಷ್ಮೀ ಬಾರಮ್ಮ । ನಮ್ಮಮ್ಮ ನೀ ಸೌ । ಭಾಗ್ಯದ ಲಕ್ಷ್ಮೀ ಬಾರಮ್ಮ ‖ಪ‖ ಗೆಜ್ಜೆ ಕಾಲ್ಗಳ ಧ್ವನಿಯ ತೋರುತ । ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ‖ ಸಜ್ಜನ ಸಾಧು ಪೂಜೆಯ ವೇಳೆಗೆ । ಮಜ್ಜಿಗೆಯೊಳಗಿನ ಬೆಣ್ಣೆಯಂತೆ ‖೧‖ ಕನಕವೃಷ್ಟಿಯ ಕರೆಯುತ ಬಾರೆ । ಮನಕೆ ಮಾನವ ಸಿದ್ಧಿಯ ತೋರೆ ‖ ದಿನಕರಕೋಟಿತೇಜದಿ ಹೊಳೆವ । ಜನಕರಾಯನ

ಕುಮಾರಿ ಬೇಗ ||೨|| ಅತ್ತಿತ್ತಗಲದೆ ಭಕ್ತರ ಮನೆಯಲಿ ನಿತ್ಯ ಮಹೋ | ತ್ಸವ ನಿತ್ಯ ಸುಮಂಗಳ || ಸತ್ಯವ ತೋರುವ ಸಾಧು ಸಜ್ಜನರ | ಚಿತ್ತದಿ ಹೊಳೆವ ಪುತ್ಥಳಿ ಬೊಂಬೆ || ೩ || ಸಂಖ್ಯೆಯಿಲ್ಲದ ಭಾಗ್ಯವ ಕೊಟ್ಟು | ಕಂಕಣ ಕೈಯ ತಿರುವುತ ಬಾರೆ || ಕುಂಕುಮಾಂಕಿತೆ ಪಂಕಜಲೋಚನೆ | ವೆಂಕಟರಮಣನ ಬಿಂಕದ ರಾಣಿ || ೪ || ಸಕ್ಕರೆ ತುಪ್ಪ ಕಾಲಿವೆ ಹರಿಸಿ | ಶುಕ್ರವಾರದ ಪೂಜೆಯ ವೇಳೆಗೆ || ಅಕ್ಕರವುಳ್ಳ ಅಳಗಿರಿ ರಂಗನ | ಚೊಕ್ಕ ಪುರಂದರವಿಠಲನ ರಾಣಿ || ೫ ||

## ೧೦೬ ರಾಗ ಕಾಪಿ ಅಟತಾಳ

ಅನುಗಾಲವು ಚಿಂತೆ ಜೀವಕ್ಕೆ | ತನ್ನ | ಮನವು ಶ್ರೀರಂಗನೊಳ್ ಮೆಚ್ಚುವತನಕ || ಪ || ಸತಿಯಿದ್ದರು ಚಿಂತೆ | ಸತಿಯಿಲ್ಲದ ಚಿಂತೆ | ಮತಿ ಹೀನ ಸತಿಯಾದರು ಚಿಂತೆಯು || ಪೃಥಿವಿಯೊಳಗೆ ಸತಿ ಕಡು ಚೆಲ್ವೆ ಯಾದರೆ | ಮಿತಿ ಮೀರೆಯಿಲ್ಲದ ಮೋಹದ ಚಿಂತೆ||೧|| ಮಕ್ಕಳಿಲ್ಲದ ಚಿಂತೆ| ಮಕ್ಕಳಾದರು ಚಿಂತೆ | ಒಕ್ಕಾಳು ಹೊನ್ನು ಕೊಡುವ ಚಿಂತೆಯು || ಅಕ್ಕರೆಯಿಂದಲಿ ತುರುಗಳ ಕಾಯ್ದರು | ಕಕ್ಕುಲತೆಯು ಬಿಟ್ಟು ಹೋಗದ ಚಿಂತೆ ||೨|| ಬಡವ ನಾದರು ಚಿಂತೆ ಬಲ್ಲಿದನಾದರು ಚಿಂತೆ | ಹಿಡಿ ಹೊನ್ನು ಕೈಯೊಳಾದರು ಚಿಂತೆಯು || ಪೊಡವಿಯೊಳಗೆ ನಮ್ಮ ಪುರಂದರವಿಠಲನ | ಬಿಡದೆ ಧ್ಯಾನಿಸಿದರೆ ಚಿಂತೆ ನಿಶ್ಚಿಂತೆ ||೩||

## ೧೦೭ ರಾಗ ಮುಖಾರಿ ಝಂಪೆತಾಳ

ನಾನೇಕೆ ಬಡವನು | ನಾನೇಕ ಪರದೇಶಿ || ಶ್ರೀನಿಧೇ ಹರಿ ಎನಗೆ | ನೀನಿರುವ ತನಕ || ಪ || ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ | ಅಷ್ಟಬಂಧುವು ಸರ್ವ ಬಳಗ ನೀನೆ || ಪೆಟ್ಟಿಗೆಯೊಳಗಣ ಅಷ್ಟಾಭರಣ ನೀನೆ | ಶ್ರೇಷ್ಠಮೂರುತಿ ಕೃಷ್ಣ ನೀನಿರುವ ತನಕ || ೧ || ಒಡಹುಟ್ಟಿದವ ನೀನೆ ಒಡಲಿಗ್ಹಾಕುವ ನೀನೆ | ಉಡಲು ಹೊದಿಯಲು ವಸ್ತ್ರ ಕೊಡುವ ನೀನೆ || ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ || ಬಿಡದೆ ಸಲಹುವ

ಒಡೆಯ ನೀನಿರುವ ತನಕ ॥ ೨ ॥ ವಿದ್ಯೆ ಹೇಳುವ ನೀನೆ ಬುದ್ಧಿ ಕಲಿಸುವ ನೀನೆ। ಉದ್ಧಾರಕರ್ತನು ಸ್ವಾಮಿ ನೀನೆ॥ ಮುದ್ದು ಸಿರಿಪುರಂದರವಿಠಲ ನಿನ್ನಡಿಮೇಲೆ । ಬಿದ್ದು ಕೊಂಡಿರುವ ಎನಗೇತರ ಭಯವೋ ॥೩॥

### ೧೦೮ ರಾಗ ರೇಗುಪ್ತಿ ಅಟತಾಳ

ಮಾನವಜನ್ಮ ದೊಡ್ಡದು । ಇದ । ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ॥ ಪ ॥ ಕಣ್ಣು ಕೈಕಾಲ್ಕಿವಿ ನಾಲಿಗೆ ಇರಲಿಕ್ಕೆ । ಮಣ್ಣು ಮುಕ್ಕಿ ಹುಚ್ಚರಾಗುವರೆ ॥ ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ । ಉಣ್ಣದೆ ಉಪವಾಸ ಇರುವರೆ ಖೋಡಿ ॥೧॥ ಕಾಲನ ದೂತರು ಕಾಲ್ಪಿಡಿದೆಳೆವಾಗ । ತಾಳು ತಾಳೆಂದರೆ ತಾಳುವರೆ॥ ಧಾಳಿ ಬಾರದ ಮುನ್ನ ಧರ್ಮವ ಗಳಿಸಿರೊ। ಹಾಳು ಸಂಸಾರ ಸುಳಿಗೆ ಸಿಕ್ಕಲು ಬೇಡಿ ॥ ೨ ॥ ಏನು ಕಾರಣ ಯದುಪತಿಯನು ಮರೆತಿರೆ। ಧನಧಾನ್ಯ ಪುತ್ರರು ಕಾಯುವರೆ ॥ ಇನ್ನಾದರು ಏಕೋ ಭಾವದಿ ಭಜಿಸಿರೊ । ಚೆನ್ನ ಶ್ರೀಪುರಂದರವಿಠ್ಠಲರಾಯನ ॥೩॥

### ೧೦೯ ರಾಗ ಶಂಕರಾಭರಣ ಆದಿತಾಳ

ಚಂದ್ರಚೂಡ ಶಿವ ಶಂಕರ ಪಾರ್ವತಿರಮಣ ನಿನಗೆ ನಮೋ ನಮೋ ॥ ಸುಂದರ ಮೃಗಧರ ಪಿನಾಕಧನುಕರ ಗಂಗಾಶಿರ ಗಜಚರ್ಮಾಂಬರಧರ ॥ ॥ ಪ ॥ ನಂದಿವಾಹನಾನಂದದಿಂದ ಮೂಜಗದಿ ಮೆರೆವ ನೀನೆ । ಅಂದು ಅಮೃತಘಟದಿಂದುದಿಸಿದ ವಿಷ ತಂದು ಭುಜಿಸಿದವ ನೀನೆ ॥ ಕಂದರ್ಪನ ಕ್ರೋಧದಿಂದ ಕಣ್ದೆರೆದು ಕೊಂದ ಉಗ್ರನು ನೀನೆ। ಇಂದಿರೇಶ ಶ್ರೀರಾಮನ ನಾಮವ ಚಂದದಿ ಪೊಗಳುವ ನೀನೆ ॥ ೧ ॥ ಬಾಲ ಮೃಕಂಡನ ಕಾಲನು ಎಳೆವಾಗ ಪಾಲಿಸಿದವ ನೀನೆ । ಕಾಲಕೂಟವನು ಪಾನಮಾಡಿದ ನೀಲಕಂಠನು ನೀನೆ ॥ ವಾಲಯದಿ ಕಪಾಲ ಪಿಡಿದು ಬಿಕ್ಷೆಬೇಡೋ ದಿಗಂಬರ ನೀನೆ । ಜಾಲ ಮಾಡಿದ ಗೋಪಾಲನೆಂಬ ಹೆಣ್ಣಿಗೆ ಮರುಳಾದವ ನೀನೆ ॥೨॥ ಧರೆಗೆ ದಕ್ಷಿಣ ಕಾವೇರಿ ತೀರ ಕುಂಭಪುರವಾಸನು ನೀನೆ। ಕರದಲಿ ವೀಣೆಯ ಗಾನವ ಮಾಡುವ ಉರಗಭೂಷಣ ನೀನೆ ॥ ಕೊರಳಲಿ ಭಸ್ಮ

ರುದ್ರಾಕ್ಷಿ ಧರಿಸಿದ ಪರಮ ವೈಷ್ಣವ ನೀನೆ । ಗರುಡಗಮನ ಶ್ರೀಪುರಂದರ ವಿಠ್ಠಲಗೆ ಪ್ರಾಣಪ್ರಿಯನು ನೀನೆ ॥೩॥

## ೧೧೦ ರಾಗ ಖರಹರ ಮಟ್ಟೆತಾಳ

ಇಂದು ನಿನ್ನ ಮರೆಯಹೊಕ್ಕೆ ವೆಂಕಟೇಶನೆ। ಎಂದಿಗಾದರೆನ್ನ ಕಾಯೊ ಶ್ರೀನಿವಾಸನೆ ॥ ಪ ॥ ಶೇಷಗಿರಿಯ ವಾಸ ಶ್ರೀಶ ದೋಷರಹಿತನೆ । ಏಸು ದಿನಕು ನಿನ್ನ ಪಾದದಾಸನು ನಾನೆ । ಕ್ಲೇಶಗೈಸದಿರು ಎನ್ನ ಸ್ವಾಮಿಯು ನೀನೆ ॥೧॥ ಕಮಲಜನಕ ಕಾಮಜನಕ ಕರುಣವಾರಿಧೇ । ರಮೆಯನಾಳ್ವ ಕಮಲನಾಭ ಹೇ ದಯಾನಿಧೇ । ಯಮನ ಪುರದಿ ಶಿಕ್ಷಿಸದಿರು ಪಾರ್ಥ ಸಾರಥೇ ॥೨॥ ಉರಗಶಯನ ಸುರರಿಗೊಡೆಯ ಸಿರಿಯ ರಮಣನೆ । ಶರಣ ಪಾಲ ಬಿರುದು ತೋರಿ ಪೊರೆವ ದೇವನೆ । ಕರುಣಿಸೆನಗೆ ಮುಕುತಿಯ ಪುರಂದರವಿಠಲನೆ ॥ ೩ ॥

## ೧೧೧ ರಾಗ ಮುಖಾರಿ ಝಂಪೆತಾಳ

ಬಲವು ಬಲವೇ ನಿನ್ನ ಬಲವಲ್ಲದೆ । ಮಿಕ್ಕ । ಬಲಗಳುಂಟೆ ಬಣಗು ಗ್ರಹಗಳಿಂದ ॥ಪ॥ ಹರಿ ನಿನ್ನ ಕೃಪೆಯೆನಗೆ ಚಂದ್ರ ತಾರಾಬಲವು । ಹರಿ ನಿನ್ನ ಕರುಣವೇ ರವಿಯ ಬಲವು ॥ ಹರಿ ನಿನ್ನ ಮೋಹವೇ ಎನಗೆ ಗುರು ಭೃಗು ಬಲವು । ಹರಿ ನಿನ್ನ ಒಲುಮೆಯೇ ಶನಿಯ ಬಲವು ॥೧॥ ಮಂಗಳ ಮಹಿಮ ನಿನ್ನ ಅಂಗದರುಶನ ಸುಖದ । ಮಂಗಳನ ಬಲವು ಎನ್ನಂಗಕೆ ಸದಾ ॥ ರಂಗ ನಿನ್ನಯ ಚರಣ ಕಂಗಳಲಿ ನೋಡುವುದು । ಹಿಂಗದೆ ಸುಖವನೀವ ಸೌಮ್ಯಬಲವಯ್ಯ॥೨॥ ಆದಿಮೂರುತಿ ನಿನ್ನನರಿವುದೇ ರಾಹು ಬಲ । ಆದಿಮೂಲನೆ ನಿನ್ನ ಗುಣಕಥನವ ॥ ಆದರಿಸಿ ಕೊಂಡಾಡುತಿಹು ದೆನಗೆ ಕೇತುಬಲ । ಆದಿಮಹಿಮನೆ ಮಹಾ ಪುರಂದರವಿಠಲ ॥೩॥

## ೧೧೨ ರಾಗ ಕಾಂಭೋಜಿ ಅಟತಾಳ

ಮಾನಹೀನನಿಗಭಿಮಾನವೇಕೆ ॥ಪ॥ ಜ್ಞಾನವಿಲ್ಲದವಂಗೆ ಗುರುಬೋಧೆ ಯೇಕೆ ॥ ಅ ॥ ಕಾಡೊಳಗೆ ತಿರುಗುವಗೆ ಕನಕಭೂಷಣವೇಕೆ । ಓಡೊಳಗೆ

ತಿಂಬುವಗೆ ಹರಿವಾಣವೇಕೆ ॥ ಬೇಡಿದರೆ ಕೊಡದಿಹಗೆ ಕಡು ಬಿಂಕತನ ವೇಕೆ। ಪಾಡಲರಿಯದವಂಗೆ ಪ್ರೌಢತನವೇಕೆ ॥ ೧ ॥ ಅಂಬಲಿಯನುಂಬ ವಗೆ ಅಮೃತಾನ್ನವದೇಕೆ। ಕಂಬಳಿಯ ಹೊದೆವವಗೆ ಮಡಿಯೇತಕೆ ॥ ಡೊಂಬಾಟಕಿಕ್ಕುವಗೆ ಗಾಂಭೀರ್ಯತನವೇಕೆ । ಹಂಬಲವ ಬಿಡದವಗೆ ಹರಿನಾಮವೇಕೆ ॥೨॥ ಭೂಸುರರ ಕೊಲುವವಗೆ ಭೂರಿಮರ್ಗಗಳೇಕೆ। ಭಾಷೆ ಗೆಟ್ಟವಗೆ ನಂಬುಗೆಯೇತಕೆ ॥ ಕ್ಲೇಶ ಒಡಲೊಳಗಿರಲು ತೀರ್ಥಯಾತ್ರೆ ಗಳೇಕೆ । ಆಸೆ ಬಿಡದವಗೆ ಸಂನ್ಯಾಸವೇಕೆ ॥ ೩ ॥ ಮಿತಿಮೀರಿ ನಡೆವವಗೆ ವ್ರತನೇಮಗಳು ಏಕೆ । ಸತಿಗೆ ಅಳುಕುವನ ಸಾಹಸವು ಏಕೆ ॥ ಮತಿಶುದ್ಧಿ ಯಿಲ್ಲದಾ ಮಂತ್ರತಂತ್ರಗಳೇಕೆ। ಗತಿಯ ಚಿಂತಿಸದವನ ವಿಪ್ರತ್ವವೇಕೆ॥೪॥ ಸಾಮಾನ್ಯನಿಗೆ ಸಾರ್ವಭೌಮ ಪದವಿಂಬೇಕೆ। ಪ್ರೇಮವಿಲ್ಲದ ಬಂಧು ಜನವೇತಕೆ ॥ ಸ್ವಾಮಿ ಶ್ರೀಪುರಂದರವಿಠ್ಠಲನ ನೆನೆಯದಿಹ । ತಾಮಸಾಧ ಮನಿಗೆ ಕೈವಲ್ಯವೇಕೆ ॥ ೫ ॥

## ೧೧೩ ರಾಗ ಸಾವೇರಿ ಆದಿತಾಳ

ತನಗಿಲ್ಲದಾ ವಸ್ತುವೆಲ್ಲಿದ್ದರೇನು । ತನ್ನ। ಮನಕೆ ಬಾರದ ಹೆಣ್ಣು ಮೆಚ್ಚಿ ಬಂದರೇನು ॥ಪ॥ ಆದರಣೆಯಿಲ್ಲ ದೂಟವಮೃತಾನ್ನವಾದರೇನು । ವಾದಿ ಸುವ ಸತಿಸುತರು ಇದ್ದು ಫಲವೇನು ॥ ಕ್ರೋಧವನು ಬೆಳೆಸುವ ಸೋದರಿ ಗರಿದ್ದರೇನು । ಮಾದಿಗನ ಮನೆಯಲ್ಲಿ ಮದುವೆಯಾದರೇನು ॥ ೧ ॥ ಸಾವಿ ಗಿಲ್ಲದೌಷಧಿಯು ಸಂಚಿತುಂಬ ಇದ್ದರೇನು । ದೇವಕೀಸುತನ್ನೊಗಳದ ಕವಿತ್ವವೇನು ॥ ಹೇವವಿಲ್ಲದ ಗಂಡು ಹೆಚ್ಚಾಗಿ ಬಾಳಿದರೇನು । ಹಾವಿನ ಹೆಡೆಯೊಳಗೆ ಹಣವಿದ್ದರೇನು ॥೨॥ ಸನ್ಮಾನ ಮಾಡದ ದೊರೆ ಸಾವಿರಾರು ಕೊಟ್ಟರೇನು । ತನ್ನ ತಾ ತಿಳಿಯದ ಜ್ಞಾನವೇನು ॥ ಚೆನ್ನಾಗಿ ಪುರಂದರ ವಿಠಲನ ನೆನೆಯದವ । ಸಂನ್ಯಾಸಿಯಾದರೇನು ಷಂಢನಾದರೇನು ॥೩॥

## ೧೧೪ ರಾಗ ಹಿಂದೋಳ ಆದಿತಾಳ

ಯಾರೆ ರಂಗನ ಯಾರೆ ಕೃಷ್ಣನ। ಯಾರೆ ರಂಗನ ಕರೆಯಬಂದದರು॥ ॥ಪ॥ ಗೋಪಾಲಕೃಷ್ಣನ ಪಾಪವಿನಾಶನ । ಈ ಪರಿಯಿಂದಲಿ ಕರೆಯ

ಬಂದವರು ||೧|| ವೇಣುವಿನೋದನ ಪ್ರಾಣಪ್ರಿಯನ | ಜಾಣೆಯರರಸನ ಕರೆಯಬಂದವರು ||೨|| ಕರಿರಾಜವರದನ ಪರಮಪುರುಷನ| ಪುರಂದರ ವಿಠಲನ ಕರೆಯಬಂದವರು || ೩ ||

## ೧೧೫ ರಾಗ ಪಂತುವರಾಳಿ ಅಟತಾಳ

ರೊಕ್ಕ ಎರಡಕ್ಕು ದುಃಖ ಕಾಣಕ್ಕ||ಪ|| ಮಕ್ಕಳ ಮರಿಗಳ ಮಾಡೋದು ರೊಕ್ಕ | ಸಕ್ಕರೆ ತುಪ್ಪವ ಸವಿಸೋದು ರೊಕ್ಕ || ಕಕ್ಕುಲತೆಯನು ಬಿಡಿಸೋದು ರೊಕ್ಕ| ಫಕ್ಕನೆ ಹೋದರೆ ಘಾತ ಕಾಣಕ್ಕ ||೧|| ನೆಂಟರ ಇಷ್ಟರ ಮರೆಸೋದು ರೊಕ್ಕ | ಕಂಟಕಗಳ ಪರಿಹರಿಸೋದು ರೊಕ್ಕ || ಗಂಟು ಕಟ್ಟಲಿಕ್ಕೆ ಕಲಿಸೋದು ರೊಕ್ಕ| ತುಂಟತನಗಳ ಬಲಿಸೋದು ರೊಕ್ಕ ||೨|| ಇಲ್ಲದ ಗುಣಗಳ ತರಿಸೋದು ರೊಕ್ಕ | ಸಲ್ಲದ ನ್ಯಾಯವ ನಡಿಸೋದು ರೊಕ್ಕ || ಬೆಲ್ಲಕಿಂತಲು ಬಹು ಸವಿಯಾದ ರೊಕ್ಕ | ಇಲ್ಲದಿರಲು ಬಹು ದುಃಖ ಕಾಣಕ್ಕ ||೩|| ಉಂಟಾದ ಗುಣಗಳ ಮರೆಸೋದು ರೊಕ್ಕ | ಬಂಟರ ನೆಲ್ಲರ ಬರಿಸೋದು ರೊಕ್ಕ || ಕಂಠಿ ಸರಿಗೆಯನು ಗಳಿಸೋದು ರೊಕ್ಕ | ಒಂಟೆ ಕುದುರೆ ಆನೆ ತರಿಸೋದು ರೊಕ್ಕ || ೪ || ವಿದ್ಯದ ಮನುಜರ ಕರೆಸೋದು ರೊಕ್ಕ | ಹೊದ್ದಿದ ಜನರನು ಬಿಡಿಸೋದು ರೊಕ್ಕ || ಮುದ್ದು ಪುರಂದರ ವಿಠಲನ ಮರೆಸುವ | ಬಿದ್ದ್ಹೋಗೋ ರೊಕ್ಕವ ಸುಡು ನೀನಕ್ಕ ||೫||

## ೧೧೬ ರಾಗ ಸಾವೇರಿ ಝಂಪೆತಾಳ

ಆರು ಸರಿ ನಿನಗೆ ಬ್ರಹ್ಮಾಂಡದೊಳಗೆ | ವೀರ ರಾಮನ ಬಂಟ ಧೀರ ಹನುಮಂತ || ಪ || ತೆಂಕಜಲಧಿಯ ಲಘುವಿಂದ ದಾಟಿ ಅಕ | ಕಂಕ ರಾಮನ ಬೆರಳ ಮುದ್ರಿಕೆಯನು|| ಲಂಕಾವಿದೆಂದು ಕೊಟ್ಟವನಿಜೆಯ ಸಂತಯಿಸಿ | ಲಂಕೆಯನುರುಪಿದೆ ನಿಶ್ಯಂಕ ಹನುಮಂತ ||೧|| ಅಂಡಲೆದು ದಶವದನನಸುರ ಪಡೆಗಳ ಕಡಿದು | ಖಂಡತುಂಡನು ಮಾಡಿ ಕಲಿರಾಮರ || ದಂಡಿಲೊಬ್ಬರ ನೋಯವಂತೆ ಕಾದಿಸಿ ಖಳರ| ಹಿಂಡುಗಳ ಕೂಡ ಉದ್ದಂಡ

ಹನುಮಂತ ||೨|| ಅಸುರಬಲ ವಾನರರ ಕುಸುರಿ ಇರಿಯಲು ಭರ | ವಸಿ ಯಿಂದ ಸಂಜೀವನವ ತಂದು || ಅಸುಬಿ ವಾನರರಿಗೋಸುಗ ಗಿರಿಯನೆತ್ತಿ ಚಿ | ಮ್ಮಿಸಿ ನೆಲಕೆ ನಿಲಿಸಿದೆ ನೀ ಅಸಮ ಹನುಮಂತ ||೩|| ಪರರಿಗಸದಳ ವೆನಿಪ ನಿಜಬಲರೊಡೆಯ ಪಂಥ | ಸಿರಿಯುರಕ್ಕೆರಗಿ ಎಸೆದಾಗ ಬೀಳೆ || ಅರಸು ರಾಮರ ಪಂಥಕಡ್ಡಲಾದೆನು ಎಂದು | ಮರುಗಿದ ಮಹಾತ್ಮನುದ್ದು ರುಟು ಹನುಮಂತ||೪|| ಭೂಮಿಜಾತೆಯ ಮುಖಾಂಬುಜಮಿತ್ರನಾದ ಸಿರಿ| ರಾಮ ಗುರು ಪುರಂದರವಿಠ್ಠಲನು || ತಾ ಮನದಿ ನಿಶ್ಚಯಿಸಿ ಬೇಡೆನಲು ತನ ಪಾದ | ದಾ ಮಹಾಸೇವೆ ಸಾಕೆಂದ ಹನುಮಂತ ||೫||

## ೧೧೭ ರಾಗ ಬೇಗಡೆ ಛಾಪುತಾಳ

ಸೈಸಲಾರೆನೆ ಗೋಪಿ ನಿನ್ನ ಮಗನ ಲೂಟಿ | ಏನೆಂದು ಪೇಳಲಮ್ಮ || || ಪ || ವಾಸುದೇವನು ಬಂದು ಮೋಸದಿಂದಲಿ ಎನ್ನ | ವಾಸವ ಸೆಳ ಕೊಂಡು ಓಡಿಪೋದನಮ್ಮ ||ಅ|| ದೇವರ ಪೆಟ್ಟಿಗೆ ತೆಗೆದು ಶಾಲಗ್ರಾಮ | ಸಾವಿರ ನುಂಗುವನೆ|| ಭಾವಜನಯ್ಯ ಇದೇನೆಂದರೆ ನಿಮ್ಮ | ಕಾವ ದೇವರು ನಾ ಕೇಳಿಕೊ ಎಂಬನೆ || ೧ || ಅಗ್ರೋದಕ ತಂದು ಜಗಲಿ ಮೇಲಿಟ್ಟರೆ | ವೆಗ್ಗಳದಲಿ ಕುಡಿವ || ಮಂಗಳಮಹಿಮನ ಮೀಸಲೆಂದರೆ ನಿಮ್ಮ | ಮಂಗಳ ಮಹಿಮನ ಅಪ್ಪ ನಾನೆಂಬನೆ ||೨|| ಅಟ್ಟಡುಗೆಯನೆಲ್ಲ ಉಚ್ಛಿಷ್ಟ ಮಾಡಿ | ಅಷ್ಟು ತಾ ಬಳಿದುಂಬನೆ|| ಕೃಷ್ಣದೇವರ ನೇವೈದ್ಯವೆಂದರೆ ನಿಮ್ಮ | ಇಷ್ಟ ದೇವರು ತೃಪ್ತನಾದನೆಂತೆಂಬನೆ || ೩ || ಋತುವಾದ ಬಾಲೆಯರು ಪತಿ ಯೆಡೆಗೆ ಪೋಪಾಗ | ಪಥದೊಳಗಡಗಿರುವ || ಮತಿಗೆಟ್ಟ ಹೆಣ್ಣೆ ಸುಂಕವ ಕೊಡು ಎನುತಲಿ | ರತಿಯಿಂದ ಮಾನವ ಸೂರೆಗೊಂಬುವನೆ ||೪|| ಅಚ್ಚ ಪಾಲ್ಮೊಸರು ನವನೀತವು ಮಜ್ಜಿಗೆ | ರಚ್ಚೆ ಮಾಡಿ ಕುಡಿವ || ಸ್ವಚ್ಛ ಶ್ರೀ ಪುರಂದರವಿಠ್ಠಲರಾಯನ| ಇಚ್ಛೆಯಿಂದಲಿ ನಿನ್ನ ಮನೆಗೆ ಕರೆದುಕೊಳ್ಳೆ||೫||

## ೧೧೮ ರಾಗ ಕಲ್ಯಾಣಿ ಅಟತಾಳ

ನಂಬಿ ಕೆಟ್ಟವರಿಲ್ಲವೋ | ರಂಗಯ್ಯನ | ನಂಬಲಾರದೆ ಕೆಟ್ಟರು || ಪ || ಅಂಬುಜನಾಭನ ಪಾದವ ನೆನೆಯೆ ಭ | ವಾಂಬುಧಿದುಃಖವ ಪರಿಹರಿಸುವ

ಕೃಷ್ಣ ॥ ಅ ॥ ಬಲಿಯ ಪಾತಾಳಕ್ಕೆ । ಇಳಿಸಿ ಭಕ್ತ । ಗೊಲಿದು ಬಾಗಿಲ ಕಾಯ್ದನು ॥ ಛಲದೊಳು ಅಸುರನ ಶಿರಗಳ ತರಿದು ತಾ। ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಕೃಷ್ಣ ॥೧॥ ತರಳ ಪ್ರಹ್ಲಾದಗೊಲಿದು। ಉಗುರಿನಿಂದ। ಹಿರಣ್ಯನುದರ ಸೀಳಿದ ॥ ಕರಿರಾಜಗೊಲಿದು ನೆಗಳು ನುಂಗುತಿರಲಾಗಿ । ಶಿರವ ತರಿದು ಕಷ್ಟ ಪರಿಹರಿಸಿದ ಕೃಷ್ಣ ॥ ೨ ॥ ಪಾಂಡವರಿಂಗೊಲಿದು । ಕೌರವರನ್ನು । ತುಂಡು ಛಿದ್ರವ ಮಾಡಿದ ॥ ಅಂಡಲೆದು ದ್ರೌಪದಿ ಸಭೆಯೊಳು ಕೂಗೆ । ಬಂದು ಕಾಯ್ದ ಶ್ರೀಪುರಂದರವಿಠಲ ॥೩॥

## ೧೧೯ ರಾಗ ಸೌರಾಷ್ಟ್ರ ಅಟತಾಳ

ಕೈಮೀರಿ ಹೋದ ಮಾತಿಗೆ ಹುಡುಕಾಡಬಾರದು॥ಪ॥ ಮಾತು ಕೇಳದ ಮಕ್ಕಳ ಹೆಸರು ತೆಗೆಯಬರದು । ತನ್ನ । ಪ್ರೀತಿ ಇಲ್ಲದ ಪತಿಯ ಕಂಡು ಹಿಗ್ಗಬಾರದು ॥ ೧ ॥ ಜಾರತ್ವ ಮಾಡೊ ಪತ್ನಿಯ ಕೂಡಿ ಆಳಬಾರದು । ವೈರತ್ವ ಮಾಳ್ಪವರ ಸೊಲ್ಲು ಕೇಳಬಾರದು ॥೨॥ ದುಷ್ಟೆ ಕರ್ಕಶಿ ಸ್ತ್ರೀಯಳ ಹೆಸರು ತೆಗೆಯಬಾರದು । ಹತ್ತು ಮಂದಿಗಂಜದವನ ಸ್ನೇಹಿಸಬಾರದು ॥ ॥೩॥ ಪಂಕ್ತ್ಯಾಗೆ ಪರಪಂಕ್ತಿಯನ್ನು ಮಾಡಬಾರದು । ಮಂಕು ಜೀವನಾಗಿ ಮುಕ್ತಿ ಬೇಡಬಾರದು ॥ ೪ ॥ ಆಚಾರಹೀನನ ಮನೆಯೊಳೂಟ ಮಾಡಬಾರದು । ವಿಚಾರ ಇಲ್ಲದ ಸಭೆಯೊಳು ಕೂಡ್ರಬಾರದು ॥ ೫ ॥ ಪರಪುರುಷರಿದ್ದೆಡೆಯೊಳೊಬ್ಬಳಿರಲು ಬಾರದು । ಸ್ವಾಮಿ ಪುರಂದರವಿಠಲನ ಧ್ಯಾನ ಮರೆಯಬಾರದು ॥ ೬ ॥

## ೧೨೦ ರಾಗ ಸುರುಟಿ ಆದಿತಾಳ

ಎತ್ತ ಪೋದನಮ್ಮ । ವಿಪ್ರನ । ಎಲ್ಲಿ ಹುಡುಕಲಮ್ಮ ॥ಪ॥ ಮುತ್ತಿನ ಮೂಗುತಿ ಮುಕ್ತಿಲಿ ಬ್ರಾಹ್ಮಣ । ಇಕ್ಕೊ ಈಗಲೆಂದು ಮಾಯವಾದನು ॥ ॥ಅ॥ ಪಂಢರಪುರವಂತೆ । ಅಲ್ಲಿ । ಪಾಂಡುರಂಗನಂತೆ ॥ ತಂಡತಂಡದಿ ಹರಿ ಕೀರ್ತನೆ ಮಾಡುತ । ಕಂದನ ಲಗ್ನಕೆ ಪೋಗಬೇಕೆನುತ ॥ ೧ ॥ ಅಂದಿನ ದಿನದಲ್ಲಿ । ನಾರಿಯು । ಕಂಭಕ್ಕೆ ಕಟ್ಟಿರಲು ॥ ಮಂದರೋದ್ಧರನ ಮೊರೆ

ಯಿಟ್ಟು ಕೂಗಲು । ಬಂಧನ ಬಿಡಿಸಿ ಮುಕುತಿಯ ಕೊಟ್ಟನು ॥೨॥ ಪತ್ನಿ ಪತಿಯರ ಕೂಡಿ। ಬಹಳ ಅನ್ನದಾನ ಮಾಡಿ ॥ ಕನಕಾಭರಣವನೀಯಲು ಪತಿವ್ರತೆ । ಪುರಂದರವಿಠಲನ ಪಾದ ಸೇರಿದಳು ॥೩॥

### ೧೨೨ ರಾಗ ಕಾಂಭೋಜಿ ಝಂಪೆತಾಳ

ಆರೇನು ಮಾಡುವರು ಅವನಿಯೊಳಗೆ ॥ ಪ ॥ ಪೂರ್ವಜನ್ಮದ ಕರ್ಮ ಹಣೆಯಲಿ ಬರೆದುದಕೆ ॥ಅ॥ ಮಾಡಿದಡುಗೆಯು ಕೆಡಲು ಮನೆಯ ಗಂಡನು ಬಿಡಲು । ಕೂಡಿದ್ದ ಸತಿ ತಾನು ಕುಣಿಸ್ಯಾಡಲು ॥ ಗೋಡೆ ಬರೆದ ಹುಲಿ ಘುಡಿಘುಡಿಸಿ ತಿನಬರಲು। ಆಡದ ಮಾತುಗಳು ಅಖಿಳರೂ ನಿಜವೆನಲು॥೧॥ ಹೊಲ ಬೇಲಿ ಮೆದ್ದರೆ ಮೊಲವೆದ್ದು ಇರಿದರೆ। ತಲೆಗೆ ತನ್ನ ಕೈಪೆಟ್ಟು ತಾಗಿದರೆ ॥ ಹೆಳಲು ಹಾವಾದರೆ ಗೆಳೆಯ ರಿಪುವಾದರೆ । ಕಲಸಿಟ್ಟ ಅವಲಕ್ಕಿ ಕಲಪರಟೆ ನುಂಗಿದರೆ ॥೨॥ ಹೆತ್ತ ತಾಯ್ ಮಕ್ಕಳಿಗೆ ಹಿಡಿದು ವಿಷ ಹಾಕಿದರೆ । ಮತ್ತೆ ತಂದೆಯು ಹೊರಗೆ ಮಾರಿದರೆ ॥ ತೊತ್ತು ಅರಸಿಗಿ ಪ್ರತಿ ಉತ್ತರವನಾಡಿದರೆ। ಕತ್ತಲೆಯು ಬೆನ್ನಟ್ಟಿ ಕರಡ್ಯಾಗಿ ಕಚ್ಚಿದರೆ ॥೩॥ ಕಣ್ಣಿನೊಳಗಿನ ಬೊಂಬೆ ಕಚ್ಚ್ಯಾಡಬಂದರೆ । ಹೆಣ್ಣಿನ ಹೋರಾಟ ಹೆಚ್ಚಾದರೆ ॥ ಅನ್ನ ಉಣ್ಣದೆ ಬಹಳ ಅಜೀರ್ಣವಾದರೆ । ಪುಣ್ಯತೀರ್ಥಗಳಲ್ಲಿ ಪಾಪ ಘಟಿಸಿದರೆ ॥೪॥ ಏರಿ ಕುಳಿತ ಕೊಂಬೆ ಎರಡಾಗಿ ಮುರಿದರೆ । ಮೇರೆ ತಪ್ಪಿ ವಿಧಿಯು ಮೀರಿದರೆ ॥ ಆರಿದ್ದ ಇದ್ದಲಿಯು ಅಗ್ನಿಯಾಗುರಿದರೆ । ಧೀರ ಪುರಂದರವಿಠಲ ನಿನ್ನ ದಯ ತಪ್ಪಿದರೆ ॥೫॥

### ೧೨೩ ರಾಗ ಭೈರವಿ ಛಾಪುತಾಳ

ಕೊಡು ಕಂಡ್ಯ ಹರಿಯೆ । ನಿನ್ನ ನಾಮವ ॥ ಪ ॥ ನಾ ಬಡವನೆಂದು ನಿನ್ನ ಕಾಡುವನಲ್ಲವೊ ॥ ಅ ॥ ಒಡಲು ತುಂಬದು ಎಂದು ಬಳಲಿಸಬರಲಿಲ್ಲ । ಸಡಗರದ ಭಾಗ್ಯ ಬೇಡಲಿಲ್ಲ॥ ಮಡದಿ ಮಕ್ಕಳಿಗಾಗಿ ಕಡು ಮೋಹ ಎನಗಿಲ್ಲ । ಬಿಡದೆ ನಿನ್ನಯ ನಾಮಸ್ಮರಣೆಯೊಂದೇ ಸಾಕೊ ॥೧॥ । ಸ್ನಾನ ಮೌನ ಜಪತಪಗಳು ಎನಗಿಲ್ಲ। ಮೌನನಾದೆನೊ ನಿನ್ನ । ಧ್ಯಾನದಿಂದ ॥

ದೀನರಕ್ಷಕ ನೀನೆ ದಯದಿಂದಲೆನ್ನನು । ಧ್ಯಾನಬುದ್ಧಿ ಯನಿತ್ತು ಸಲಹಯ್ಯ ಹರಿಯೆ ॥ ೨ ॥ ಬಲೆಗೆ ಸಿಲುಕಿದ ಮೃಗದಂತೆ ಬಾಯಿಬಿಡುತ । ಅಲಸಿ ಕೋಟಲೆ ಸಂಸಾರದಿಂದ ॥ ತಲೆಹುಳುತ ನಾಯಂತೆ ಬಯಲಾಸೆಗೆ ಸಿಲುಕಿದೆ । ಸಲಹೊ ದೇವರ ದೇವ ಪುರಂದರವಿಠಲ ॥೩॥

## ೧೨೪ ರಾಗ ಕಾಂಭೋಜಿ ಆದಿತಾಳ

ಬೇಡಮನವೆ ಬೇಡಿಕೊಂಬೆನೊ ನಾನು । ಕಾಡದಿರು ಕಪಟದಿ ಮನವೆ ॥ಪ॥ ಮಾಡದಿರು ಮತ್ಸರವ ಪರರಿಗೆ ತನ್ನವರಿಗೆ । ಕೇಡನೆಣಿಸಲು ಬೇಡ ಮನವೆ ॥ ಅ ॥ ಸಿಟ್ಟಿನಿಂದೊಬ ನನು ಕೆಟ್ಟ ನುಡಿಯಲು ಬೇಡ । ನಿಟ್ಟಿ ಮುನಿವರು ಕೇಳು ಮನವೆ ॥ ಕೊಟ್ಟ ಸಾಲವನು ನೀ ಕೊಡದೆ ಬಾಯ್ಬಿಡೆದರೆ । ಕಷ್ಟ ತಪ್ಪದು ! ಕೇಳು ಮನವೆ ॥೧॥ ಸರಿಯಲ್ಲದವರೊಡನೆ ಸಮನಾಗಿ ಕಾದಿದರೆ । ಹಿರಿಯತನ ಕೆಡುವುದೈ ಮನವೆ ॥ ನೆರೆನಂಬಿದವರ ದೊಡ್ಡವರ ಮಾಡಿವರೆ । ಹಿರಿಯತನ ಅದರಿಂದ ಮನವೆ॥೨॥ ಚಾಡಿಯನು ಹೇಳಿ ದಂಡವನು ತೆರಿಸಿದಾತಗೆ। ನಾಡೆಲ್ಲ ಹಗೆ ಕೇಳು ಮನವೆ ॥ ಕೂಡಿದ್ದ ಗೆಳತನವನಗಲಿಸಿದವನಿಗೆ । ಕೇಡು ತಪ್ಪದು ಕೇಳು ಮನವೆ ॥೩॥ ಹೆಂಡತಿಯ ಪರರಲ್ಲಿ ಬಿಡುವುದು ಬಹು ಲಜ್ಜೆ । ಭಂಡನೆನುವರು ಕೇಳು ಮನವೆ॥ ಉಂಡ ಮನೆಗೆರಡನ್ನು ಬಗೆದವನು ಸಂಗ ಬೇ । ಡೆಂದೆಂದಿಗೂ ಕೇಳು ಮನವೆ ॥೪॥ ವಂದನೆಯ ಮಾಡಿ ಗುರುಹಿರಿಯರ ಪಾದಗಳ । ಕಂಡು ನೀ ಶುಚಿಯಾಗು ಮನವೆ ॥ ತಂದೆ ಶ್ರೀಪುರಂದರವಿಠಲನ್ನ ಪಾದವ । ಪೊಂದಿ ನೀ ಸುಖಿಯಾಗು ಮನವೆ ॥೫॥

## ೧೨೫ ರಾಗ ನಾಟಿ ಝಂಪೆತಾಳ

ಜಯತು ಕೋದಂಡರಾಮ । ಜಯತು ದಶರಥರಾಮ ॥ ಜಯತು ಸೀತಾರಾಮ । ಜಯತು ರಘುರಾಮ ॥ ಜಯತು ಜಯತು ॥ ಪ ॥ ತಮದೈತ್ಯನನು ಮಡುಹಿ ಮಂದರಾಚಲ ನೆಗಹಿ। ಪ್ರೀತಿಯಿಂದಲೆ ತಂದು ಸಕಲಭೂತಳವ ॥ ಕ್ಷೇತ್ರದಿಂದುದ್ಭವಿಸಿ ಮೊರೆಯಿಡುವ ಬಾಲಕನ । ಭೀತಿ

ಯನು ಬಿಡಿಸಿ ನೆರೆ ಕಾಯ್ದ ರಘುರಾಮ || ಜಯತು || ೧ || ಬಲಿಯೊಳ್ ದಾನವ ಬೇಡಿ ನೆಲನ ಈರಡಿ ಮಾಡಿ | ಛಲದಿಂದ ಕ್ಷತ್ರಿಯರ ಕುಲವ ಹೋಗಾಡಿ || ಲಲನೆಗೋಸುಗ ಬಂದ ನೆವದಿಂದ ರಾವಣನ | ತಲೆಗಳನು ಚೆಂಡಾಡಿ ಮೆರೆದ ರಘುರಾಮ || ಜಯತು || ೨ || ವಸುದೇವಸುತನೆನಿಸಿ ವನಿತೆಯರ ವ್ರತಗೆಡಿಸಿ| ಎಸೆವ ತುರುಗವನೇರಿ ಮಲ್ಲರನು ಸವರಿ|| ವಸುಧೆ ಯೊಳು ಪುರಂದರವಿಠಲನ ನೀ ಪಾಲಿಸೈ | ಬಿಸಜಾಕ್ಷಯೋಧ್ಯೆಪುರವಾಸ ರಘುರಾಮ || ಜಯತು ||೩||

## ೧೨೬ ರಾಗ ಹಿಂದುಸ್ಥಾನಿ ಕಾಪಿ ಏಕತಾಳ

ವೇಂಕಟಾಚಲನಿಲಯಂ | ವೈಕುಂಠಪುರವಾಸಂ || ಪಂಕಜನೇತ್ರಂ ಪರಮ ಪವಿತ್ರಂ | ಶಂಖಚಕ್ರಧರಚಿನ್ಮಯರೂಪಂ ||ಪ|| ಅಂಬುಜೋದ್ಭವ ವಿನುತಂ | ಅಗಣಿತಗುಣನಾಮಂ || ತುಂಬುರುನಾರದಗಾನವಿಲೋಲಂ | ಅಂಬುಧಿ ಶಯನಂ ಆತ್ಮಾಭಿರಾಮಂ ||೧|| ಪಾಹಿ ಪಾಂಡವಪಕ್ಷಂ| ಕೌರವ ಮದ ಹರಣಂ || ಬಾಹುಪರಾಕ್ರಮ ಪೂರ್ಣಂ | ಅಹಲ್ಯಾಶಾಪಭಯ ನಿವಾರಣಂ || ೨ || ಸಕಲವೇದವಿಚಾರಂ | ಸರ್ವಜೀವನಿಕರಂ || ಮಕರ ಕುಂಡಲಧರ ಮದನಗೋಪಾಲಂ | ಭಕುತಪೋಷಕ ಶ್ರೀಪುರಂದರ ವಿಠಲ ||೩||

## ೧೨೭ ರಾಗ ರೇಗುಪ್ತಿ ಛಾಪುತಾಳ

ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟುಕುರುಡನೋ ||ಪ|| ಸಂತತ ಶ್ರೀಕೃಷ್ಣ ಚರಿತೆ ಕೇಳದವ ಜಡಮತಿ ಕಿವುಡನೊ || ಎಂದೆಂದಿಗೂ || ಅ || ಹರುಷದಿಂದಲಿ ಹರಿಯ ಪೂಜೆ ಮಾಡದವ ಕರವು ಮುರಿದವನೋ | ಸುರ ವರನ ಮುಂದೆ ಶ್ರೀಕೃಷ್ಣಾ ಎಂತೆಂದು ಕುಣಿಯದವನೆ ಕುಂಟನೊ || ನರ ಹರಿ ಚರಣೋದಕ ಧರಿಸದಶಿರ ನಾಯಿಬಿಂಬೋ ಹಂಚು ಕಾಣೊ | ಸಿರಿವರ ಗರ್ಪಿಸದಲೆ ಮಾಡಿದ ಊಟ ಸೂಕರಭೋಜನವೊ || ಎಂದೆಂದಿಗೂ || ೧ || ಅಮರೇಶ ಕೃಷ್ಣಗರ್ಪಿತವಲ್ಲದ ಕರ್ಮ ಅಸತಿಯ ವ್ರತನೇಮವೊ |ರಮೆಯ

ರಸನ ಪ್ರೀತಿಪಡಿಸವ ವಿತರಣೆ ರಂಡೆಕೊರಳ ಸೂತ್ರವೊ ॥ ಕಮಲನಾಭನ ಪೊಗಳದ ಸಾರಸಂಗೀತ ಗಾರ್ದಭರೋದನವೊ । ಮಮತೆಯಿಂದಲಿ ಕೇಶವಗೆ ನಮಸ್ಕಾರ ಮಾಡದವನೆ ಖಳನೊ ॥ ಎಂದೆಂದಿಗು ॥೨॥ ಜರೆ ಹುಟ್ಟು ಮರಣ ಕಡೆಯು ಸುದ್ದಿಯು ಬಿಟ್ಟು, ನರರ ಸೇವಿಸಬೇಡವೊ । ಸುರಧೇನು ಇರಲಾಗಿ ಕಾಣದೆ ಮೊಲೆಹಾಲು ಕರೆದು ಕುಡಿಯಬೇಡವೊ ॥ ಕರಿ ತುರಗವಿರಲು ಬಿಟ್ಟು ಕೆಡಹುವ ಕತ್ತೆಯೇರಲು ಬೇಡವೊ । ಪರಮಪುರುಷ ಪುರಂದರವಿಠಲನಿರಲು ನರರ ಭಜಿಸಬೇಡವೊ ॥ ಎಂದೆಂದಿಗೂ ॥೩॥

## ೧೨೮ ರಾಗ ಪಂತುವರಾಳಿ ಛಾಪುತಾಳ

ಯಾವಾಗಲು ಚಿಂತೆ ಜೀವಕ್ಕೆ ॥ಪ॥ ಈ ಜೀವ ಒಂದು ಪರಿಯಾಗೋ ತನಕ ॥ಅ॥ ಹೆಂಡತಿಲ್ಲದ ಚಿಂತೆ । ಹೆಂಡತಿದ್ದರು ಚಿಂತೆ । ಚಂಡಿ ಕುರೂಪಿಯಾದರು ಚಿಂತೆಯು ॥ ಕೊಂಡನಾಗಿ ಪೊತ್ತು ತಿರುಗುವ ಚಿಂತೆ ಭೂ। ಮಂಡಲದೊಳಗೆಲ್ಲ ಚಿಂತೆ ಕಾಣಣ್ಣ ॥೧॥ ಓಲೆಗಿಲ್ಲದ ಚಿಂತೆ । ಓಲೆಗಾದರು ಚಿಂತೆ । ಮೇಲೆ ಸಂಬಳ ಬಾರದ ಚಿಂತೆಯು ॥ ಸಾಲ ಕೊಡೋ ಚಿಂತೆ ಸಾಲ ತೆಗೆಯೋ ಚಿಂತೆ । ಮೂರ್ಲೋಕದೊಳಗೆಲ್ಲ ಚಿಂತೆ ಕಾಣಣ್ಣ ॥೨॥ ಮನೆಯಿಲ್ಲದ ಚಿಂತೆ। ಮನೆಯಾದರು ಚಿಂತೆ। ಮನೆಯ ವಾರ್ತೆ ನಡೆಯದ ಚಿಂತೆಯು ॥ ಮನಸಿಜನಯ್ಯ ಶ್ರೀಪುರಂದರವಿಠಲನ । ನೆನೆದರೆ ಚಿಂತೆ ನಿಶ್ಚಿಂತೆ ಕಾಣಣ್ಣ ॥ ೩ ॥

## ೧೨೯ ರಾಗ ಲಾವಣಿ ಚಾಲ್ ಆದಿತಾಳ

ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ। ಪರಿಪರಿ ಶಾಸ್ತ್ರವನೋದಿದರೇನು ವ್ಯರ್ಥವಾಯಿತು ಭಕುತಿ ॥ ಪ ॥ ಆರು ಶಾಸ್ತ್ರವ ಓದಿದರಿಲ್ಲ। ಮೂರಾರ್ ಪುರಾಣವ ಮುಗಿಸಿದರಿಲ್ಲ ॥ ಸಾರನ್ಯಾಯಕತೆಗಳ ಕೇಳಿದರಿಲ್ಲ । ಧೀರನಾಗಿ ನಾ ಪೇಳಿದರಿಲ್ಲ ॥ ೧ ॥ ಕೊರಳೊಳು ಮಾಲೆ ಧರಿಸಿದರಿಲ್ಲ । ಬೆರಳೊಳು ಜಪಮಣಿ ಎಣಿಸಿದರಿಲ್ಲ ॥ ಮರುಳನಾಗಿ ತಾ ಶರೀರಕೆ ಭೂದಿ । ಒರೆಸಿಕೊಂಡು ತಾನು ತಿರುಗಿದರಿಲ್ಲ ॥ ೨ ॥ ನಾರಿಯ

ಭೋಗ ಅಳಿಸಿವರಿಲ್ಲ || ಶಾರೀರಕೆ ಸುಖ ಬಿಡಿಸಿದರಿಲ್ಲ || ನಾರದವರದ ಪುರಂದರವಿಠ್ಠಲ | ಸೇರಿಕೊಂಡು ತಾ ಪಡೆಯುವತಸಕ || ೩ ||

## ೧೩೦ ರಾಗ ತೋಡಿ ತ್ರಿಪುಟತಾಳ

ಈ ಶರೀರದ ಭ್ರಾಂತಿ ಇನ್ನೇಕೆ ಮನವೆ || ಪ || ವಾಸುದೇವನ ನೆನೆದು ಸುಖಿಯಾಗೊ ಮನವೆ || ಅ || ದಂತಗಳು ಸಡಿಲಿದವು ಧಾತುಗಳು ಕುಂದಿದವು | ಕಾಂತೆಯರು ಜರೆದು ಓಕರಿಸುವರೋ || ಚಿಂತೆಯಿನ್ನೇತಕೆ ಬಯಲಾದ ದೇಹಕ್ಕೆ | ಇಂತೆಂದು ತಿಳಿದು ಶ್ರೀಕಾಂತನ ನೆನೆ ಮನವೆ || ||೧|| ಕಾಲು ಜವಗುಂದಿದವು ಕಣ್ಣುಗಳು ಇಂಗಿದವು | ಮೇಲೆ ಯೌವನ ಪೋಗಿ ಜರೆಯು ಬಂತು || ಕಾಲಕರ್ಮಂಗಳು ಸಂಧಿಸಿದ ಸಮಯದಿ | ಬಾಲತನದ ಆಸೆಯಿನ್ನೇಕೆ ಮನವೆ || ೨ || ನೀರ ಬೊಬ್ಬುಳಿಯಂತೆ ಸ್ಥಿರವೆಂದು ಈ ದೇಹ | ಧಾರಿಣೀ ಧನ ಸ್ತ್ರೀಗೆ ಮರುಳಾಗಬೇಡ|| ನೀರಜನಾಭ ಶ್ರೀಪುರಂದರವಿಠಲನ್ನ | ಸೇರಿ ಸುಖಿಸದೆ ಸುಮ್ಮನಿರಬೇಡ ಮನವೆ ||೩||

## ೧೩೧ ರಾಗ ಮಧ್ಯಮಾವತಿ ಆದಿತಾಳ

ನಾರಾಯಣ ತೇ ನಮೋ ನಮೋ | ಭವ | ನಾರದಸನ್ನುತ ನಮೋ ನಮೋ || ಪ || ಮುರಹರ ನಗಧರ ಮುಕುಂದ ಮಾಧವ | ಗರುಡಗಮನ ಪಂಕಜನಾಭ || ಪರಮಪುರುಷ ಭವಭಂಜನ ಕೇಶವ | ನರಮೃಗಶರೀರ ನಮೋ ನಮೋ ||೧|| ಜಲಧಿಶಯನ ರವಿಚಂದ್ರವಿಲೋಚನ | ಜಲರುಹ ಭವನುತ ಚರಣಯುಗ || ಬಲಿಬಂಧನ ಗೋವರ್ಧನೋದ್ಧಾರ | ನಳಿನೋದರ ತೇ ನಮೋ ನಮೋ || ೨ || ಆದಿದೈವ ಸಕಲಾಗಮಪೂಜಿತ | ಯಾದವಕುಲ ಮೋಹನ ರೂಪ || ವೇದೋದ್ಧಾರ ಶ್ರೀವೇಂಕಟನಾಯಕ| ಪುರಂದರವಿಠ್ಠಲ ನಮೋ ನಮೋ ||೩||

## ೧೩೨ ರಾಗ ಪಂತುವರಾಳಿ ರೂಪಕತಾಳ

ವ್ಯರ್ಥವಾಯಿತೇ | ಜನುಮ | ವ್ಯರ್ಥವಾಯಿತೆ ||ಪ|| ಅತ್ತಲಿಲ್ಲ ಇತ್ತಲಿಲ್ಲ | ಅರ್ಥಮಾನ ಹಾನಿಯಾಗಿ ||ಅ|| ಕುರುಡನರಿವೆಯನ್ನು ಹೊಸೆಯೆ|

ಕರುವು ಮೆದ್ದ ತೆರದಂತೆ ॥ ಪರರ ಕಾಡಿ ತಂದ ಧನವು । ತರುಣಿ ಪುತ್ರ ಮಿತ್ರಗಿತ್ತು ॥ ೧ ॥ ತರುಣಿಯರಿಗೆ ಹಿತವಿಲ್ಲ । ತರಳರಿಗೆ ಮರುಕವಿಲ್ಲ ॥ ಬರಿದು ಬರಿದು ಒರಲಿ ಒರಲಿ । ಅರಸುವರಿಯದ ಜಿಟ್ಟಿ ಮಾಡಿ ॥ ೨ ॥ ಊರ ಊರ ತಿರುಗಿ ತಿರುಗಿ। ದಾರಿಯನ್ನು ನಡೆದು ನಡೆದು ॥ ಶಾರೀರವು ಸೊರಗಿ ಕರಗಿ । ಘೋರ ನರಕ ಸಾಧನೆಮಾಡಿ ॥ ೩ ॥ ನಾರಿ ಮಗು ಮುದ್ದಾಡಿದರೆ। ಜಾರೆ ನೋಡಿ ನಗುವಂತೆ ॥ ಘೋರ ಸಂಸಾರ ನೆಚ್ಚಿ । ನೀರು ಕಡೆದು ನೋಡಿದಂತೆ ॥೪॥ ನರಜನ್ಮದಲಿ ಬಂದು। ಧರೆಯ ಮೇಲೆ ಪುಟ್ಟಿಬೆಳೆದು ॥ ವರದ ಪುರಂದರವಿಠ್ಠಲನ । ಸ್ಮರಣೆಯನ್ನು ಮಾಡದೆ ॥೫॥

## ೧೩೩ ರಾಗ ಶಂಕರಾಭರಣ ಅಟತಾಳ

ಅಂಬಿಗ ನಾ ನಿನ್ನ ನಂಬಿದೆ । ಜಗ । ದಂಬರಮಣ ನಂಬಿದೆ ॥ ಪ ॥ ತುಂಬಿದ ಹರಿಗೋಲಂಬಿಗ । ಅದ । ಕೊಂಭತ್ತು ಛಿದ್ರವು ಅಂಬಿಗ ॥ ಸಂಭ್ರಮದಿಂ ನೋಡಂಬಿಗ । ಅದ । ರಿಂಬು ನೋಡಿ ನಡೆಸಂಬಿಗ ॥ ೧ ॥ ಹೊಳೆಯ ಭರವ ನೋಡಂಬಿಗ । ಅದಕೆ। ಸೆಳವು ಘನವಯ್ಯ ಅಂಬಿಗ ॥ ಸುಳಿಯೊಳು ಮುಳುಗಿದೆ ಅಂಬಿಗ। ಎನ್ನ । ಸೆಳೆದುಕೊಂಡೊಯ್ಯೊ ನೀನಂಬಿಗ ॥ ೨ ॥ ಆರು ತೆರೆಯ ನೋಡಂಬಿಗ । ಆದು । ಮೀರಿ ಬರುತಲಿದೆ ಅಂಬಿಗ ॥ ಯಾರಿಂದಲಾಗದು ಅಂಬಿಗ । ಅದ ನಿ । ವಾರಿಸಿ ದಾಟಿಸೋ ಅಂಬಿಗ ॥ ೩ ॥ ಸತ್ಯವೆಂಬುದೆ ಹುಟ್ಟಂಬಿಗ। ಸದಾ । ಭಕ್ತಿಯೆಂಬುದೆ ಪಥವಂಬಿಗ ॥ ನಿತ್ಯಮೂರುತಿ ಪುರಂದರವಿಠಲ । ನಮ್ಮ। ಮುಕ್ತಿಮಂಟಪ ಕೊಯ್ಯೊ ಅಂಬಿಗ ॥೪॥

## ೧೩೪ ರಾಗ ಕಲ್ಯಾಣಿ ಝಂಪೆತಾಳ

ನಿನ್ನನಾಶ್ರಯಿಸುವೆನು ನಿಗಮಗೋಚರ ನಿತ್ಯ । ಬೆನ್ನ ಬಿಡದೇ ಕಾಯೊ ಮನದಿಷ್ಟವೀಯೋ ॥ಪ॥ ಕುಂದಣದ ಆಶ್ರಯ ನವರತ್ನಗಳಿಗೆಲ್ಲ। ಚಂದಿರನ ಆಶ್ರಯ ಚಕೋರಗೆ ॥ ಕಂದರ್ಪನಾಶ್ರಯ ವಸಂತಕಾಲಕ್ಕೆ ಗೋ । ವಿಂದನಾಶ್ರಯವು ಮರಣಕಾಲದೊಳು ॥೧॥ ಹಣ್ಣುಳ್ಳ ಮರಗಳು

ಪಕ್ಷಿಗಳಾಶ್ರಯವು। ಪುಣ್ಯನದಿಗಳು ಋಷಿಗಳಾಶ್ರಯವು ॥ ಕಣ್ಣಿಲ್ಲದಾತಗೆ ಕೈಗೋಲಿನಾಶ್ರಯವು । ತನ್ನಿಷ್ಟ ಪಡೆದವಗೆ ನಿನ್ನ ಆಶ್ರಯವು ॥೨॥ ಪತಿವ್ರತೆ ವನಿತೆಗೆ ಪತಿಯೊಂದು ಆಶ್ರಯವು । ಯತಿಗಳಿಗೆ ಶ್ರುತಿ ಪ್ರಣವದಾಶ್ರಯವು ॥ ಮತಿವಂತನಿಗೆ ಹರಿಸ್ತುತಿಗಳೇ ಆಶ್ರಯವು । ಹಿತವಾದ ಪುರಂದರವಿಠಲನಾಶ್ರಯವು ॥ ೩ ॥

## ೧೩೫ ರಾಗ ತೋಡಿ ರೂಪಕತಾಳ

ನಿನ್ನ ನೋಡಿ ಧನ್ಯನಾದೆನೊ । ಹೇ ಶ್ರೀನಿವಾಸ । ನಿನ್ನ ನೋಡಿ ಧನ್ಯನಾದೆನೊ ॥ ಪ ॥ ಪಕ್ಷಿವಾಹನ ಲಕ್ಷ್ಮೀರಮಣ । ಲಕ್ಷ್ಯವಿಟ್ಟು ನೋಡೊ ಪಾಂಡವ ॥ ಪಕ್ಷ ಸರ್ವದೈತ್ಯಶಿಕ್ಷ । ರಕ್ಷಿಸೆನ್ನ ಕಮಲಾಕ್ಷ ॥೧॥ ದೇಶ ದೇಶ ತಿರುಗಿ ನಾನು । ಆಶಾಬದ್ಧನಾದೆ ಸ್ವಾಮಿ ॥ ದಾಸನು ನಾನಲ್ಲವೆ ಜಗ । ದೀಶಶ್ರೀಶ ಶ್ರೀನಿವಾಸ॥೨॥ ಕಂತುಜನಕ ಕೇಳೊ ಎನ್ನ । ಅಂತರಂಗದಾಸೆಯನ್ನು ॥ ಅಂತರವಿಲ್ಲದೆ ಪಾಲಿಸು ಶ್ರೀ । ಕಾಂತ ಪುರಂದರವಿಠಲ ॥೩॥

## ೧೩೬ ರಾಗ ಮುಖಾರಿ ಝಂಪೆತಾಳ

ಯಮನೆಲ್ಲ್ಯೊ ಕಾಣೆನೆಂದು ಹೇಳಬೇಡ ॥ ಪ ॥ ಯಮನೇ ರಾಮಚಂದ್ರ ಸಂದೇಹ ಬೇಡ ॥ಅ॥ ನಂಬಿದ ವಿಭೀಷಣಗೆ ರಾಮನಾದ ॥ ನಂಬದಿದ್ದ ರಾವಣನಿಗೆ ಯಮನೇ ಆದ ॥೧॥ ನಂಬಿದ ಅರ್ಜುನನಿಗೆ ಬಂಟನಾದ ॥ ನಂಬದಿದ್ದ ಕೌರವನಿಗೆ ಕಂಟಕನಾದ ॥೨॥ ನಂಬಿದ ಉಗ್ರಸೇನನಿಗೆ ಮಿತ್ರನಾದ ॥ ನಂಬದಿದ್ದ ಕಂಸನಿಗೆ ಶತ್ರುವಾದ ॥೩॥ ನಂಬಿದ ಬಾಲಕನಿಗೆ ಹರಿಯಾದ ॥ ನಂಬದಿದ್ದ ಅವನ ಪಿತಗೆ ಅರಿಯಾದ ॥ ೪ ॥ ನಂಬಿದವರ ಸಲಹುವ ನಮ್ಮ ಧೊರೆಯು ॥ ಅಂಬುಜಾಕ್ಷ ಪುರಂದರ ವಿಠಲರಾಯ ॥ ೫ ॥

## ೧೩೭ ರಾಗ ಕಾಂಭೋಜಿ ಛಾಪುತಾಳ

ಕೆಟ್ಟು ನೆಂಟರ ಸೇರುವುದು ಬಹಳ ಕಠಿಣ ॥ ಪ ॥ ಇನ್ನು ! ಹುಟ್ಟೇಳು ಜನ್ಮಕ್ಕೆ ಇದು ಬೇಡ ಹರಿಯೆ ॥ ಅ ॥ ವಿಷವ ಕುಡಿಯಲುಬಹುದು ಎನೆದ

ಶೂಲದ ಮುಂದೆ । ಒಸಗಿ ಬಹು ವೇಗದಿಂ ಹಾಯಬಹುದು ॥ ವಿಷದ ಕುಂಡದ ಒಳಗೆ ಮುಳುಗಿಕೊಂಡಿರಬಹುದು । ಎಸೆವ ಅಂಬಿಗೆ ಎದೆಯ ಗುರಿಮಾಡಬಹುದು ॥ ೧ ॥ ಶರಧಿ ಘುಮುಕಲುಬಹುದು ಉರಗನಪ್ಪಲು ಬಹುದು । ಧರೆತುಂಬ ಗ್ರಾಸಕೊಡಬಹುದು ॥ ಮರದ ಕೊಂಬಿನ ಮೃಗಕೆ ಇರಿಯಲು ಕೊಡಬಹುದು। ಗರಗಸದಲಿ ಕೊರಳ ಕೊಯಿಸಿಕೊಳಬಹುದು॥ ॥೨॥ ಕುಡುಗೋಲ ಪಿಡಿದು ಕೊರಳನು ಕೊಯ್ದುಕೊಳಬಹುದು । ಒಡಲಿಗಾಗಿ ಹುಡಿಯ ಮುಕ್ಕಬಹುದು ॥ ಪೊಡವಿಯೊಳು ಪುರಂದರವಿಠಲ ರಾಯನ। ಕಡು ಹರುಷದಿಂ ಭಜಿಸಿ ಸುಖಿಯಾಗಬಹುದು ॥೩॥

## ೧೩೮ ರಾಗ ಮಧ್ಯಮಾವತಿ ಅಟತಾಳ

ತಾಳ ಬೇಕು । ತಕ್ಕ । ಮೇಳ ಬೇಕು ॥ಪ॥ ಶಾಂತ ವೇಳೆ ಬೇಕು । ಗಾನವನ್ನು । ಕೇಳಬೇಕೆಂಬುವರಿಗೆ ॥ ಅ ॥ ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು । ರತಿಪತಿಪಿತನೊಳು ಅತಿಪ್ರೇಮವಿರಬೇಕು ॥೧॥ ಗಳ ಶುದ್ಧ ವಿರಬೇಕು ತಿಳಿದು ಪೇಳಲು ಬೇಕು । ಕಳವಳ ಬಿಡಬೇಕು ಕಳೆಮುಖವಿರಬೇಕು ॥ ೨ ॥ ಅರಿತವರಿರಬೇಕು ಹರುಷ ಹೆಚ್ಚಲು ಬೇಕು । ಪುರಂದರ ವಿಠಲನೆ ಪರದೈವವೆನಬೇಕು ॥೩॥

## ೧೩೯ ರಾಗ ಕಲ್ಯಾಣಿ ಅಟತಾಳ

ಕೇಳನೋ ಹರಿ ತಾಳನೋ ॥ ಪ ॥ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ಅ॥ ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು । ಕೊಂಬು ಕೊಳಲು ಧ್ವನಿಸ್ವರಗಳಿದ್ದು ॥ ತುಂಬುರು ನಾರದರ ಗಾನ ಕೇಳುವ ಹರಿ । ನಂಬಲಾರ ಈ ಡಂಭಕರ ಕೂಗಾಟ ॥ ೧ ॥ ನಾನಾಬಗೆಯ ರಾಗ ಭಾವ ತಿಳಿದು ಸ್ವರ । ಜ್ಞಾನ ಮನೋಧರ್ಮ ಜಾತಿಯಿದ್ದು ॥ ದಾನವಾರಿಯ ದಿವ್ಯನಾಮರಹಿತವಾದ । ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥ ೨ ॥ ಅಡಿಗಡಿಗಾನಂದಬಾಷ್ಪ ಪುಳಕದಿಂದ । ನಡೆನುಡಿಗೆ ಶ್ರೀಹರಿಯೆನ್ನುತ ॥ ದೃಢಭಕ್ತರನು ಕೂಡಿ ಹರಿಕೀರ್ತನೆ ಪಾಡಿ । ಕಡೆಗೆ ಪುರಂದರವಿಠಲ ನೆಂದರೆ ಕೇಳ್ವ ॥ ೩ ॥

## ೧೪೦ ರಾಗ ಕಾಂಭೋಜಿ ಝುಂಪೆತಾಳ

ಇಷ್ಟು ಪಾಪವ ಮಾಡಿದ್ದೆ ಸಾಕು ॥ ಪ ॥ ಸೃಷ್ಟೀಶನೀನೆನ್ನನುದ್ಧರಿಸ ಬೇಕು ॥ಅ॥ ಒಡಲ ಕಿಚ್ಚಿಗೆ ಪರರ ಕಡು ನೋಯಿಸಿದೆ ಕೃಷ್ಣ । ಕೊಡದೆ ಅನ್ಯರ ಋಣವನಪಹರಿಸಿದೆ ॥ ಮಡದಿಯ ನುಡಿ ಕೇಳಿ ಒಡಹುಟ್ಟಿದವ ರೊಡನೆ । ಹಡೆದ ತಾಯಿಯ ಕೂಡೆ ಹಗೆ ಮಾಡಿದೆ ॥೧॥ ಸ್ನಾನಸಂಧ್ಯಾದಿ ಗಳ ಮಾಡದಲೆ ವ್ಯೆಗೆಟ್ಟೆ । ಜ್ಞಾನಮಾರ್ಗವನಂತು ಮೊದಲೆ ಬಿಟ್ಟೆ । ಏನ ಪೇಳಲಿ ಪರರ ಮಾನಿನಿಗೆ ಮನಸಿಟ್ಟೆ । ಶ್ವಾನಸೂಕರನಂತೆ ಹೊರೆದೆ ಹೊಟ್ಟೆ ॥೨॥ ವ್ರತ ನೇಮ ಉಪವಾಸವೊಂದು ದಿನ ಮಾಡಿಲ್ಲ । ಅಥಿತಿಗಳಿ ಗನ್ನವನು ನೀಡಲಿಲ್ಲ ॥ ಶ್ರುತಿ ಶಾಸ್ತ್ರ ಪೌರಾಣ ಕಥೆಗಳನು ಕೇಳಿಲ್ಲ। ವೃಥ ವಾಗಿ ಬಹುಕಾಲ ಗತವಾಯಿತಲ್ಲ ॥ ೩ ॥ ಶುದ್ಧ ವೈಷ್ಣವ ಕುಲದುಲುದ್ಭ ವಿಸಿದೆ ನಾನು। ಮಧ್ವಮತಸಿದ್ಧಾಂತಪದ್ಧತಿಗಳ ॥ ಬುದ್ಧಿಪೂರ್ವಕ ತಿಳಿದು ಕದ್ದುಂಡು ಕಾಯವನು । ವೃದ್ಧಿಮಾಡಿದೆನಯ್ಯ ಉದ್ಧರಿಸು ಹರಿಯೆ ॥೪॥ ತಂದೆ ತಾಯಿಯ ಸೇವೆಯೊಂದು ದಿನ ಮಾಡಿಲ್ಲ । ಮಂದಭಾಗ್ಯಗೆ ಭವಣೆ ತಪ್ಪಲಿಲ್ಲ ॥ ಹಿಂದೆ ಮಾಡಿದ ದೋಷ ಒಂದುಳಿಯುವರುಹಿದೆನೊ । ತಂದೆ ಪುರಂದರವಿಠಲ ಬಂದೆನ್ನ ಸಲಹೊ ॥ ೫ ॥

## ೧೪೧ ರಾಗ ಕಾಂಭೋಜಿ ಅಟತಾಳ

ಹರಿನಾಮದರಗಿಣಿಯು ಹಾರುತಿದೆ ಜಗದಿ । ಪರಮ ಭಾಗವತರು ಬಲೆಯ ಬೀಸುವರು ॥ ಪ ॥ ಕೋಪವೆಂಬ ಮಾರ್ಜಾಲ ಕಂಡರೆ ನುಂಗು ವುದು । ತಾಪವೆಂಬುವ ಹುಲಿಯು ಕೊಂಡೆಯ್ವುದು ॥ ಕಾಪಾಡಲದ ನೊಯ್ದು ಹೃದಯದೊಳಗಿಂಬಿಟ್ಟು । ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯು ॥೧॥ ದಾರಿಯೊಳು ನಡೆವಾಗ ಚೋರರುಪಟಳವಿಲ್ಲ । ಮಾರಿ ಬಂದರೆ ಅದನು ಹೊಡೆದು ನೂಕುವುದು ॥ ಕ್ರೂರ ಯಮಭಟರನ್ನು ಮೂಗು ರೆಕ್ಕೆಲಿ ಬಡಿದು। ದಾರಿ ತೋರುವುದು ಮುರಾರಿ ಪಟ್ಟಣಕೆ ॥೨॥ ಎಷ್ಟು ವರ್ಣಿಸಲಿ ನಾನೀ ಮುದ್ದು ಅರಗಿಣಿಯ । ಹೊಟ್ಟೆಯೊಳಗೀರೇಳು ಜಗವನಿಂಬಿಟ್ಟು ॥ ಸೃಷ್ಟೀಶ ಪುರಂದರವಿಠ್ಠಲನ ನೆನೆನೆನೆದು । ಮುಟ್ಟಿ ಭಜಿಸುವುದು ಈ ಮುದ್ದು ಅರಗಿಣಿಯು ॥ ೪ ॥

## ೧೪೨ ರಾಗ ಮಲಹರಿ ತ್ರಿಪುಟತಾಳ

ಪದುಮನಾಭ ಪರಮಪುರುಷ ಪರಂಜ್ಯೋತಿ ಸ್ವರೂಪ । ವಿದುರವಂದ್ಯ ವಿಮಲಚರಿತ ವಿಹಂಗಾಧಿರೋಹಣ ॥ ಉದಧಿವಾಸ ಉರಗಶಯನ ಉನ್ನತೋನ್ನತ ಮಹಿಮ । ಯದುಕುಲೋತ್ತಮ ಯಜ್ಞರಕ್ಷಕ ಅಜ್ಞಶಿಕ್ಷಕ ರಾಮ ನಾಮ ॥ ವಿಭೀಷಣಪಾಲಕ ನಮೋ ನಮೋ । ಇಭವರದಾಯಕ ನಮೋ ನಮೋ ॥ ಶುಭಪ್ರದ ಸುಮನೋಹಿತ ಸುಜನಮನೋರಂಜನ । ಅಭಿನವ ಪುರಂದರವಿಠಲ ॥ ೧ ॥

## ೧೪೩ ರಾಗ ಮುಖಾರಿ ಝಂಪೆತಾಳ

ಪ್ರಾಚೀನ ಕರ್ಮವು ಬಿಡಲರಿಯದು। ಯೋಚನೆಯ ಮಾಡಿ ನೀ ಬಳಲಬೇಡ ॥ ಪ ॥ ಮುನ್ನ ಮಾಡಿದ ಕರ್ಮ ಬೆನ್ನಟ್ಟಿ ಬರುತಿರಲು । ತನ್ನಿಂದ ತಾನೆ ತಿಳಿಯಲರಿಯದೆ ॥ ಇನ್ನು ಈ ದೇಹವನು ಆಶ್ರಯಿಸಿ ಫಲವೇನು । ಉನ್ನಂತ ಹರುಷದಲಿ ಮನದಿ ಯೋಚಿಸುವ ॥೧॥ ಲೋಕಾದಿಲೋಕಗಳ ತಿರುಗುವ ರವಿರಥಕೆ। ಏಕಗಾಲಿಗೆ ಏಳು ಕುದುರೆ ಕಟ್ಟಿ ॥ ಆಕಾಶಮಾರ್ಗದಲಿ ತಿರುಗುವ ಅರುಣನಿಗೆ । ಬೇಕಾದ ಚರಣಗಳ ಕೊಡಲಿಲ್ಲ ಹರಿಯು॥ ॥೨॥ ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ। ಖ್ಯಾತಿಯನೆ ಮಾಡಿ ರಾವಣನ ಗೆದ್ದು ॥ ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ । ಪ್ರೀತಿಯಿಂ ಕೌಪೀನವ ಬಿಡಿಸಲಿಲ್ಲ ಹರಿಯು ॥ ೩ ॥ ನಿತ್ಯದಲಿ ಗರುಡ ಸೇವೆಯ ಮಾಡಿ ವಿಷ್ಣುವನು । ಹೊತ್ತುಕೊಂಡು ಇದ್ದ ಜಗವರಿಯಲು ॥ ಅತ್ಯಂತ ಸೇವಕನೆಂದು ಮೂಗಿನ ಡೊಂಕು । ಎತ್ತಿ ನೆಟ್ಟಗೆ ಮಾಡಲಿಲ್ಲ ಶ್ರೀಕೃಷ್ಣ ॥೪॥ ಇಂತೆಂದು ಈಪರಿ ತಮ್ಮೊಳಗೆ ತಾವು ತಿಳಿದು । ಭ್ರಾಂತನಾಗದೆ ಬಯಕೆಗಳನು ಜರಿದು ॥ ಶಾಂತ ಮೂರುತಿ ಸಿರಿಪುರಂದರವಿಠ್ಠಲನ । ಸಂತತದಿ ಬಿಡದೆ ಭಜಿಸೆಲವೊ ಮನುಜ ॥ ೫ ॥

## ೧೪೪ ರಾಗ ನಾದನಾಮಕ್ರಿಯೆ ಅಟತಾಳ

ನಿಂದಕರಿರಬೇಕಿರಬೇಕು ॥ಪ॥ ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೊ ಹಾಂಗೆ ॥ಅ॥ ಅಂದಂದು ಮಾಡಿದ ಪಾಪವೆಂಬ ಮಲ। ತಿಂದು ಹೋಗುವ

ರಯ್ಯ ನಿಂದಕರು ॥ ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ । ಪೊಂದಿಹ ಪುಣ್ಯವನೊಯ್ಯುವರಯ್ಯ ॥೧॥ ದುಷ್ಟಜನರು ಈ ಸೃಷ್ಟಿಯೊಳಿದ್ದರೆ। ಶಿಷ್ಟ ಜನರಿಗೆಲ್ಲ ಕೀರ್ತಿಗಳು ॥ ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು। ಇಷ್ಟೇ ವರ ವನು ಬೇಡುವೆನಯ್ಯ ॥ ೨ ॥ ದುಃಳ ಜನಂಗಳು ಚಿರಕಾಲವಿರುವಂತೆ। ಕರವ ಮುಗಿದು ವರ ಬೇಡುವೆನು ॥ ಪರಿಪರಿ ತಮಸಿಗೆ ಗುರಿಯಹರಲ್ಲದೆ। ಪರಮ ದಯಾನಿಧೆ ಪುರಂದರವಿಠಲ ॥ ೩ ॥

## ೧೪೫ ರಾಗ ಬಿಲಹರಿ ಅಟತಾಳ

ನಾರಾಯಣನೆಂಬ ನಾಮದ ನಿಮ್ಮ । ಸಾಲಿಗೆ ತುದಿಯಿಂದಲಿ ಬಿತ್ತಿ ರಯ್ಯ ॥ ಪ ॥ ಹೃದಯ ಹೊಲವ ಮಾಡಿ ಮನವ ನೇಗಿಲ ಮಾಡಿ। ಶ್ವಾಸೋಚ್ಛ್ವಾಸ ಎರಡೆತ್ತು ಮಾಡಿ ॥ ಜ್ಞಾನವೆಂಬ ಹಗ್ಗ ಕಣ್ಣಿಯ ಮಾಡಿ। ನಿರ್ಮಮವೆಂಬ ಗುಂಟಿಲಿ ಹರವಿರಯ್ಯ ॥೧॥ ಮದಮತ್ಸರಗಳೆಂಬ ಮರಗಳನೆ ತರಿದು । ಕಾಮಕ್ರೋಧಗಳೆಂಬ ಕಳೆಯ ಕಿತ್ತು ॥ ಪಂಚೇಂದ್ರಿಯವೆಂಬ ಮಂಚಿಕೆಯನೆ ಹಾಕಿ। ಚಂಚಲವೆಂಬ ಹಕ್ಕಿಯ ಹೊಡೆಯಿರಯ್ಯ ॥ ೨ ॥ ಉದಯಾಸ್ತಮಾನವೆಂಬ ಎರಡು ಕೊಳಗದಲ್ಲಿ। ಆಯುಷ್ಯವೆಂಬ ರಾಶಿ ಅಳೆಯುತಿರೆ ॥ ಸ್ವಾಮಿ ಶ್ರೀಪುರಂದರವಿಠಲನ ನೆನೆದರೆ। ಪಾಪರಾಶಿಯ ಪರಿಹರಿಸುವನಯ್ಯ ॥ ೩ ॥

## ೧೪೬ ರಾಗ ಬಿಲಹರಿ ಅಟತಾಳ

ಯಾರಿಗೆ ಯಾರುಂಟು ಎರವಿನ ಸಂಸಾರ। ನೀರಮೇಲಣ ಗುಳ್ಳೆ ನಿಜ ವಲ್ಲ ಹರಿಯೆ ॥ಪ॥ ಬಾಯಾರಿತು ಎಂದು ಬಾವಿನೀರಿಗೆ ಪೋದೆ। ಬಾವಿಲಿ ಜಲ ಬತ್ತಿ ಬರಿದಾಯ್ತು ಹರಿಯೆ ॥ ೧ ॥ ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ। ಮರ ಬಗ್ಗಿ ಶಿರದ ಮೇಲೊರಗಿತು ಹರಿಯೆ ॥ ೨ ॥ ಅಡವಿಯೊಳ್ ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ। ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ ॥ ೩ ॥ ತಂದೆ ಶ್ರೀಪುರಂದರವಿಠಲ ನಾರಾಯಣ । ನಾಶಾಯೊಹೊತ್ತಿಗೆ ನೀ ಕಾಯೋ ಹರಿಯೆ ॥ ೪ ॥

## ೧೪೭ ರಾಗ ಕಾಂಭೋಜಿ ಅಟತಾಳ

ಸ್ಥಳವಿಲ್ಲವಯ್ಯ ಭಾಗವತರೆ। ಒಳಗೆ ಹೊರಗೆ ಸಂದಣಿ ಭಾಳ ತುಂಬಿದೆ॥ ॥ ಪ ॥ ಐದಕ್ಕೆ ಇದರೊಳು ಉಂಟು । ಮ । ತ್ತೈದು ಐದು ಮಂದಿಗಳು ಬೇರುಂಟು ॥ ಐದು ನಾಲ್ಕು ದ್ವಾರಗಳುಂಟು । ನಾವು । ಬೈದರೆ ನಿಮ್ಮ ದೇನು ಹೋದೀತು ಗಂಟು ॥ ೧ ॥ ಆರುಮಂದಿ ಮಕ್ಕಳುಂಟು (ವಕ್ಕಲುಂಟು) । ಮ । ತ್ತಾರುಮಂದಿ ಪ್ರೇರಕರುಂಟು ॥ ಪ್ರೇರಕರಿಗೆ ಕರ್ತರುಂಟು । ವಿ । ಚಾರ ಮಾಡಲಿಕ್ಕೆ ನಿಮ್ಮದೇನು ತಂಟು ॥ ೨ ॥ ಅತ್ತೆಯೆಂಬೋಳು ಬಲು ಖೋಡಿ । ಎ । ನ್ನೊತ್ತಿ ಆಳುವ ಪುರುಷ ಹೇಡಿ ॥ ಮತ್ತೆ ಮಾವ ಅಡನಾಡಿ । ಸರಿ । ಹೊತ್ತಿಗೆ ಬಾಹೋನು ಮೈದುನ ಓಡಿ ॥ ೩ ॥ ನೆಗಣ್ಣಿಯೆಂಬೋಳು ಮುಂಗೋಪಿ । ಮಲ । ಮಗಳು ಕಂಡರೆ ಸೇರಳು ಮಹತಾಪಿ ॥ ಹಗೆಗಾರತ್ತಿಗೆ ಬಲು ಕೋಪಿ । ಇದರ । ಬಗೆ ತಿಳಿಯದ ನಾದಿನಿ ಮಹಾ ಪಾಪಿ ॥೪॥ ಎಷ್ಟು ಹೇಳಲಿ ನಿಮಗೆಲ್ಲ । ಈ। ಕಷ್ಟ ಸಂಸಾರದೊಳಗಿಷ್ಟು ಸುಖವಿಲ್ಲ । ಸೃಷ್ಟಿಗೊಡೆಯ ತಾ ಬಲ್ಲ । ಸೃಷ್ಟೀಶ। ದಿಟ್ಟ ಪುರಂದರವಿಠಲ ತಾ ಬಲ್ಲ ॥ ೫ ॥

## ೧೪೮ ರಾಗ ಕಾಂಭೋಜಿ ಝಂಪೆತಾಳ

ಹರಿಹರರು ಸಮರೆಂದು ಅರಿಯುವಜ್ಞಾನಿಗಳು । ಹರನ ಹೃದಯದೊಳಿರುವ ಹರಿಯ ತಾವರಿಯರು ॥ ಪ ॥ ಶರಧಿಮಥನದೊಳಂದು ಸಿಂಧುಸುತೆ ಬಂದಾಗ। ಹರಿ ಹರ ವಿರಿಂಚಿ ಮೊದಲಾದ ಸುರರ॥ ವರರಾರೆಂದು ನೋಡಿ ಶಂಕೆಯು ಬಿಟ್ಟು ಸಿರಿದೇವಿ ಹರಿ ಸರ್ವವರನೆಂದು ಮಾಲೆ ಹಾಕಿದಳು॥೧॥ ಹರಿನಾಮ ಕ್ಷೀರವನು ಹರನಾಮ ನೀರನು । ಕ್ಷೀರ ನೀರೊಂದಾದಂತೆ ಇಹದು ಪರರು। ಪರತತ್ವವರಿಯದ ನರ ತಾನು ಹರಿಹರರು। ಸರಿಯೆಂದು ನರಕಕೆ ಒಳಗಾಗುತಿಹನು ॥ ೨ ॥ ಕ್ಷೋಣಿಯೊಳು ಬಾಣನಾ ತೋಳುಗಳ ಕಡಿವಾಗ। ಏಣಾಂಕಧರ ಬಾಗಿಲೊಳಗೆ ಇರಲು ॥ ಕಾಣಿಪರೆ ಜನರೆಲ್ಲ ಹರಿ ಘನು ತಾನೆಂದು । ಗುಣಪೂರ್ಣ ಪುರಂದರವಿಠ್ಠಲನು ಪರನು ॥ ೩ ॥

## ೧೪೯ ರಾಗ ಕಾಂಭೋಜಿ ಝಂಪೆತಾಳ

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ||ಪ|| ತೋರು ಈ ಜಗದೊಳಗೆ ಒಬ್ಬರನು ಕಾಣೆ ||ಅ|| ಕರಪತ್ರದಿಂದ ತಾಮ್ರಧ್ವಜನ ತಂದೆಯ | ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ || ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ | ಅರಿತು ತ್ರಿಪುರಾಸುರರ ಹೆಂಡಿರನು ಬೆರೆದೆ || ೧ || ಕಲಹ ಬಾರದ ಹಾಗೆ ಕರ್ಣನನು ನೀ ಕೊಂದೆ| ಸುಲಭವಲಿ ಕೌರವರ ಮನೆಯ ಮುರಿದೆ|| ನೆಲನ ಬೇಡುತ ಪೋಗಿ ಬಲಿಯು ತನುವನು ತುಳಿದೆ| ಮೊಲೆಯ ನುಣಿಸಲು ಬಂದ ಪೂತನಿಯ ಕೊಂದೆ || ೨ || ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ | ಗರುಡವಾಹನ ನಿನ್ನ ಚರಿಸುವರಿಯೆ || ಧೊರೆ ಪುರಂದರವಿಠಲ ನಿನ್ನನ್ನು ನಂಬಿದರೆ | ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ||

## ೧೫೦ ರಾಗ ಹುಸೇನಿ ಆದಿತಾಳ

ಎಲ್ಲರು ಮಾಡುವುದು ಹೊಟ್ಟೆಗಾಗಿ | ಗೇಣು | ಬಟ್ಟೆಗಾಗಿ ||ಪ|| ಸಿರಿ| ವಲ್ಲಭನ ಭಜಿಸುವುದು ಮುಕ್ತಿಗಾಗಿ ||ಅ|| ಪಲ್ಲಕ್ಕಿಯ ಹೊರುವುದು ಹೊಟ್ಟೆಗಾಗಿ | ದೊಡ್ಡ | ಮಲ್ಲರೊಡನಾಡುವುದು ಹೊಟ್ಟೆಗಾಗಿ || ಸುಳ್ಳಾಗಿ ಪೊಗಳುವುದು ಹೊಟ್ಟೆಗಾಗಿ' ಸಿರಿ | ವಲ್ಲಭನ ಧ್ಯಾನವು ಮುಕ್ತಿಗಾಗಿ ||೧|| ಧೊರೆತನ ಮಾಡುವುದು ಹೊಟ್ಟೆಗಾಗಿ | ಕರಿ | ತುರಗವೇರುವುದು ಹೊಟ್ಟೆಗಾಗಿ || ದುರಿತವ ಮಾಡುವುದು ಹೊಟ್ಟೆಗಾಗಿ| ಸಿರಿ ಹರಿಯ ಭಜಿಸುವುದು ಮುಕ್ತಿಗಾಗಿ ||೨|| ಬೆಟ್ಟವ ಹೊರುವುದು ಹೊಟ್ಟೆಗಾಗಿ | ಗಟ್ಟ್ಯಾಗಿ ಕೂಗುವುದು ಹೊಟ್ಟೆಗಾಗಿ || ದಿಟವಾಗಿ ನಮ್ಮ ಶ್ರೀಪುರಂದರ | ವಿಠಲನ್ನ ಧ್ಯಾನವು ಮುಕ್ತಿಗಾಗಿ || ೩ ||

## ೧೫೧ ರಾಗ ಹಿಂದುಸ್ಥಾನಿ ಕಾಪಿ (ಕಾನಡ) ಆದಿತಾಳ

ಜಗದುದ್ಧಾರನ ಆಡಿಸಿದಳೆಶೋದೆ || ಪ || ಜಗದುದ್ಧಾರನ ಮಗನೆಂದು ತಿಳಿಯುತ | ಸುಗುಣಾಂತರಂಗನ ಆಡಿಸಿದಳೆಶೋದೆ ||ಅ|| ನಿಗಮಕೆ ಸಿಲು

ಕದ ಅಗಣಿತಮಹಿಮನ। ಮಗುಗಳ ಮಾಣಿಕ್ಯನ ಆಡಿಸಿದಳೆಶೋದೆ ||೧|| ಅಣೋರಣೀಯನ ಮಹತೋಮಹೀಮನ । ಅಪ್ರಮೇಯನ ಆಡಿಸಿದಳೆಶೋದೆ || ೨ || ಪರಮಪುರುಷನ ಪರವಾಸುದೇವನ। ಪುರಂದರವಿಠಲನ ಆಡಿಸಿದಳೆಶೋದೆ ||೩||

## ೧೫೨ ರಾಗ ಕಾಂಭೋಜಿ ಝಂಪೆತಾಳ

ಕಲಿಯುಗದ ಮಹಿಮೆಯು ಕಾಣಬಂತೀಗ। ಜಲಜಾಕ್ಷ ವೇಲ್ಗಿರಿಯ ಶ್ರೀವೇಂಕಟೇಶ ||ಪ|| ಹರಿಕಥೆಯನೆ ಬಿಟ್ಟು ಹೀನನುಡಿ ನುಡಿಯುವರು। ಗುರು ಹಿರಿಯರುಗಳ ದೂಷಿಸಲು ಎಣಿಸುವರು || ಪೊರೆದ ತಾಯ್ತಂದೆಗಳ ಮಾತುಗಳ ಮನ್ನಿಸದೆ। ತರುಣಿಯರ ನುಡಿಗೇಳಲಿಚ್ಛಿಸುತ್ತಿಹರು || ೧ || ಪಟ್ಟದರಸಿಯ ಬಿಟ್ಟು ಪರಸತಿಯ ಬಯಸುವರು। ಕೊಟ್ಟ ಸಾಲವ ನುಂಗಿಕೊಳಲೆಣಿಪರು || ಮುಟ್ಟಿ ಭಾಷೆಯ ಕೊಟ್ಟು ಮೋಸವನೆ ಮಾಡುವರು। ಬಿಟ್ಟು ಪರದೈವವನು ಮಾರಿಗೆರಗುವರು ||೨|| ಕಂಡುದನು ಹೇಳರು ಕಾಣದನೆ ಪೇಳುವರು। ಉಂಡಮನೆಗೆರಡನ್ನು ಬಗೆಯುತ್ತಲಿಹರು || ಕೊಂಡಾಡಿ ಬೇಡಿದರು ಕೊಡರೊಂದು ರುಪ್ಯಿಯನು । ದಂಡಿಸಿ ಕೇಳುವರಿಗೆ ಧನವ ಕೊಡುತಿಹರು || ೩ || ಕಳ್ಳರೊಳು ಅತಿಸ್ನೇಹ ಸುಳ್ಳರೊಳು ಸೋಲುವರು। ಒಳ್ಳೆಯವರೊಡನೆ ವಂಚನೆಮಾಡುವರು|| ಇಲ್ಲದ ಅನಾಥರಿಗೆ ಇಷ್ಟೊಂದ ನಿಕ್ಕರು। ಬಲ್ಲಿದಗೆ ಬಲು ಬಾಯ ಸವಿಯನುಣಿಸುವರು ||೪|| ಮಾಡಿದುಪಕಾರವನು ಮರೆತುಕೊಂಬರು ಮತ್ತೆ । ಕೂಡಲೇ ಕಾದುವರು ಕಪಟತ್ವದಿಂದ || ರೂಢಿಯೊಳಗೆ ನಮ್ಮ ಪುರಂದರವಿಠಲನ್ನ । ಪಾಡಿ ಪೊಗಳುವರಿಗಿನ್ನಾರ ಭಯವಿಲ್ಲ ||

## ೧೫೩ ರಾಗ ಶಂಕರಾಭರಣ ಅಟತಾಳ

ಕೇಳಿದೆ। ನಿನ್ನಯ ಸುದ್ದಿ। ಕೇಳಿದೆ || ಪ || ನೀರೊಳು ಮುಳುಗಿದೆಯಂತೆ। ದೊಡ್ಡ। ಭಾರ ಗಿರಿಯ ಪೊತ್ತೆಯಂತೆ। ಗಡ್ಡೆ। ಬೇರು ಗೆಣಸ ಮೆದ್ದೆಯಂತೆ || ಆಹ। ಮೂರೆರಡರಿಯದ ತರಳನ ಮಾತಿಗೆ ಘೋರ। ದಾನ

ವನ ಸಂಹಾರ ಮಾಡಿದೆಯೆಂಬು ॥ ೧ ॥ ನಾರಿಯೊಬ್ಬಳ ಪೊರೆದೆಯಂತೆ । ಹೆತ್ತ । ನಾರಿಯಳನು ಕೊಯ್ದೆಯಂತೆ । ನಿನ್ನ । ನಾರೀಚೋರನ ಕೊಂದೆಯಂತೆ ॥ ಆಹ ॥ ಊರ ನಾರಿಯರ ಸೂರೆಗೊಳ್ಳುತ ಪರ । ನಾರಿಯರಭಿಮಾನ ಗಾರುಮಾಡಿದೆಯೆಂಬು ॥೨॥ ತುರುಗರಾವುತನಾದೆಯಂತೆ । ನಿನ್ನ । ಕರದಿ ಕುಡುಗೋಲು ನೇಣಂತೆ। ನಿನಗೆ ।ಸರಿ ಧರೆಯೊಳಗಿಲ್ಲವಂತೆ॥ ಆಹ॥ ವರದ ಶ್ರೀಪುರಂದರವಿಠ್ಠಲ ನಿನ್ನ ಈ । ಪರಿಪರಿ ಮಹಿಮೆಯ ಹರುಷಿಸುತಲಿ ನಾನು ॥ ೩ ॥

## ೧೫೪ ರಾಗ ನಾದನಾಮಕ್ರಿಯೆ ಆದಿತಾಳ

ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು ॥ಪ॥ ಭೂತದಯಾಪರನಾಗಿರಬೇಕು । ಪಾತಕವೆಲ್ಲವ ಕಳೆಯಲು ಬೇಕು । ಮಾತುಮಾತಿಗೆ ಹರಿಯೆನಬೇಕು ॥ ೧ ॥ ಆರು ವರ್ಗವನಳಿಯಲು ಬೇಕು । ಮೂರು ಗುಣಂಗಳ ಮೀರಲು ಬೇಕು । ಸೇರಿ ಬ್ರಹ್ಮನೊಳಿರಬೇಕು ॥ ೨ ॥ ಅಷ್ಟಮದಂಗಳ ತುಳಿಯಲು ಬೇಕು । ದುಷ್ಟರ ಸಂಗವ ಬಿಡಲು ಬೇಕು। ಕೃಷ್ಣ ಕೇಶವ ಎನ್ನಬೇಕು ॥೩॥ ವೇದಶಾಸ್ತ್ರವನೋದಲು ಬೇಕು । ಭೇದಹಂಕಾರವ ನೀಗಲು ಬೇಕು । ಮಾಧವಸ್ಮರಣೆಯೊಳಿರಬೇಕು ॥೪॥ ಶಾಂತಿ ಕ್ಷಮೆ ದಮೆ ಪಿಡಿಯಲು ಬೇಕು । ಭ್ರಾಂತಿ ಕ್ರೋಧವ ಕಳೆಯಲು ಬೇಕು । ಸಂತರ ಸಂಗದಿ ರತಿಯಿರಬೇಕು ॥೫॥ ಗುರುವಿನ ಚರಣಕ್ಕೆರಗಲುಬೇಕು । ತರಣೋಪಾಯವನರಿಯಲು ಬೇಕು । ವಿರಕ್ತಿಮಾರ್ಗದಲಿರಬೇಕು ॥೬॥ ಬಂದದ್ದುಂಡು ಸುಖಿಸಲು ಬೇಕು । ನಿಂದಾಸ್ತುತಿಗಳ ತಾಳಲು ಬೇಕು । ತಂದೆ ಪುರಂದರವಿಠ್ಠಲನೆನಬೇಕು ॥೭॥

## ೧೫೫ ರಾಗ ಪಂತುವರಾಳಿ ಏಕತಾಳ

ನಗೆಯು ಬರುತಿದೆ। ಎನಗೆ । ನಗೆಯು ಬರುತಿದೆ ॥ಪ॥ ಜಗದೊಳಿರುವ ಮನುಜರೆಲ್ಲ। ಹಗರಣ ಮಾಡುವುದ ಕಂಡು ॥ಅ॥ ಪರರ ವನಿತೆಯೊಲುಮೆ ಗೊಲಿದು । ಹರುಷದಿಂದ ಅವಳ ಬೆರೆದು॥ ಹರಿವ ನೀರಿನೊಳಗೆ ಮುಳುಗಿ।

ಬೆರಳ ಎಣಿಸುತಿಹರ ಕಂಡು ‖ ೧ ‖ ಪತಿಯ ಸೇವೆ ಬಿಟ್ಟು ಪರ । ಪತಿಯ ಕೂಡೆ ಸರಸವಾಡಿ ‖ ಸತತ ಮೈಯ ತೊಳೆದು ಹಲವು । ವ್ರತವ ಮಾಳ್ಪ ಸತಿಯ ಕಂಡು ‖ ೨ ‖ ಕಾಮಕ್ರೋಧ ಮನದೊಳಿಟ್ಟು । ತಾನು ವಿಷಯ ಪುಂಜನಾಗಿ ‖ ಸ್ವಾಮಿ ಪುರಂದರ ವಿಠಲನ । ನಾಮ ನೆನೆಯುವವರ ಕಂಡು ‖ ೩ ‖

## ೧೫೬ ರಾಗ ಶಂಕರಾಭರಣ ಅಟತಾಳ

ಏನು ಬೇಡಲಿ ಹರಿಯ ‖ಪ‖ ಜಾಹ್ನವೀಜನಕನ। ಕಂದರ್ಪನಯ್ಯನ‖ ‖ಅ‖ ಏನು ಬೇಡಲಿ ಚಿತ್ತಚಂಚಲಕಠಿನನ । ಮೌನದಿಂದಲಿ ಧರೆ ಕೋರೆ ಲೆತ್ತಿದನ । ಇಂಥವನ ‖ ೧ ‖ ಕರುಳಹಾರದವನ ಧರಣಿಯನು ಮೆಟ್ಟಿ । ಈರಡಿ ಮಾಡಿದ ಕೊಲೆಗಡುಕನ । ಇಂಥವನ ‖ ೨ ‖ ಅರಣ್ಯದಿ ಚರಿಸಿ ಸತಿಯ ಕಳೆದವನ । ತಿರುಗಿ ಮನೆಮನೆಯ ಬೆಣ್ಣೆ ಮೆಲ್ಲುವನ । ಇಂಥವನ ‖ ೩ ‖ ವಸನಶೂನ್ಯನಾಗಿ ಕಲ್ಕಿ ಏರಿದನ । ಕಾಸು ಕಟ್ಟಿಟ್ಟು ಕೇಸಕ್ಕಿ ಉಂಬುವನ । ಇಂಥವನ ‖೪‖ ಹಯವ ಪಿಡಿದು ಗಾಡಿಗಾರನಾಗಿಪ್ಪವನ । ಭಯದಿಂದ ಬಲಿಯ ಬಾಗಿಲ ಕಾಯಿದವನ । ಇಂಥವನ ‖ ೫ ‖ ಪುರವ ಜರಾಸಂಧನಿಗಂಜಿ ಬಿಟ್ಟವನ । ನೆರೆ ಸಾಧಿಸಿ ಮಾವನ ಶಿರವ ತರಿದನ । ಇಂಥವನ ।೬‖ ಜಗನ್ನಾಥ ಪುರಂದರವಿಠ್ಠಲರಾಯನ । ಭಕುತರಿಗೆ ಚತು ರ್ಮುಕ್ತಿ ಕೊಡುವವನ । ಇಂಥವನ ‖ ೭ ‖

## ೧೫೭ ರಾಗ ಮಧ್ಯಮಾವತಿ ಅಟತಾಳ

ತನುವ ನೀರೊಳಗದ್ದಿ ಫಲವೇನು। ಮನದಲ್ಲಿ ದೃಢಭಕ್ತಿಯಿಲ್ಲದ ಮನು ಜನು ‖ಪ‖ ದಾನಧರ್ಮಗಳನ್ನು ಮಾಡುವುದೆ ಸ್ನಾನ। ಜ್ಞಾನತತ್ತ್ವಂಗಳ ತಿಳಿವುದೆ ಸ್ನಾನ ‖ ಹೀನ ಪಾಪಂಗಳ ಬಿಡುವುದೆ ಸ್ನಾನ। ಧ್ಯಾನದಿ ಮಾಧ ವನ ನೋಡುವುದೆ ಸ್ನಾನ ‖೧‖ ಗುರುಗಳ ಪಾದದರ್ಶನವೆ ಸ್ನಾನ । ಹಿರಿ ಯರ ದರ್ಶನ ಮಾಡುವುದೆ ಸ್ನಾನ ‖ ಕರೆದು ಅನ್ನವನಿಕ್ಕುವುದೊಂದು ಸ್ನಾನ। ನರಹರಿಚರಣ ನಂಬುವುದೆ ಸ್ನಾನ ‖ ೨‖ ದುಷ್ಟರ ಸಂಗವ ಬಿಡು

ವುದೆ ಸ್ನಾನ। ಶಿಷ್ಟರ ಸಹವಾಸ ಮಾಡುವುದೆ ಸ್ನಾನ॥ ಸೃಷ್ಟಿಯೊಳಗೆ ಸಿರಿ ಪುರಂದರ ವಿಠಲನ। ಮುಟ್ಟಿ ಭಜಿಸಿದರೆ ವಿರಜಾಸ್ನಾನ ॥೩॥

### ೧೫೮ ರಾಗ ಕಮಾಚ್ ರೂಪಕತಾಳ

ಮೂರುತಿಯನೆ ನಿಲ್ಲಿಸೋ। ಎನ್ನ ಹೃದಯಕಮಲದೊಳು ಒದಗಿ ನೆನೆವಂತೆ ನಿನ್ನ । ಮೂರುತಿಯನೆ ನಿಲ್ಲಿಸೋ ॥ ಪ ॥ ಎಳೆತುಳಸಿಯ ವನಮಾಲೆಯು ಕೊರಳೊಳು ॥ ಹೊಳೆವ ಪೀತಾಂಬರ ಉಡಿಯೊಳೊಪ್ಪುವ ನಿನ್ನ ॥ ೧ ॥ ಮುತ್ತಿನ ಹಾರ ನವರತ್ನದುಂಗುರ ಬೆರಳೊಳು ॥ ಮತ್ತೆ ಶ್ರೀಲಕುಮಿಯು ಉರದೊಳೊಪ್ಪುವ ನಿನ್ನ ॥ ೨ ॥ ಭಕ್ತರ ಕಾಮಧೇನು ಕಲ್ಪವೃಕ್ಷವೆಂದೆನಿಸುವ ॥ ಭಕ್ತವತ್ಸಲ ಸಿರಿ ಪುರಂದರವಿಠಲ ನಿನ್ನ ॥೩॥

### ೧೫೯ ರಾಗ ಮುಖಾರಿ ಝಂಪೆತಾಳ

ಇನ್ನಾದರು ಹರಿಯ ನೆನೆ ಕಂಡ್ಯ ಮನುಜ। ಮುನ್ನಾದ ದುಃಖವು ನಿಜವಾಗಿ ತೊಲಗುವುದು ॥ಪ॥ ಊರೂರು ನದಿಗಳಲಿ ಬಾರಿಬಾರಿಗೆ ಮುಳುಗಿ। ತೀರದಲಿ ಕುಳಿತು ನೀ ಹಣೆಗೆ ನಿತ್ಯ ॥ ನೀರಿನಲಿ ಮಟ್ಟಿಯನು ಕಲೆಸಿ ಬರೆಯುತ ಮೂಗ । ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು ॥ ೧ ॥ ನೂರಾರು ಕರ್ಮಂಗಳನ್ನು ಡಂಭಕೆ ಮಾಡಿ । ಆರಾರಿಗೋ ಹಲವು ದಾನ ಕೊಟ್ಟು॥ ದಾರಿದ್ರ್ಯವನು ಪಡೆದು ತಿರಿದುಂಬುವುದಕೀಗ। ದಾರಿಯಾಯ್ತೋ ಹೊರತು ಬೇರೆ ಫಲವುಂಟೆ ॥೨॥ ನಾಡಾಡಿ ದೈವಗಳ ಚಿನ್ನ ಬೆಳ್ಳಿಗಳಿಂದ। ಮಾಡಿಕೊಂಡದರ ಪೂಜೆಯನು ಮಾಡಿ ॥ ಕಾಡ ಕಳ್ಳರು ಬಂದು ಅವುಗಳನು ಕೊಂಡೊಯ್ಯೆ । ಮಾಡಿಕೊಂಡಿರ್ದುದಕೆ ಬಾಯ ಬಡಕೊಳ್ಳುವೆಯೊ ॥ ೩ ॥ ಮಗನ ಮದುವೆಯು ಎಂದು ಸಾಲವನು ಮಾಡಿ ನೀ। ಸುಗುಣಿಯೆನ್ನಿಸಿ ಕೊಳಲು ವ್ಯಯ ಮಾಡಿದೆ ॥ ಹಗರಣವ ಪಡಿಸಿದರೆ ಸಾಲಗಾರನು ಬಂದು। ಬಗೆಬಗೆಯೊಳವರ ಕಾಲ್ಗೆರಗಿ ಬಿದ್ದಿರುವೆ ॥ ೪ ॥ ಕೆಟ್ಟ ಈ ಬದುಕುಗಳ ಮಾಡಿದರೆ ಫಲವೇನು । ತಟ್ಟನೇ ಶ್ರೀಹರಿಯ ಪದವ ನಂಬು ॥ ದಿಟ್ಟ ಶ್ರೀಪುರಂದರವಿಠಲಗತಿಯೆಂದರೆ । ಸುಟ್ಟು ಹೋಗುವುವಯ್ಯ ಕಷ್ಟರಾಶಿಗಳು ॥ ೫ ॥

## ೧೬೦ ರಾಗ ಮಧ್ಯಮಾವತಿ ಝಂಪೆತಾಳ

ನಂಬದಿರು ಈ ದೇಹ ನಿತ್ಯವಲ್ಲ। ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೆ॥ಪ॥ ಎಲುಬು ರಕ್ತ ಮಾಂಸಗಳ ಮೇಲ್ಚರ್ಮದ ಹೊದಿಕೆ। ಒಳಗೆ ಮಲಮೂತ್ರಾದಿ ಕ್ರಿಮಿಗಳಿಹವು॥ ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು। ಬಲುಹು ದೇಹವ ನೆಚ್ಚಿ ಕೆಡಬೇಡ ಮನುಜ ॥೧॥ ಸತಿಸುತರು ಹಿತರೆಂದು ಮತಿ ಮರೆತು ಮಮತೆಯಲಿ। ಅತಿಕಾಂಕ್ಷೆಯಿಂದ ದುರ್ವಿಷಯ ಕೊಲಿದು॥ ಸತತ ಲಕ್ಷ್ಮೀಪತಿಯ ಶರಣೆನದೆ ಇಹಪರದ। ಗತಿಶೂನ್ಯನಾಗಿ ನೀ ಕೆಡಬೇಡ ಮನುಜ ॥೨॥ ಪರರ ನಿಂದಿಸದೆ ಪರವಧುಗಳನು ಬಯಸದಿ ಗುರುವಿಪ್ರಸೇವೆಯನು ಮಾಡು ಬಿಡದೆ॥ ಹರಿಸ್ತುತಿಯ ನೀ ಕೇಳು ಹರಿ ಕೀರ್ತನೆಯ ಮಾಡು। ಸಿರಿಪುರಂದರವಿಠಲನೊಲಿದು ಪಾಲಿಸುವ ॥೩॥

## ೧೬೧ ರಾಗ ಪೂರ್ವಿ ಅಟತಾಳ

ನಾ ನಿನ್ನೊಳನ್ಯ ಬೇಡುವುದಿಲ್ಲ। ಎನ್ನ। ಹೃದಯಕಮಲದೊಳು ನಿಂದಿರು ಹರಿಯೆ॥ ನಾ ನಿನ್ನೊಳನ್ಯ ಬೇಡುವುದಿಲ್ಲ॥ಪ॥ ಶಿರ ನಿನ್ನ ಚರಣಕೆ ಎರಗಲಿ। ಎನ್ನ। ಚಕ್ಷು ಸದಾ ನಿನ್ನ ನೋಡಲಿ ಹರಿಯೆ॥ ಕರ್ಣ ಗೀತಂಗಳ ಕೇಳಲಿ। ನಿನ್ನ। ನಿರ್ಮಾಲ್ಯವ ನಾಸವಾಘ್ರಾಣಿಸಲಿ ಹರಿಯೆ॥ ॥೧॥ ನಾಲಿಗೆ ನಿನ್ನ ಕೊಂಡಾಡಲಿ। ಎನ್ನ। ಕರಗಳೆರಡು ನಿನ್ನ ನರ್ಚಿಸಲಿ ಹರಿಯೆ॥ ಚರಣ ತೀರ್ಥಯಾತ್ರೆ ಮಾಡಲಿ।ಎನ್ನ। ಮನ ಅನುದಿನ ನಿನ್ನ ಸ್ಮರಿಸಲಿ ಹರಿಯೆ॥೨॥ ಬುದ್ಧಿ ನಿನ್ನೊಳು ಬೆರತ್ಹೋಗಲಿ। ಎನ್ನ। ಚಿತ್ತ ನಿನ್ನೊಳು ಸ್ಥಿರವಾಗಲಿ ಹರಿಯೆ॥ ಭಕ್ತಜನರ ಸಂಗವಾಗಲಿ। ಪುರಂ। ದರ ವಿಠಲನೆ ಇಷ್ಟೇ ದಯಮಾಡು ಹರಿಯೆ॥ ೩ ॥

## ೧೬೨ ರಾಗ ಮುಖಾರಿ ಝಂಪೆತಾಳ

ಸಾಕು ಸಾಕಿನ್ನು ಸಂಸಾರಸುಖವು ॥ ಪ ॥ ಶ್ರೀಕಾಂತ ನೀ ನೊಲಿದು ಕರುಣಿಸೈ ಹರಿಯೆ॥ಅ॥ ಉದಿಸಿದವು ಪಂಚಭೂತಗಳಿಂದ ಓಷಧಿಗ। ಳುದಿಸಿದವು ಓಷಧಿಗಳಿಂದನ್ನವು॥ ಉದಿಸಿದವು ಅನ್ನದಿಂ ಶುಕ್ಲಶೋಣಿತವೆರಡು।

ಉದಿಸಿದವು ಸತಿಪುರುಷರೀರ್ವರೊಳು ಹರಿಯೆ ||೧|| ಸತಿಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ| ಪತನವಾದಿಂದ್ರಿಯವೆ ಹೊಲೆ ರಕ್ತವು || ಋತುಕಾಲ ದೊಳಗೆರಡು ಏಕತ್ರ ಸಂಧಿಸಲು | ಗತಿಸುದುದು ಮಾಸವೊಂದೀರ್ವರೊಳು ಹರಿಯೆ ||೨|| ಮಾಸವೆರಡರಲಿ ಶಿರ ಮಾಸ ಮೂರರೊಳಂಗ | ಮಾಸ ನಾಲ್ಕರಲಿ ಚರ್ಮದ ಹೊದ್ದಿಕೆ || ಮಾಸವೈದಾರರಲಿ ನಖ ರೋಮ ನವ ರಂಧ್ರ| ಮಾಸವೇಳರಲಿ ಹಸಿವು ತೃಷೆ ಹರಿಯೆ ||೩|| ತಿಂಗಳೆಂಟರಲಿ ಪೂರ್ವಾನುಭವ ಕರ್ಮಗಳು | ಅಂಗವೆಲ್ಲವ ತಿಳಿದು ಅರಿಕೆಯಿಂದ || ಅಂಗನೆ ಯುದರಕಿನ್ನೆಂದಿಗೂ ಬರೆನೆಂದು | ಹಿಂಗದಲೆ ಧ್ಯಾನಿಸುತ ಕಳೆದೆನೋ ದಿನವ ||೪|| ಇನಿತು ನವಮಾಸ ಮಲಮೂತ್ರದಾ ಗರ್ಭದಲಿ | ಸಿಲುಕಿರಲು ನರಕದಾಯಾಸದೊಳಗೆ || ಘನ ಮರುತಯೋಗದಿಂ ನರುಳುತಿಲ್ಲಿಗೆ ಬಂದು| ಜನಿಸಿ ಮೃತಭಾವದಿಂ ನೊಂದೆನೈ ಹರಿಯೆ ||೫|| ಧರೆಯು ಮೇಲುದಿಸಿ ಶ್ರೀವಿಷ್ಣುಮಾಯಕೆ ಸಿಲುಕಿ | ಪರವಶದಿ ಹಸಿದು ನೀರಡಿಸಿ ಬೇಗ || ಭರದಿ ಕಣ್ದೆರೆದು ಗೋಳಿಟ್ಟು ಪ್ರಪಂಚವಿದು| ಸ್ಥಿರವೆಂದು ನಂಬಿ ನಾ ಮರುಳಾದೆ ಹರಿಯೆ ||೬|| ಶಿಶುತನದೊಳಿರಲು ನೊಣ ಮುಸುಕಲದರಿಂದಳಲು | ಹಸಿದ ನಿವನೆಂದು ಸ್ತನ್ಯವ ಕೊಡುವರು || ಹಸಿವು ತೃಷೆಗಳಿಂದಳಲು ಹಾಡಿ ತೂಗುತಲಿಹರು | ಪಶುವಂತೆ ಶಿಶುತನದೊಳಿರಲಾರೆ ಕೃಷ್ಣ ||೭|| ಬಾಲ್ಯ ದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು | ಮೇಲೆ ಗೋಳಿಟ್ಟು ವಿದ್ಯೆ ಗಳ ಕಲಿತು || ಮೇಲೆ ಯೌವನ ಬರಲು ತನುಮೂಲವನು ಮರೆತು| ಬಾಲೆಯರ ಬಯಸಿ ನಾ ಮರುಳಾದೆ ಹರಿಯೆ ||೮|| ಜ್ವರದ ಮೇಲತಿಸಾರ ಬಂದೊದಗುವಂದದಲಿ ನಿರತ ಕಾಮಕ್ರೋಧ ವಿಷಯಂಗಳಲ್ಲಿ || ತರುಣಿಯ ರಿಗೊಡವೆ ಭಂಗಾರ ಬೇಕೆಂದನುತ | ಪರಸೇವೆಯೊಳು ನಾನು ಕಡು ನೊಂದೆನಯ್ಯ ||೯|| ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು | ಕಟ್ಟಿ ಕೊಂಡಿಹರು ತನು ಬಿಟ್ಟಬಳಿಕ || ಕುಟ್ಟಿ ಕೊಂಡಳುತ ಹೋಯೆಂದು ಗೋಳಿಡುತಂಜಿ | ಮುಟ್ಟದೇ ದೂರದಲಿ ನಿಂದಿಹರು ಹರಿಯೆ ||೧೦|| ಸತ್ತ ವರಿಗಳಲೇಕೆ ಸುತ್ತ ಬಂಧುಗಳೆಲ್ಲ | ಸ್ವಸ್ಥವಿರಿ ಹೊತ್ತು ಹೋಯಿತು ಎನುತಲಿ || ಒತ್ತಿಸಿದ ಕಸಕಿಂತ ಅತ್ತತ್ತ ಈ ದೇಹ | ಹೊತ್ತು ಕೊಂಡೊಯ್ದು ಅಗ್ನಿಯಲಿ ಬಿಸಡುವರು ||೧೧|| ದೇವನೇ ನಾನಿನ್ನ

ಯೋನಿಮಾರ್ಗದ ಒಳಗೆ। ಈ ವಿಧದಿ ಭವಣೆ ಬಡಲಾರೆ ಬಹಳ ॥ ಕಾವ ಕರುಣಿಯೆ ನಮ್ಮ ಪುರಂದರವಿಠ್ಠಲನೆ । ಭಾವ ಭಕುತಿಯು ಕೊಟ್ಟು ರಕ್ಷಿಸೋ ಹರಿಯೆ ॥ ೧೨ ||

### ೧೬೩ ಯದುಕುಲಕಾಂಭೋಜಿ ತ್ರಿಪುಟತಾಳ

ಇವಗೇಕೆ ಪರಿಮಳ ಇವಗೇಕೆ ಶೃಂಗಾರ । ನವನೀತಚೋರ ನಾರುವ ಗೊಲ್ಲಗೆ ॥ ಪ ॥ ಹೊಲಸು ಮೈಯವಗೇಕೆ ಹೊಸ ಕಸ್ತೂರಿವಾಟ । ತಲೆ ದೋರುವಗೇಕೆ ದಟ್ಟ ಪುನಗು॥ ಬಲು ಕೇಶದವಗೇಕೆ ಬಾವನ್ನದಾ ಲೇಪ। ಸಲೆಕುರುಪಿನವಗೇಕೆ ಮಂಡೆಸಾದು ॥ ೧ || ತುಲಸಿಮಾಲೆಯ ಧರಿಸಿದವ ಗೇಕೆ ಜವ್ವಾಜಿ । ಕೊಲೆಗಡುಕಗೇಕೆ ಕುಂಕುಮದ ತಿಲಕ ॥ ಅಲೆದಿರುವ ಗೇಕೆ ಅರಣ್ಯಾದಿ ಅಂಗದ ಸುಖ । ಅಳಿಯ ಅಂಬುವಗೇಕನಂಗಸೊಬಗು ॥೨॥ ಪರಸತಿಯರ ಬಯಸುವಗೆ ಪನ್ನಗಶಯನವೇಕೆ । ಹರಿದಾಡುವವ ಗೇಕೆ ಆಡಪಗಡಿ ॥ ಸಿರಿದೇವಿ ಶೃಂಗಾರಗೈದು ವರಿಸಿದ ಬಳಿಕ। ಧರೆಗಧಿಕ ನಾದನೀ ಪುರಂದರಾವಿಠಲ ॥೩॥

### ೧೬೪ ರಾಗ ಕಾಂಭೋಜಿ ಝಂಪೆತಾಳ

ಏಕೆನ್ನ ಈ ರಾಜ್ಯಕೆಳೆತಂದೆ ಹರಿಯೆ । ಸಾಕಲಾರದೆ ಎನ್ನನೇಕೆ ಪುಟ್ಟಿ ಸಿದೆ ॥ಪ॥ ಎನ್ನ ಕುಲದವರಿಲ್ಲ ಎನಗೊಬ್ಬ ಹಿತರಿಲ್ಲ । ಮನ್ನಿಸುವ ದೊರೆ ಯಿಲ್ಲ । ಮನಕೆ ಜಯವಿಲ್ಲ ॥ ಹೊನ್ನು ಚಿನ್ನಗಳಿಲ್ಲ । ಒಲಿಸಿಕೊಂಬುವ ರಿಲ್ಲ । ಇನ್ನಿಲ್ಲಿ ತರವಲ್ಲ । ಇಂದಿರೇಶನು ಬಲ್ಲ ॥ ॥ ದೇಶಪರಿಚಯವಿಲ್ಲ । ದೇಹದೊಳು ಬಲವಿಲ್ಲ । ವಾಸಿಪಂಥಗಳೆಂಬೊ । ಒಲುಮೆಯೆನಗಿಲ್ಲ ॥ ಬೇಸರ ಕಳೆವರಿಲ್ಲ । ಬೇರೆ ಹಿತಜನರಿಲ್ಲ । ವಾಸುದೇವನೆ ಬಲ್ಲ । ಈ ರಾಜ್ಯವೆಲ್ಲಿ ॥೨॥ ಕರೆದು ಕೊಡುವವರಿಲ್ಲ । ಕರುಣ ತೋರುವರಿಲ್ಲ । ಕಮ ಲಾಕ್ಷನಲ್ಲದೆ । ಗತಿಯೊಬ್ಬರಿಲ್ಲ ॥ ಕನಸಿನಲಿ ಕಳುವಿಲ್ಲ । ಮನಸಿನಲಿ ದೃಢ ವಿಲ್ಲ । ವನಜಾಕ್ಷ ಪುರಂದರ। ವಿಠಲ ತಾ ಬಲ್ಲ ॥ ೩ ॥

### ೧೬೫ ರಾಗ ಭೈರವಿ ಆದಿತಾಳ

ಏಕೆ ದಯ ಬಾರದೋ । ಲೋಕನಾಯಕ ನಿನ । ಗೇಕೆ ॥ಪ॥ ಇಂದಿ ರೇಶ ನಿಮ್ಮ ಪಾದ । ದ್ವಂದ್ವವ ನಂಬಿದೆನಯ್ಯ ॥ ಬಂದು ಸಲಹೊ ಬೇಗ

ದಿಂದ। ನಂದಗೋಪನ ಕಂದ ನಿನಗೆ ॥ ೧ ॥ ಸೃಷ್ಟಿಯೊಳಗೆ ನಿನಗೆ ಎ। ಳ್ಳಷ್ಟು ಕರುಣ ಬಾರದೇಕೊ ॥ ಸಿಟ್ಟೇಕೊ ಎನ್ನ ಮೇಲೆ। ಮುಷ್ಟಿಕಮರ್ದನ ಕೃಷ್ಣ ನಿನಗೆ ॥೨॥ ಅಷ್ಟಮಸ್ತ್ರೀಯರ ಪತಿಯೆ ಎನ್ನ। ಕಷ್ಟವ ಪರಿಹರಿಸೊ ಮುನ್ನ ॥ ಬೆಟ್ಟಲಿ ಬೆಟ್ಟವನೆತ್ತಿದ। ದಿಟ್ಟ ಶ್ರೀ ಗೋಪಾಲ ನಿನಗೆ॥ ॥ ೩ ॥ ವಾಸುಕೀಶಯನ ಎನ್ನ। ದೋಷವ ಪರಿಹರಿಸೊ ಇನ್ನು ॥ ದಾಸ್ಯವಿತ್ತು ನೋಡೊ ಅಂಜನಾ। ದ್ರೀಶ ಶ್ರೀನಿವಾಸ ನಿನಗೆ ॥ ೪ ॥ ಅರವಿಂದಾಕ್ಷ ನೀನೆ ಎನಗೆ। ಸರುವ ಬಳಗ ಬಂಧು ಭಾಗ್ಯ ॥ ಅರಿಯ ಪರಾಕ್ರಮವ ಬೇಗೆ। ಪುರಂದರವಿಠಲ ನಿನಗೆ ॥ ೫ ॥

## ೧೬೬ ರಾಗ ನೀಲಾಂಬರಿ ಮಟ್ಟೆತಾಳ

ಏಕೆ ಚಿಂತಿಸುವೆ ಬರಿದೆ ಮರುಳೆ ॥ಪ॥ ವಿಧಿ ಬರೆದ। ವಾಕು ತಪ್ಪದು ಎಂದಿಗೂ ಮರುಳೆ ॥ಅ॥ ಹುಟ್ಟುವುದಕಿಂತ ಮೊದಲೆ ತಾಯ ಸ್ತನ। ದಿಟ್ಟ ಕ್ಷೀರವನು ಉಂಡು ॥ ತೊಟ್ಟಿಲೊಳು ಮಲಗುವಾಗ ಗಳಿಸಿ ತಂ। ದಿಟ್ಟು ನೀನುಣುತಿದ್ದೆಯೊ ಮರುಳೆ ॥ ೧ ॥ ಉರಗ ವೃಶ್ಚಿಕ ಪಾವಕ ಕರಿ ನಂಜು। ಅರಸು ಹುಲಿ ಚೋರ ಭಯವು ॥ ಹರಿಯಾಜ್ಞೆಯಿಂದಲೇವೇ ನೀನು ಮಹಾ। ಶರಧಿ ಪೊಕ್ಕರು ಬಿಡದು ಮರುಳೆ ॥ ೨ ॥ ಇಂತು ಸುಖದುಃಖಂಗಳಿಗೆ ಸಿಲುಕಿ ನೀ। ಭ್ರಾಂತನಾಗಿ ಕೆಡಲುಬೇಡ ॥ ಸಂತೋಷದಿಂದರ್ಚಿಸಿ ಪೂಜಿಸು। ಕಂತುಪಿತ ಶ್ರೀ ಪುರಂದರವಿಠಲನ ॥೩॥

## ೧೬೭ ರಾಗ ಸೌರಾಷ್ಟ್ರ ಅಟತಾಳ

ನಾರಾಯಣನೆಂಬ ನಾಮವ ನೇಮದಿ ನೆನೆವುತಿರೆಚ್ಚರಿಕೆ ॥ ಪ ॥ ನೀರಮೇಲಿನ ಗುಳ್ಳೆ ನರನೆಂಬ ಡಿಂಭವ ನಂಬದಿರೆಚ್ಚರಿಕೆ॥ಅ॥ ಪರರು ಮಾಡಿದ ಪಾತಕಗಳುಚ್ಚರಿಸದೆ ನಾಲಿಗೆಗೆಚ್ಚರಿಕೆ। ಗುರುಹಿರಿಯರ ಸೇವೆ ಮಾಡದೆ ಉದರವ ಪೊರೆಯದಿರೆಚ್ಚರಿಕೆ ॥ ಹರಿದಿನದುಪವಾಸ ಇರುಳು ಜಾಗರವ ನೀ ಮರೆಯದಿರೆಚ್ಚರಿಕೆ। ನರಹರಿಯಂಘ್ರಿಯ ಸ್ಮರಿಸದೆ ನರಸ್ತುತಿ ತರವಲ್ಲ ಎಚ್ಚರಿಕೆ ॥೧॥ ಹೀನ ಮಾನಿನಿಯರ ಧ್ಯಾನಕಾನನದೊಳಗಿಳಿಯದಿರೆಚ್ಚ

ರಿಕೆ । ನಾನೆಂಬೊ ಅಹಂಕಾರ ಮಾಡಿ ನರಕದೊಳು ನರಳದಿರೆಚ್ಚರಿಕೆ ॥ ಜಾಹ್ನವೀಸ್ನಾನ ಸಂಧ್ಯಾನುಷ್ಠಾನ ಸುಜ್ಞಾನ ಕೇಳೆಚ್ಚರಿಕೆ । ಜಾನಕಿರ ಮಣನ ಧ್ಯಾನವೆ ಧರ್ಮಸಂತಾನ ಮುಂದೆಚ್ಚರಿಕೆ ॥ ೨ ॥ ಮಡದಿಮಕ್ಕಳೆಂಬೊ ಕಡುಮೋಹಕ್ಕೆ ಸಿಲುಕಿ ಕೆಡಬೇಡೆಚ್ಚರಿಕೆ । ನಡೆವಾಗ ನುಡಿವಾಗ ಗಿಡವೆಲ್ಲ ನೆಂಟರು ಕಡೆಗಿಲ್ಲ ಎಚ್ಚರಿಕೆ ॥ ಕೊಡುಗೈಯ ಮಾಡದೆ ಮಡಗಿದ ಧನ ಸಂಗಡ ಬಾರದೆಚ್ಚರಿಕೆ। ದೃಢಭಕ್ತಿಯಿಂದಲಿ ಪುರಂದರವಿಠಲನ್ನ ನೆರೆನಂಬು ಎಚ್ಚರಿಕೆ ॥ ೩ ॥

## ೧೬೪ ರಾಗ ಶ್ರೀರಾಗ ಆದಿತಾಳ

ಪುಂಡರೀಕವರದ ಪಂಢರಿರಾಯನ ಕೇಳವ್ವ ಕೇಳೆ ॥ ಪ ॥ ಗೋಕುಲದೊಳಗೆ ತಾನಿಪ್ಪ । ಮೂರುಲೋಕಕೆ ತಾನಪ್ಪ ॥ ಕೊಳಲ ಧ್ವನಿಯ ಮಾಡುತಲಿಪ್ಪ । ನಮ್ಮ। ತುರುಗಳ ಕಾಯುತಲಿಪ್ಪ ॥ ೧ ॥ ವೃಂದಾವನದೊಳು ನಿಂದ। ನಂದನ ಕಂದ ಗೋವಿಂದ ॥ ಕೊಳಲ ಧ್ವನಿ ಬಹು ಚಂದ। ಮೂ। ಜಗವ ಪಾಲಿಪ ಮುಕುಂದ ॥೨॥ ಸುರತರುವಿನ ನೆರಳಲ್ಲಿ । ಇವನ। ಹೆಗಲಿನ ಮೇಲೆ ಕೊಡಲಿ ॥ ನೆರೆದಿಹ ಗೋಪಿಯರಲ್ಲಿ । ಗೋಪಾಲ। ರಾಡುತ ಲೀಲೆಗಳಲ್ಲಿ ॥೩॥ ಕರ್ಪೂರ ವೀಳ್ಯವ ಮೆಲುವ। ನಮ್ಮ। ಕಸ್ತೂರಿ ತಿಲಕ ಉಂಗುರವ ॥ ಮುತ್ತಿನ ಓಲೆ ವರ ಚೆಲುವ । ವಿಸ್ತರದಿ। ಹದಿನಾಲ್ಕು ಲೋಕ ಪೊರೆವ ॥ ೪ ॥ ಹಿಮಕರಚರಣದ ಕರನ । ಮೂಜಗ ಪಾಲಿಪ ಕರುಣ ॥ ಅಮರರಿಗೆ ಒಲಿದವನ । ನಮ್ಮ। ಪುರಂದರವಿಠ್ಠಲ ರಾಯನ ॥ ೫ ॥

## ೧೬೫ ರಾಗ ಶಂಕರಾಭರಣ ಅಟತಾಳ

ಕಪ್ಪುಯೆನ್ನಲು ಬೇಡವೋ । ಶ್ರೀಹರಿಯನ್ನು । ಕಪ್ಪುಯೆನ್ನಲು ಬೇಡವೊ ॥ಪ॥ ಹರಿಯ ಮಧ್ಯದಿ ಕಪ್ಪು । ಹಾಲಾಹಲವು ಕಪ್ಪು । ಪರಮ ಅಶ್ವವೆ ಕಪ್ಪು ॥ ಪಾರಿಜಾತವೆ ಕಪ್ಪು । ಕರಿಗಳೆಲ್ಲವು ಕಪ್ಪು । ಸುಲಲಿತ ವರನೆ ಕಪ್ಪು ॥ ಸನ್ನುತವಾದ ಹರಿಹಯ ನೀಲಿ ಕಪ್ಪು । ಅಂಗನೆ ಕೇಳು

ಜಗದೊಳು ಗುಲುಗುಂಜಿ ಶಿರಗಳೆಲ್ಲವು ಕಪ್ಪು ||೧|| ಬರಿವ ಕಂಟವೆ ಕಪ್ಪು | ಭಾರದ್ವಾಜವೆ ಕಪ್ಪು | ವರರಾಘವನ್ನ ಪಾವನಂಗವೆ ಕಪ್ಪು || ಎರೆವ ಭೂಮಿಯು ಕಪ್ಪು | ಸರಸಿಜೋದ್ಭವ ಕಪ್ಪು | ಸುಲಲಿತವರನೆ ಕಪ್ಪು | ಅಂಗನೆ ಕೇಳು ಮೂರು ಲೋಕದಿ ನಮ್ಮ ಮುದ್ದುಕೃಷ್ಣನೆ ಕಪ್ಪು ||೨|| ಶಾಲಗ್ರಾಮವೆ ಕಪ್ಪು | ಸರಸಿಜೋದ್ಭವ ಕಪ್ಪು | ಲೋಲಂಬಗಳು ಕಪ್ಪು || ರುಚಿತ ಕೋಗಿಲೆ ಕಪ್ಪು |ಮಾಲವೃಕ್ಷವೆ ಕಪ್ಪು | ನಿರ್ಮಲಚಿತ್ರವೆ ಕಪ್ಪು || ಕಾಳಿಂದೀ ನದಿಯೆ ಕಪ್ಪು | ಕಾಮಿನಿಯರ ಕರಿಮಣಿಸರವೆ ಕಪ್ಪು | ಅಂಗನೆ ಕೇಳು ಮೂರು ಲೋಕದಿ ನಮ್ಮ ಪುರಂದರವಿಠಲಮೂರುತಿ ಕಪ್ಪು ||೩||

## ೧೭೦ ರಾಗ ಮುಖಾರಿ ಝಂಪೆತಾಳ

ಅಂಜಲೇತಕೆ ಮನವೆ ಅನುಗಾಲವು | ಕಂಜನಾಭನ ಭಕ್ತಿ ಕೈಕೊಂಡ ಬಳಿಕ ||ಪ|| ನಾರಾಯಣನೆಂಬೊ ನಾಲ್ಕು ಅಕ್ಷರದಿಂದ | ಘೋರ ದುರಿತ ಗಳೆಲ್ಲ ಕಳೆಯಬಹುದು || ಶ್ರೀರಾಮನಾಮವೆಂಬೊ ಸಿಂಗಾಡಿ ತಕ್ಕೊಂಡು | ವೈರಿಷಡ್ವರ್ಗಗಳವಧೆಮಾಡಬಹುದು ||೧|| ಶ್ರೀಕೇಶವನೆಂಬೊ ಸಿದ್ಧಮಂತ್ರ ಗಳಿಂದ | ಬೇಕಾದ ಕರ್ಮಗಳ ಕಳೆಯಬಹುದು || ವೈಕುಂಠಪತಿಯೆಂಬ ವಜ್ರವನು ತಕ್ಕೊಂಡು | ನೂಕುವ ಯಮಭಟರ ನುಗ್ಗುಮಾಡಲುಬಹುದು|| ||೨|| ಹರಿ ವಾಸುದೇವನೆಂಬೊ ಅಮೃತಪಾನಗಳಿಂದ | ಜರೆಮರಣಜನನ ಗಳ ಜಯಿಸಬಹುದು || ವರದ ಶ್ರೀಪುರಂದರವಿಟ್ಠಲನ ಸ್ಮರಣೆಯನು |ಸರಸ ಸದ್ಭಕ್ತಿಯಿಂ ಸವಿಮಾಡಬಹುದು ||೩||

## ೧೭೧ ರಾಗ ಕಮಾಚು ಆದಿತಾಳ

ಕರೆದರೆ ಓ ಎನ್ನಬಾರದೆ || ಪ || ಲಕ್ಷ್ಮೀರಮಣ | ಕರೆದರೆ ಓ ಎನ್ನ ಬಾರದೆ || ಅ || ಹಿರಣ್ಯಕನ ಉದರದಲ್ಲಿ ಬಂದ ಪ್ರಹ್ಲಾದನ || ಪರಿಪರಿ ದುರಿತಗಳನೆಲ್ಲ ಪರಿಹರಿಸಿ ಕಾಯಿದಂಥಾ ಸ್ವಾಮಿ ||೧|| ಭೀಮರಥಿಯೊಳ ಗೊಬ್ಬ ದಾಸ ಮುಣುಗಿ ಪೋಗಿರಲು || ಪೂಮಾಲೆ ಪೀತಾಂಬರವನು ತೋಯದೆ ಕಾಯಿದಂಥಾ ಸ್ವಾಮಿ || ೨ || ಅಂತ್ಯಕಾಲಸಮಯದಲ್ಲಿ ಅಧಿ

ಯುವ ಅಜಮಿಳನು ॥ ಅಂತ್ಯಾಸುತನ ಕೂಗಲು ವೈಕುಂಠಪದವಿತ್ತಂಥ ಸ್ವಾಮಿ ॥ ೩ ॥ ದುರುಳ ದುಶ್ಯಾಸನ ಬಂದು ಸೆರಗ ಪಿಡಿದು ಸೆಳೆವಾಗ ॥ ತರುಣಿ ದ್ರೌಪದಿಯಭಿಮಾನವ ತ್ವರದಿ ಕಾಯಿದಂಥಾ ಸ್ವಾಮಿ ॥ ೪ ॥ ಇಂತಿಂಥ ಭಕುತರಿಗೆ ಚಿಂತೆಯ ಪರಿಹರಿಸಿ ॥ ಕಂತುಪಿತ ಪುರಂದರವಿಠಲ ನಿಂತು ಕಾಯಿದಂಥಾ ಸ್ವಾಮಿ ॥೫॥

## ೧೭೨ ರಾಗ ಕಾಂಭೋಜಿ ಝಂಪೆತಾಳ

ಕೆಂಡಕೆ ಒರಳೆ ಮುತ್ತುವುದುಂಟೆ । ಪಾಂಡುರಂಗನ ದಾಸರಿಗೆ ಭಯ ವುಂಟೆ ॥ ಪ ॥ ಆನೆ ಸಿಂಹನ ಕೂಡೆ ಸ್ನೇಹ ಬೆಳೆಸುವುದುಂಟೆ । ಶ್ವಾನ ಹೆಬ್ಬುಲಿ ಕೂಡೆ ಸರಸವುಂಟೆ ॥ ಏನೆಂಬೆ ಮನದಲ್ಲಿ ಸರ್ವದಾ ನಿನ್ನಂಘ್ರಿ । ಧ್ಯಾನದೊಳಿದ್ದವಗೆ ದಾರಿದ್ರ್ಯವುಂಟೆ ॥ ೧ ॥ ಕತ್ತಲೆಯೊಳು ರವಿ ಕವಿದು ಮುಚ್ಚುವುದುಂಟೆ । ಹುತ್ತ ಸರ್ಪನ ಕಪ್ಪೆ ನುಂಗುವುದುಂಟೆ ॥ ಅತ್ತಿತ್ತ ತೊಲಗದೆ ಚಿತ್ತಜನಯ್ಯನ । ಚಿತ್ತದೊಳಿಟ್ಟವಗೆ ಚಿಂತೆಯುಂಟೆ ॥೨॥ ಆ ಮಾರುತನ ಗುದ್ದಿ ಅಂಗ ನೋಯಿಪುದುಂಟೆ। ಹೇಮಗಿರಿಯು ವಜ್ರ ಸೀಳೋದುಂಟೆ॥ ಸ್ವಾಮಿ ಶ್ರೀಪುರಂದರವಿಟ್ಠಲರಾಯನ । ನಾಮಧಾರಿಗಳಿಗೆ ನರಕ ವುಂಟೆ ॥ ೩ ॥

## ೧೭೩ ರಾಗ ನಾದನಾಮಕ್ರಿಯೆ ಏಕತಾಳ

ನಾ ಡೊಂಕಾದರೆ ನಿನ್ನ ನಾಮ ಡೊಂಕೆ ವಿಟ್ಠಲ ॥ ಪ ॥ ನದಿಯು ಡೊಂಕು ಆದರೇನು । ಉದಕ ಡೊಂಕೆ ವಿಟ್ಠಲ ॥ ೧ ॥ ಹಾವು ಡೊಂಕು ಆದರೇನು । ವಿಷವು ಡೊಂಕೆ ವಿಟ್ಠಲ ॥ ೨ ॥ ಪುಷ್ಪ ಡೊಂಕು ಆದರೇನು । ಪರಿಮಳ ಡೊಂಕೆ ವಿಟ್ಠಲ ॥ ೩ ॥ ಆಕಳು ಡೊಂಕು ಆದರೇನು । ಹಾಲು ಡೊಂಕೆ ವಿಟ್ಠಲ ॥ ೪ ॥ ಬಿಲ್ಲು ಡೊಂಕು ಆದರೇನು । ಬಾಣ ಡೊಂಕೆ ವಿಟ್ಠಲ ॥ ೫ ॥ ನಾನು ಹೊಲೆಯನಾದರೆ ನಿನ್ನ । ನಾಮ ಹೊಲೆಯೆ ವಿಟ್ಠಲ ॥೬॥ ಅಜ್ಞನೆಂದು ಕಾಯೊ ಎನ್ನ । ಸುಜ್ಞ ಪುರಂದರವಿಟ್ಠಲ ॥೭॥

## ೧೭೪ ರಾಗ ಪಂತುವರಾಳಿ ಏಕತಾಳ

ಕುಣಿದಾಡೊ ಕೃಷ್ಣ ಕುಣಿದಾಡೊ ||ಪ|| ಫಣಿಯ ಮೆಟ್ಟಿ ಬಾಲವ ಪಿಡಿದು| ಕುಣಿಕುಣಿದಾಡುವ ಪಾದದೊಳೊಮ್ಮೆ ||ಅ|| ಮುಂಗುರುಳುಂಗುರ ಜಡೆಗಳರಳೆಲೆ| ಪೊಂಗೊಳಲಲಿ ರಾಗಂಗಳ ನುಡಿಸುತ್ತ ತ್ರಿ || ಭಂಗಿಯಲಿ ನಿಂದು ಧಿಗಿಧಿದಿತಾಂಗಿಣ| ತಾಂಗಿಣಾ ಥಕ್ಕಥಕ್ಕಧಿಮಿಯೆಂದು||೧|| ಮುಖ ಜಾರಿಮ ಪುಲ್ಲಗವಾಜಿಯೆ| ಝಂ ಝಂ ಝಂ ಚುಂಬನಕಾಗಿ || ಝಣಾಂ ಝಣಾ ಝಂ ಕಿಟತಾಕಿಟಕಿಟ ತೋಂಗಿಣತೋ| ಧಿಮಿ ತೋಂಗಿಣ ಪಾದ ದೊಳೊಮ್ಮೆ||೨|| ಪ್ರಕಟದಿ ದಿನಗಳು ಪರಿಚಾರಂಗಳು| ವಿಕಲಿತ ನಾಟಕ ಭೇರಿಗಳು || ತೊಂಕಿಣಿ ತೊಂಹಿರಿ ತೊಂತರಿ ತರಿಗಿಟ| ತಕ್ಕಿಟ ತರಿಕಿಟ ತಕಿಟ ಶಬ್ದದಿ ||೩|| ಪೆರಣಗಾಂಚಿತ್ತಲೆದಂವೆಗಂ| ಸರಹರಪ್ರತಿಜ ವಾಗರ ಶೆಂದ || ಪ್ರಣಾಂ ಉ್ರಾಂ ಎಂದು ಧಿಮಿಕಿಟ ಧಿಮಿಕಿಟ| ತಧಿಕುತ ಧಿಕುತಂ ತದ್ಧಾಥೈ ಎಂದು ||೪|| ಪಂಚಸ್ಥಳದಲಿ ಲಘುವಿಡಿದೊಮ್ಮೆ| ಗಣ ಪತಿ ನರಸಿಂಹ ಕೋನೇರಿ ತಿಮ್ಮ || ಪಂಚನಾಟಕಭೇದವ ವಾಜಿಸುತ್ತ| ಉಡುಪಿಲಿ ನಿಂದನು ಪುರಂದರವಿಠಲ || ೫ ||

## ೧೭೫ ರಾಗ ಸಾವೇರಿ ಛಾಪುತಾಳ

ಆಗಲೇ ಕಾಯಬೇಕೋ| ಅಂಬುಜಾಕ್ಷನೆ ಎನ್ನ || ಪ || ಈಗ ನೀ ಕಾಯ್ದರೇನೊ| ಕಾಯದಿದ್ದರೆ ಏನೊ ||ಪ|| ಅನುಜತನುಜರುಂಟು ಬಹು ಹಣವೊಳಗುಂಟು | ಚಿನ್ನ ಚೀನಾಂಬರವುಂಟು ಉಪ್ಪರಿಗೆಯುಂಟು || ಮೊನ್ನೆ ಹುಟ್ಟಿದ ಗಂಡು ಮಗನೊಬ್ಬನೆನಗುಂಟು| ಸನ್ನೆ ಸಂಜ್ಞೆಗುಂದಿ ದಾಗ ಸಂಗಡ ಒಬ್ಬರ ಕಾಣೆ ||೧|| ನೆಂಟರಿಷ್ಟರು ಉಂಟು ನೆರೆಹೊರೆ ಎನ ಗುಂಟು| ಬಂಟಬಳಗವುಂಟು ಭಾಗ್ಯವುಂಟು || ಕಂಠದಲ್ಲಿ ಬದ್ಧರಾದ ಕಾಂತೆ ಯರೆನಗುಂಟು| ಒಂಟಿಯಾಗಿ ಪೋಗುವಾಗ ಸಂಗಡ ಒಬ್ಬರ ಕಾಣೆ ||೨|| ಒಂದು ಕ್ಷಣದಲ್ಲಿ ವಾತ ಪಿತ್ತ ಕಫ ಮೊದಲಾಗಿ | ಸಂಧಿ ವ್ಯಾಧಿಗಳಿಷ್ಟು ಬಾಧಿಸುತಿರೆ || ಇಂದಿರೇಶ ನಿನ್ನ ನಾಮ ಒಂದೇ ಕಾಯುವುದಕೆ| ಬಂದೆನ್ನ ಸಲಹಯ್ಯ ಪುರಂದರವಿಠಲ || ೩

## ೧೭೭ ರಾಗ ಕನ್ನಡ ಕಾಂಭೋಜಿ ಏಕತಾಳ

ವಿದುರನ ಭಾಗ್ಯವಿದು । ಈ । ಪದುಮಜಾಂಡ ತಲೆದೂಗುತಲಿದಕೊ ॥ ॥ ಪ ॥ ಕುರುರಾಯನು ಖಳನನುಜನು ರವಿಜನು । ಗುರುಗಾಂಗೇಯರು ನೋಡುತಿರೆ ॥ ಹರಿಸಿ ರಥವ ನಡೆಸುತೆ ಹರಿ ಬೀದಿಲಿ । ಬರುತಿರೆ ಜನರಿಗೆ ಸೋಜಿಗವೆನಿಸುತ ॥ ೧ ॥ ಹೃದಯದೊಳಗೆ ನೆಲೆಗೊಂಡಿಹ ಹರಿಯನು । ಎದುರಿಲಿ ಕಾಣುತ ವಿದುರನು ತಾ ॥ ಸದನವ ನೂಕುತಲಾಕ್ಷಣ ಬೀದಿಗೆ । ಮುದದಿಂದಲಿ ಕುಣಿದಾಡುತ ಬಂದನು ॥ ೨ ॥ ದೂರದಲಿಹ ಶ್ರೀಶನ ನೋಡುತ ಬಹು । ಹಾರುತ ಚೀರುತ ಮೈ ಮರೆಮ ॥ ವಾರಿಧಾರೆಯನು ನೇತ್ರದಿ ಸುರಿಸುತ । ಬಾರಿ ಬಾರಿ ಬಲು ಹಿಗ್ಗುವ ಮನದಲಿ ॥ ೩ ॥ ಅಡಿಗಡಿಗೆ ತನುಗೆಡವುತಲೇಳುತ। ದೃಢಭಕುತಿಲಿ ಗದ್ಗದ ಸ್ವರದಿಂ ॥ ನುಡಿಗಳು ತೊದಲುತ ರೋಮಪುಳಕಿತದಿ। ದುಡು ದುಡು ಓಡಾಡುವ ದಶದಿಸೆಯಲಿ॥ ॥ ೪ ॥ ಹಾಡುವ ಹಾರುವ ಚೀರವುದೆಲ್ಲನು । ನೋಡಿ ನಗುತಲಿರೆ ಮಾಧವನು ॥ ನೀಡುವ ಕರವ ಪಿಡಿದು ಬಿಗಿದಪ್ಪಿ ಕೊಂ । ಡಾಡುತ ಬಹಳ ಯಮಾಂಶನನು ॥೫॥ ಒಲ್ಲನು ಕುಜನರ ಸೇವೆಯೆಂಬ ನುಡಿ । ಸಲ್ಲಿಸುವುದ ಕಾಸಮಯದಲಿ ॥ ಮಲ್ಲ ವಿದುರನಾ ಕುತ್ಸಿತ ಕುಟೀರ । ದಲ್ಲಿ ಬಂದು ಕುಳಿತನು ಇದೇ ಸಾಕ್ಷಿಯು ॥ ೬ ॥ ಶ್ರೀನಿವಾಸ ಮಂದಿರದೊಳು ಬರ । ಲಾನಂದಾಬ್ಧಿಯೊಳೀಸುತಲಿ ॥ ಏನೆಂಬೆನು ಸುಕೃತವೇನೊದಗಿತೊ । ತಾನೆ ಬಂದ ಬಹು ಚಿತ್ರವಿದೆನುತಲಿ ॥ ೭ ॥ ಗಂಗೋದಕದಲಿ ಪದಯುಗ್ಮವ ತೊಳೆ । ದಂಗಕೆ ಪೂಸಿ ಸುಗಂಧವನು ॥ ಮಂಗಳಕರ ಪುಷ್ಪಂಗಳ ಸಮರ್ಪಿಸಿ । ಕಂಗಳ ದಣಿದಣಿ ನೋಡುತ ಮೂರ್ತಿಯ ॥ ೮ ॥ ವಾರಿಧಿ ಮನೆಯಾದಖಿಲೇಶಗೆ ಗೋ । ಕ್ಷೀರ ಸ್ವಲ್ಪ ಕೊಡಲಾದರದಿ ॥ ವಾರಿಜಾಕ್ಷ ಕರ ಸಂಪುಟದಿ ಕುಡಿದು । ನೀರಂದದಿ ಹರಿಸಿದ ಬೀದಿಯೊಳಗೆ ॥ ೯ ॥ ಒಂದು ಕುಡುತೆ ಪಾಲಿಗೆ ಹಳ್ಳಾಯಿತು । ಮಂದರಧರನ ಮಹಾತ್ಮೆಯನು ॥ ಇಂದಿರೆಗಸದಳ ಚಿಂತಿಸಲೆಂದಿಗು । ಮಂದನು ಬಲ್ಲನೆ ಎಂದು ಪೊಗಳುತಿಹ ॥೧೦॥ ಸುರರಾಕಾಶದಿ ನೆರೆದು ನೋಡಿ ಬಲು । ಹರುಷದಿ ವಿದುರನ ಪೊಗಳುವರು ॥ ಸಿರಿದೇವಿಯರಸ ಪುರಂದರವಿಠಲನ । ಶರಣರೆ ಧನ್ಯರು ಧ್ಯೈನರು ಧರೆಯೊಳು ॥ ೧೧ ॥

## ೧೭೭ ರಾಗ ಪಂತುವರಾಳಿ ಅಟತಾಳ

ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ । ಗೋ । ವಿಂದ ನೀನಲ್ಲದೆ ಇಹಪರ ವಿಲ್ಲ ॥ಪ॥ ಪರರ ಬೇಡಿಪ್ಪಂತೆ ಗತಿಯಾಯಿತಲ್ಲ । ನರರ ತುತಿಸಿ ನಾಲಿಗೆ ಬರಡಾಯಿತಲ್ಲ॥ ಪರವಿಲ್ಲ ಇಹವಿಲ್ಲ ನರಜನ್ಮ ಸ್ಥಿರವಲ್ಲ। ನರಗೆ ಪಾಮರಗೆ ಪಾಪದ ಪಂಜರಗೆ ॥೧॥ತನುವು ತನ್ನದಲ್ಲ ತನ್ನವರಾರು ತನಗಿಲ್ಲ । ಅನು ಕೂಲವಿದುವಾಗ ಸತಿಸುತರೆಲ್ಲ ॥ ಅನುವು ತಪ್ಪಿ ಮನ ತಲ್ಲಣಿಸುವಾಗ । ವನಜನಾಭ ನೀನಲ್ಲದೆ ಯಾರಿಲ್ಲ॥೨॥ ಮಾತಾಪಿತೃ ಬಂಧುಗಳು ಮುಂತಾಗಿ ಸಂ। ಪ್ರೀತಿಯೊಳಿರಲು ಮನ್ನಿಪರೈ ಎಲ್ಲ॥ ಕಾತರನಾಗ್ಯಮ ಕೊಂಡೊಯ್ಯು ವಾಗ ಸಂ । ಗಾತ ಇನ್ನ್ಯಾರಯ್ಯ ಪುರಂದರವಿಠಲ ॥೩॥

## ೧೭೮ ರಾಗ ಧನ್ಯಾಸಿ ಅಟತಾಳ

ಕರ್ಮಬಂಧನಭೇದನಾ । ರಘು । ರಾಮನ ನಾಮ ನೀ ನೆನೆ ಮನವೆ ॥ ॥ ಪ ॥ ಮಂತ್ರವನರಿಯೆನು ತಂತ್ರವರಿಯೆ ಜಗ । ದಂತ್ರವನರಿಯೆನೆಂದೆನ ಬೇಡ ॥ ತಂತ್ರಸ್ವತಂತ್ರನ ಪರಮಪವಿತ್ರನ । ಅಂತರಂಗದಿ ನೀ ನೆನೆ ಮನವೆ ॥ ೧ ॥ ಜಪವನು ಅರಿಯೆನು ತಪವ ನಾನರಿಯೆನು । ಉಪದೇಶ ವರಿಯೆ ನೆಂದೆನಬೇಡ ॥ ಅಪಾರಮಹಿಮೆಯ ಉಡುಪಿಯ ಕೃಷ್ಣನ । ಉಪಾಯದಿಂದಲಿ ನೆನೆ ಮನವೆ ॥ ೨ ॥ ಅರ್ಚಿಸಲರಿಯೆನು ಪೂಜಿಸಲರಿ ಯೆನು । ಮೆಚ್ಚಿಸಲರಿಯೆನೆಂದನಬೇಡ ॥ ಅಚ್ಯುತಾನಂತ ಮುಕುಂದನ ನಾಮವ । ಸ್ವಚ್ಛದಿಂದಲಿ ನೆನೆ ಮನವೆ ॥೩॥ ಧ್ಯಾನವನರಿಯೆನು ಮೌನವ ನರಿಯೆನು। ಜ್ಞಾನವನರಿಯೆನೆಂದೆನಬೇಡ ॥ ಜಾನಕಿವಲ್ಲಭ ರಘುನಾಥನ ಸದಾ । ಧ್ಯಾನದಲಿಟ್ಟು ನೀ ನೆನೆ ಮನವೆ ॥ ೪ ॥ ವದನದಿ ನಾರಾಯಣ ನೆಂಬೊ ನಾಮವು । ಮುದದೀ ಮಾತನು ಬಿಡಬೇಡ ॥ ಪದುಮನಾಭ ಶ್ರೀ ಪುರಂದರವಿಠಲನ । ಸದಾಕಾಲದಿ ನೀ ನೆನೆ ಮನವೆ ॥೫॥

## ೧೭೯ ರಾಗ ಆರಭಿ ಅಟತಾಳ

ವೇಂಕಟರಮಣ ವೇದಾಂತ ನಿನ್ನಯ ಪಾದ। ಪಂಕಜ ಕಂಡ ಮೇಲೆ॥ ಮಂಕು ಮಾನವರ ಬೇಡಿಸುವುದುಚಿತವೆ । ಶಂಖಚಕ್ರಾಂಕಿತನೆ॥ಪ॥ ಕ್ಷೀರ

ಸಾಗರವ ಪೊಂದಿದವ ಮಥಿಸಿದ । ನೀರುಮಜ್ಜಿಗೆ ಕಾಣನೆ ॥ ಚಾರುಕಲ್ಪ ವೃಕ್ಷದಡಿಯಲ್ಲಿ ಕುಳಿತವಗೆ । ದೋರೆ ತಿಂತ್ರೀಣಿ ಬಯಕೆಯೆ ॥೧॥ ಸಾರ್ವ ಭೂಪಾಲನ ಸೂನು ಎನಿಸಿದವಗೆ । ಸೂರೆಗೂಳಿನ ತಿರುಕೆ ॥ ನಾರಿ ಲಕ್ಷ್ಮೀ ಕಾಂತ ನಿನ್ನ ಪೊಂದಿದವಗೆ । ದಾರಿದ್ರ್ಯದಟ್ಟುಳಿಯೆ ॥೨॥ ಸುರನದಿಜಲದಿ ಮಿಂದು ಶುಚಿಯಾದ ಮೇಲಿನ್ನು । ದುರಿತಗಳಟ್ಟುಳಿಯೆ ॥ ಪರಮಪುರುಷ ನಿನ್ನ ಪೊಂದಿದ್ದದಾಸರ್ಗೆ। ಅರಿಗಳ ಭೀತಿಯುಂಟೆ ॥೩॥ ಗರುಡನ ಮಂತ್ರವ ಕಲಿತು ಜಪಿಸುವಗೆ । ಉರಗನ ಹಾವಳಿಯೆ ॥ ಹರಿಪಕ್ಕದೊಳು ಮನೆ ಕಟ್ಟಿದ ನರನಿಗೆ । ಕರಿಗಳ ಭೀತಿಯುಂಟೆ ॥ ೪ ॥ ಪರಮಪುರುಷ ಗುಣ ಪೂರ್ಣ ನೀನಹುದೆಂದು । ಮರೆಹೊಕ್ಕೆ ಕಾಯೊ ಎನ್ನ ॥ ಉರಗಾದ್ರಿವಾಸ ಶ್ರೀಪುರಂದರವಿಠ್ಠಲ । ಪರಬ್ರಹ್ಮ ನಾರಾಯಣ ॥೫॥

## ೧೮೦ ರಾಗ ಪೂರ್ವಿ ಅಟತಾಳ

ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ । ಹರಿ ಕೊಡದ ಕಾಲಕ್ಕೆ ಬಾಯಿ ಬಿಡುವ್ಯಲ್ಲೊ ಪ್ರಾಣಿ ॥ಪ॥ ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು । ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೊ ಪ್ರಾಣಿ ॥ ಹತ್ತು ಸಾವಿರ ಹೊನ್ನು ತಿಪ್ಪೇಲಿ ಪೋಪಾಗ । ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೊ ಪ್ರಾಣಿ ॥ ೧ ॥ ಹುಗ್ಗಿಯು ತುಪ್ಪವು ಮನೆಯೊಳಗಿರಲಿಕ್ಕೆ । ಗುಗ್ಗುರಿಯನ್ನವ ತಿಂದ್ಯಲ್ಲೊ ಪ್ರಾಣಿ ॥ ವೆಗ್ಗಳದ ಭಾಗ್ಯ ಗಳಿಗೇಲಿ ಪೋಪಾಗ । ಬುಗ್ಗೆಯ ಹೊಯ್ಕೊಂಡು ಹೋದ್ಯಲ್ಲೊ ಪ್ರಾಣಿ ॥ ೨ ॥ ನೆಂಟರಿಷ್ಟರು ಬಂದು ಮನೆಮುಂದೆ ಕುಳಿತಿರಲು। ಕುಂಟೆ ಸುದ್ದಿ ನೀನಾಡಿದ್ಯಲ್ಲೋ ಪ್ರಾಣಿ ॥ ಕಂಟಕ ಯಮನವರು ಕುಂಞಿಸುತ್ತೆಳೆವಾಗ । ನೆಂಟ ಪುರಂದರವಿಠಲನೆನ್ನು ಪ್ರಾಣಿ ॥೩॥

## ೧೮೧ ರಾಗ ಆನಂದಭೈರವಿ ಛಾಪುತಾಳ

ಇನ್ನೇಕೆ ಯಮನ ಬಾಧೆಗಳು । ಎನ್ನ । ಜಿಹ್ವೆಲಿ ಹರಿನಾಮ ಸ್ಮರಣೆ ಒಂದಿರಲು ॥ ಪ ॥ ಪತಿತಪಾವನನೆಂಬೊ ನಾಮ । ಅತಿ । ಹಿತದಿಂದ ಮುನಿಗಳು ಸ್ತುತಿಸುವ ನಾಮ ॥ ಕ್ರತುಕೋಟಿ ಫಲವೀವ ನಾಮ। ಸ। ದ್ಗತಿಗೆ

ಸಾಧನವಾಗುವ ಹರಿನಾಮ || ೧ || ಮುನ್ನೊಬ್ಬ ಪ್ರಹ್ಲಾದ ಸಾಕ್ಷಿ | ಆ | ಕನ್ಯಾಶಿರೋಮಣಿ ದ್ರೌಪದಿ ಸಾಕ್ಷಿ || ಚಿಣ್ಣನೆಂದಜಮಿಳ ಸಾಕ್ಷಿ | ನಿಜ | ಪುಣ್ಯಲೋಕವನಾಳ್ವ ಧ್ರುವರಾಯ ಸಾಕ್ಷಿ || ೨ || ಹದಿನಾಲ್ಕು ಲೋಕವನಾಳ್ವ | ದಿವ್ಯ | ಮದನಜನಕನಾಗಿ ಮುದದಿಂದ ಬಾಳ್ವ || ಪದುಮನಾಭನಾಗಿ ಇರುವ | ಗುರು | ಮಧ್ವೇಶ ಪುರಂದರವಿಠ್ಠಲ್ಲ ಕಾಯ್ವ || ೩ ||

## ೧೮೨ ರಾಗ ಮುಖಾರಿ ಝಂಪೆತಾಳ

ಭಂಡನಾದೆನು ನಾನು ಸಂಸಾರದಿ| ಕಂಡು ಕಾಣದ ಹಾಗೆ ಇರಬಹುದೆ ಹರಿಯೆ ||ಪ|| ಕಂಡ ಕಲ್ಲುಗಳಿಗೆ ಕೈಮುಗಿದು ಸಾಕಾಯ್ತು | ದಿಂಡೆಗಾರರ ಮನೆಗೆ ಬಲು ತಿರುಗಿದೆ || ಶುಂಡಾಲನಂತೆನ್ನ ಮತಿ ಮಂದವಾಯಿತೈ | ಪುಂಡರೀಕಾಕ್ಷ ನೀ ಕರುಣಿಸೈ ಬೇಗ || ೧ || ನಾನಾ ವ್ರತಂಗಳನು ನಾ ಮಾಡಿ ಬಳಲಿದೆನು| ಫಲವ ಕಾಣದಾದೆ || ಆ ನಾಡು ಈ ನಾಡು ಸುತ್ತಿ ಕಂಗೆಟ್ಟೆ | ಇನ್ನಾದರೂ ಏನಾದರೂ ಕೃಪೆಯ ಮಾಡಯ್ಯ ಹರಿಯೆ ||೨|| ಬುದ್ಧಿ ಹೀನರ ಮಾತು ಕೇಳಿ ನಾ ಮೋಸಹೋದೆ| ಶುದ್ಧಿಯಿಲ್ಲದೆ ಮನವು ಕೆಟ್ಟು ಹೋಯ್ತು || ಮಧ್ವಮತ ಶ್ರೀಪುರಂದರವಿಠ್ಠಲನೆ ತತ್ತ್ವ | ಸಿದ್ಧಿಯನು ದಯೆಗೈದು ಉಳುಹು ನೀ ತಂದೆ || ೩ ||

## ೧೮೩ ರಾಗ ಸುರುಟಿ ಅಟತಾಳ

ಕೊಡುವ ಕರ್ತು ಬೇರೆ | ಇರುತಿರೆ | ಬಿಡು ಬಿಡು ಚಿಂತೆಯನು ||ಪ|| ಒಡೆಯನಾಗಿ ಮೂಜಗವನು ಪಾಲಿಪ | ಬಡವರುದ್ಧಾರಕ ಭಕ್ತರೊಡೆಯ ಹರಿ || ಅ || ಕಲ್ಲಿನೊಳಗೆ ಇರುವ | ಕಪ್ಪೆಗೆ| ಅಲ್ಲಿ ಉದಕ ಕೊಡುವ || ಎಲ್ಲ ಕೋಟಿ ಜೀವರಾಶಿಗಳನೆ ಕಾಯ್ವ | ವಲ್ಲಭ ಶ್ರೀಹರಿ ಎಲ್ಲೆಲ್ಲಿರುತಿರೆ || ಕೊಡುವ ಆನೆಗೈದು ಮಣದ | ಆಹಾರವ| ತಾನೆ ತಂದು ಕೊಡುವ || ದೀನರೊಡೆಯ ಶ್ರೀನಿವಾಸ ದಯಾನಿಧಿ | ಮಾನದಿಂದಲಿ ಕಾಯ್ವ ಭಾನು ಕೋಟಿತೇಜ || ಕೊಡುವ || ೨ || ಸರಸಿಜಾಕ್ಷ ತನ್ನ | ಸೇರಿದ | ನರರ ಬಿಡನು ಘನ್ನ || ಪರಮ ದಯಾನಿಧಿ ಭಕುತರ ಸಲಹುವ | ಪುರಂದರ ವಿಠ್ಠಲ ಪುಷ್ಪಶರನ ಪಿತ || ಕೊಡುವ || ೩ ||

## ೧೮೪ ರಾಗ ಪಂತುವರಾಳಿ ರೂಪಕತಾಳ

ಚಿಂತೆ ಏತಕೋ । ಬಯಲ । ಭ್ರಾಂತಿ ಏತಕೋ ॥ ಪ ॥ ಕಂಸಪಿತನ ದಿವ್ಯನಾಮ । ಮಂತ್ರವನ್ನು ಜಪಿಸುವರಿಗೆ ॥ಅ॥ ಕಾಲಕಾಲದಲ್ಲಿ ಬಿಡದೆ । ವೇಳೆಯರಿತು ಕೂಗುವಂಥ ॥ ಕೋಳಿ ತನ್ನ ಮರಿಗೆ ಮೊಲೆಯ । ಹಾಲ ಕೊಟ್ಟು ಸಲಹಿತೆ ೧॥ ಸಡಗರದ ನಾರಿಯರು । ಹಡೆಯುವಾಗ ಸೂಲಗಿತ್ತಿ॥ ಅಡವಿಯೊಳಗೆ ಹೆರುವ ಮೃಗವ । ಹಿಡಿದು ರಕ್ಷಿಸುವರ್ಯಾರು ॥೨॥ ಹೆತ್ತ ತಾಯಿ ಸತ್ತುಹೋಗಲು । ಕೆಟ್ಟಿತೆಂಬರು ಲೋಕಜನರು ॥ ಮತ್ತೆ ಗುಂಗುರಿಗೆ ತಾಯಿ । ಹತ್ತಿರಿದ್ದು ಸಲಹಿತೆ ॥ ೩ ॥ ಗಟ್ಟಿಮಣ್ಣ ಶಿಶುವ ಮಾಡಿ । ಹೊಟ್ಟೆಯೊಳಗೆ ಇರಿಸಲಿಲ್ಲ ॥ ಕೊಟ್ಟ ದೈವ ಕೊಂಡುಹೋದರೆ । ಕುಟ್ಟಿಕೊಂಡು ಅಳುವೆಯೇಕೆ ॥೪॥ ಪರದಲ್ಲಿ ಪದವಿಯುಂಟು । ಇಹದಲ್ಲಿ ಸೌಖ್ಯವುಂಟು ॥ ಗುರುಪುರಂದರವಿಠಲನ್ನ । ಸ್ಮರಣೆಯನ್ನು ಮರೆಯದವಗೆ ॥೫॥

## ೧೮೫ ರಾಗ ಪಂತುವರಾಳಿ ಆದಿತಾಳ

ಮುತ್ತು ಕೊಳ್ಳಿರೋ । ಜನರು । ಮುತ್ತು ಕೊಳ್ಳಿರೋ ॥ ಪ ॥ ಮುತ್ತು ಬಂದಿದೆ ಕೊಳ್ಳಿ ಸಚ್ಚಿದಾನಂದ ದಿವ್ಯ ॥ ಅ ॥ ಜ್ಞಾನವೆಂಬೊ ದಾರದಲ್ಲಿ । ಪೋಣಿಸಿದ ದಿವ್ಯ ಮುತ್ತು ॥ ಧ್ಯಾನದಿಂದ ಕೊಂಬುದಿದನು । ದೀನರಾದ ಭಕ್ತಜನರು ॥೧॥ ಕಟ್ಟಲಾಗದು ಮೂಗಿನಲ್ಲಿ । ಇಟ್ಟು ಮೆರೆಯಲಾಗದಿದು॥ ಭ್ರಷ್ಟಜನಕೆ ಕಾಣಿಸದಂಥ । ಕೃಷ್ಣನೆಂಬೊ ಅಣಿಮುತ್ತು ॥ ೨ ॥ ಹಿಡಿಯಲಿಕ್ಕೆ ಸಿಲುಕದದು । ಕಡೆ ಕಾಣದೆಂದು ಬೆಲೆಯು ॥ ಪೊಡವಿಗೆಲ್ಲ ಪುರಂದರವಿಠಲ । ಒಡೆಯನೆಂಬೊ ದಿವ್ಯ ಮುತ್ತು ॥೩॥

## ೧೮೬ ರಾಗ ಕಲ್ಯಾಣಿ ಆದಿತಾಳ

ಕೂಸು ಕಂಡೀರ್ಯಾ । ಜ್ಞಾನಿಗಳೆಲ್ಲ । ಕೂಸು ಕಂಡೀರ್ಯಾ ॥ ಪ ॥ ಸಾಸಿರನಾಮದ ಶತಕೋಟಿತೇಜದ । ಸೂಸುವ ಸುಖಮಯ ಜ್ಞಾನದ ಕೂಸು ॥ ಅ ॥ ಜ್ಞಾನಸಮುದ್ರದೊಳಾಡುವ ಕೂಸು । ಜ್ಞಾನಿಹೃದಯದಿ ಹೊಳೆವುದು ಕೂಸು ॥ ದೀನದಾಸರಿಗೆ ಕಾಣುವ ಕೂಸು । ತಾನೆ ಬಲ್ಲಿದ

ತನ್ನ ಮಹಿಮೆಯ ಕೂಸು ‖ ೧ ‖ ಲೋಕತ್ರಯವೆಲ್ಲ ನೋಡುವ ಕೂಸು। ಬೇಕಾದ ಭಕ್ತರೊಳಾಡುವ ಕೂಸು ‖ ಆಕಾರವಿದ್ದು ನಿರಾಕಾರ ಕೂಸು। ಸಾಕಾರವೃಷ್ಟಿಗೆ ಸಿಲುಕದ ಕೂಸು ‖೨‖ ತನು ಮನ ಧನದೊಳು ಕುಳಿತಿಹ ಕೂಸು। ಘನವಾದ ಮಹಿಮೆಗೆ ಕಾರಣ ಕೂಸು ‖ ಬಿನುಗು ಬುದ್ಧಿಗೆ ಎಂದೂ ಸಿಲುಕದ ಕೂಸು। ಚಿನುಮಯ ಪುರಂದರವಿಠ್ಠಲ ಕೂಸು ‖೩‖

## ೧೮೭ ರಾಗ ಆನಂದಭೈರವಿ ಆದಿತಾಳ

ಗಿಳಿಯು ಪಂಜರದೊಳಿಲ್ಲ ‖ಪ‖ ಶ್ರೀರಾಮ ರಾಮ। ಬರಿದೇ ಪಂಜರ ವಾಯ್ತಲ್ಲ ‖ ಅ ‖ ಅಕ್ಕ ನಿನ್ನ ಮಾತ ಕೇಳಿ। ಚಿಕ್ಕದೊಂದು ಗಿಳಿಯ ಸಾಕಿದೆ ‖ ಅಕ್ಕ ನಾನಿಲ್ಲದ ವೇಳೆ। ಬೆಕ್ಕು ಕೊಂಡುಹೋಯಿತಯ್ಯೊ ‖೧‖ ಅರ್ತಿಗೊಂದು ಗಿಳಿಯ ಸಾಕಿದೆ। ಮುತ್ತಿನ ಹಾರವ ಹಾಕಿದೆ ‖ ಮುತ್ತುಗೊಂಡು ಗಿಳಿಯು ತಾನು। ಎತ್ತಲೋಡಿಹೋಯಿತಯ್ಯೊ ‖೨‖ ಹಸುರು ಬಣ್ಣದ ಗಿಳಿಯು! ಕುಶಲಬುದ್ಧಿಯ ಗಿಳಿಯು ‖ ಅಸುವ ಕುಂದಿ ಗಿಳಿಯು ತಾನು। ಹಸನಗೆಡಿಸಿ ಹೋಯಿತಯ್ಯೊ ‖೩‖ ಮುಪ್ಪಾಗ ಬೆಣ್ಣೆಯನ್ನು। ತಪ್ಪದೆ ನಾ ಹಾಕಿ ಸಾಕಿವೆ ‖ ಒಪ್ಪದಿಂದ ಗಿಳಿಯು ಈಗ। ತೆಪ್ಪನೆ ಹಾರಿ ಹೋಯಿತಯ್ಯೊ ‖ ೪ ‖ ರಾಮ ರಾಮ ಎಂಬೋ ಗಿಳಿ। ಕೋಮಲ ಕಾಯದ ಗಿಳಿ ‖ ಸಾಮಜಪೋಷಕ ತಾನು। ಪ್ರೇಮದಿ ಸಾಕಿದ ಗಿಳಿ ‖ ‖೫‖ ಒಂಭತ್ತು ಬಾಗಿಲ ಮನೆ। ತುಂಬಿದ ಸಂದಣಿಯಿರಲು ‖ ಕಂಬ ಮುರಿದು ಡಿಂಬ ಬಿದ್ದು। ಅಂಬರಕೆ ಹಾರಿಹೋಯಿತು ‖ ೬ ‖ ಅಂಗಯ್ಯ ಲಾಡುವ ಗಿಳಿ। ಮುಂಗಯ್ಯ ಮೇಲಣ ಗಿಳಿ‖ ರಂಗ ಪುರಂದರವಿಠಲನಂತ। ರಂಗದಿ ಭಜಿಸುವ ಗಿಳಿ ‖ ೭ ‖

## ೧೮೮ ರಾಗ ಮೋಹನ ಅಟತಾಳ

ಹಂಸ ನಿನ್ನಲಿ ನೀ ನೋಡೊ। ಭವ। ಪಾಶಮುಕ್ತನಾಗಿ ಹರಿಯನ್ನು ಕೂಡೊ ‖ ಪ ‖ ಸಖಗಳೆರಡುಂಟು ನಿನಗೆ। ನೀ। ಹೊಕ್ಕು ಹೋಗುವೆ ಮೂರು ಪಂಜರದೊಳಗೆ ‖ ಲೆಕ್ಕವಿಲ್ಲದ ಬಿಟ್ಟೆ ನಿನಗೆ। ಈಗ। ಸಿಕ್ಕಿದೆಯೊ

ಮಾಯಾಪಾಶದೊಳಗೆ||೧|| ಹಬ್ಬದ ಸವಿಗೆ ನೀ ಬಂದೆ| ಬಲು | ಕೊಬ್ಬಿಲಿ ಕಾಣದೆ ವಿಷದೊಳು ಬಿದ್ದೆ|| ನಿಬ್ಬಣದಲಿ ಮೈ ಮ್ಯ ಮುರಿವೆ| ನೀ| ನೊಬ್ಬನೇ ಹೋಗಿ ಕಾಲಕ್ಕೆ ಗುರಿಯಾದೆ || ೨ || ದಾರಿಗೆ ದಾಬು ಮತ್ತಿಲ್ಲ| ವ್ಯಥ | ಸೇರಿತು ಮನವನು ಮನೆಯೊಳಗೆಲ್ಲ || ದೂರ ಹೋಯಿತು ಪ್ರಾಯವೆಲ್ಲ | ಸಿರಿ | ಪುರಂದರವಿಠಲನಲ್ಲದೆ ಬೇರೆ ಇಲ್ಲ ||೩||

## ೧೮೯ ರಾಗ ಶಂಕರಾಭರಣ ಆದಿತಾಳ

ಮಡಿ ಮಡಿ ಮಡಿಯೆಂದು ಅಡಿಗಡಿಗ್ಹಾರುವೆ | ಮಡಿ ಮಾಡುವ ಬಗೆ ಬೇರುಂಟು ||ಪ|| ಪೊಡವಿಪಾಲಕನ ಪಾದಧ್ಯಾನವನು | ಬಿಡದೆ ಮಾಡುವುದದು ಮಡಿಯು || ಅ || ಬಟ್ಟೆಯ ನೀರೊಳಗದ್ದಿ ಒಣಗಿಸಿ | ಉಟ್ಟುಕೊಂಡರೆ ಅದು ಮಡಿಯಲ್ಲ || ಹೊಟ್ಟೆಯೊಳಗಿನ ಕಾಮ ಕ್ರೋಧ ಮದ ಮತ್ಸರ | ಬಿಟ್ಟು ನಡೆದರೆ ಅದು ಮಡಿಯು ||೧|| ದಶಮಿ ದ್ವಾದಶಿ ಪುಣ್ಯ ದಿನವಲಿ | ವಸುದೇವಸುತನನು ಪೂಜಿಸದೆ || ದೋಷಕಂಜದೆ ಪರರನ್ನ ಭುಂಜಿಸಿ ಯಮ | ಪಾಶಕೆ ಸಿಲುಕುವುದದು ಮಡಿಯೆ || ೨ || ಹಸಿದು ಭೂಸುರರು ಮಧ್ಯಾಹ್ನಕಾಲಕೆ | ಕುಸಿದುಮನೆಗೆ ಬಳಲುತ ಬಂದರೆ || ಮಸಣಿಗೊಂದು ಗತಿಯಿಲ್ಲವೆಂದು ತಾ | ಹಸನಾಗಿ ಉಂಬೋದು ಹೊಲೆ ಮಡಿಯು ||೩|| ಇಚ್ಛೆಯಿಂದ ಮಲಮೂತ್ರ ಶರೀರವ | ನೆಚ್ಚಿ ತೊಳೆಯಲು ಅದು ಮಡಿಯೆ || ಅಚ್ಯುತಾನಂತನ ನಾಮವ ನೆನೆದು | ಸಂಚಿತ ಕಳೆವುದು ಅದು ಮಡಿಯು ||೪|| ಹಿರಿಯರ ಗುರುಗಳ ಹರಿದಾಸರುಗಳ| ಚರಣಕೆರಗಿ ಬಲು ಭಕ್ತಿಯಲಿ || ಪರಿಪಾಲಿಸು ಎಂದು ಪುರಂದರವಿಠಲನ | ಇರುಳು ಹಗಲು ಸ್ಮರಿಸುವುದು ಮಡಿಯು || ೫ ||

## ೧೯೦ ರಾಗ ಶಂಕರಾಭರಣ ಆದಿತಾಳ

ದೇವ ಬಂದ ನಮ್ಮ ಸ್ವಾಮಿ ಬಂದನೋ | ದೇವರ ದೇವ ಶಿಖಾಮಣಿ ಬಂದನೋ || ಪ || ಉರಗಶಯನ ಬಂದ | ಗರುಡಗಮನ ಬಂದ || ನರಗೊಲಿದವ ಬಂದ | ನಾರಾಯಣ ಬಂದ ||೧|| ಮಂದರೋದ್ಧಾರ ಬಂದ |

ಮಾ ಮನೋಹರ ಬಂದ || ವೃಂದಾವನಪತಿ | ಗೋವಿಂದ ಬಂದ || ೨ || ಪೂತನಿಸಂಹರಣ ಬಂದ | ಪುರುಹೂತವಂದ್ಯ ಬಂದ || ಮಾತುಳನ ಮಡುಹಿದ | ಗೋವಿಂದ ಬಂದ ||೩|| ನಕ್ರಹರನು ಬಂದ | ಚಕ್ರಧರನು ಬಂದ| ಅಕ್ರೂರಗೊಲಿದ ತ್ರಿ | ವಿಕ್ರಮ ಬಂದನೋ || ೪ || ಪಕ್ಷಿವಾಹನ ಬಂದ | ಲಕ್ಷ್ಮೀರಮಣ ಬಂದ || ಅಕ್ಷಯ ಫಲದಾ | ಲಕ್ಷ್ಮಣಾಗ್ರಜ ಬಂದ ||೫|| ನಿಗಮಗೋಚರ ಬಂದ | ನಿತ್ಯತೃಪ್ತನು ಬಂದ || ನಗೆಮುಖ ಪುರಂದರ | ವಿಠಲ ಬಂದನೋ ||೬||

## ೯೯ ರಾಗ ಮೋಹನ ತ್ರಿಪುಟತಾಳ

ನಿನ್ನ ನಂಬಿದೆ ನೀರಜನಯನ | ಎನ್ನ ಪಾಲಿಸೊ ಇಂದಿರಾರಮಣ || || ಪ || ಮುನ್ನ ಪಾಂಚಾಲಿಯ ಮೊರೆಯ ಲಾಲಿಸಿ ಕಾಯ್ದು | ಪನ್ನಗಶಯನ ನೀ ಪರಮಪುರುಷನೆಂದು || ಅ || ಹರಿ ಸರ್ವೋತ್ತಮನಹುದೆಂಬೊ ಬಾಲಕನ | ಹಿರಣ್ಯಕಶಿಪು ಪಿಡಿದು ಬಾಧಿಸಲು || ನರಹರಿರೂಪದಿಂದವನ ವಕ್ಷವ ಸೀಳ್ದ | ವರವಿಶ್ವಾತ್ಮಕನಹುದೆಂದು ನಾ ದೃಢವಾಗಿ || ||೧|| ಪಾದವ ಪಿಡಿದು ನೀರೊಳಗೆಳೆವ ನಕ್ರನ | ಬಾಧೆ ತಾಳದೆ ಕರಿ ಮೊರೆಯಿಡಲು || ಆದಿಮೂರುತಿ ಚಕ್ರದಿ ನಕ್ರನ ಕೊಂದ | ವೇದಾಂತವೇದ್ಯ ಅನಾಥರಕ್ಷಕನೆಂದು ||೨|| ಇಳೆಯೊಡೆಯನ ತೊಡೆಗೆ ನೀನರ್ಹನಲ್ಲೆಂದು | ಲಲನೆ ಕೈ ಪಿಡಿದೆಳೆಯಲು ಕಂದನ || ನಳಿನಾಕ್ಷ ನಿನ್ನ ಮರೆಯ ಹೊಕ್ಕು ತಪಿಸಲು | ಒಲಿದು ಧ್ರುವಗೆ ನಿಜಲೋಕವಿತ್ತವನೆಂದು || ೩ || ಸುದತಿ ಗೌತಮಸತಿ ಮುನಿಶಾಪದಿಂದಲಿ | ಒದಗಿ ಪಾಷಾಣರೂಪದಲಿರಲು || ಪದರಜದಿಂದಲಿ ಸತಿಯ ಮಾಡಿದ ಯೋಗಿ | ಹೃದಯಭೂಷಣ ನಿನ್ನ ಪಾದ ಮಹಿಮೆಯ ಕಂಡು ||೪|| ಪರಮಪಾವನೆ ಜಗದೇಕಮಾತೆಯನು | ದುರುಳ ರಾವಣನು ಕದ್ದೊಯ್ದಿರಲು || ಶರಣೆಂದು ವಿಭೀಷಣ ಚರಣಕೆರಗಲಾಗಿ | ಸ್ಥಿರಪಟ್ಟವನು ಕೊಟ್ಟ ಪರಮಾತ್ಮನಹುದೆಂದು ||೫|| |ಅಂಬರೀಷನೆಂಬ ನೃಪ ದ್ವಾದಶಿವ್ರತ| ಸಂಭ್ರಮದಿ ಹರಿಗರ್ಪಿಸಲು|| ಡೊಂಬಿ ಮಾಡಿ ದುರ್ವಾಸ ಶಪಿಸಲಾಗಿ | ಬೆಂಬಿಡದಲೆ ಚಕ್ರದಿಂದ ಕಾಯ್ದವನೆಂದು ||೬|| ಧರೆಯೊಳು ನಿನ್ನ ಮಹಿಮೆಯ ಪೊಗಳುವರೆ | ಸರಸಿಜೋದ್ಭವ ಶೇಷರಿ

ಗರಿದು || ಸ್ಮರಣೆಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತ| ಪುರಂದರವಿಠಲ ನೀ ಜಗದೀಶನೆಂದು || ೭ ||

## ೧೯೨ ರಾಗ ಕಲ್ಯಾಣಿ ಅಟತಾಳ

ಧರ್ಮ ದೊರಕೊಂಬುವುದೆ ಸಜ್ಜನರಿಗೆ | ದು | ಷ್ಕರ್ಮ ಸತಿಯರುಳ್ಳ ಪುರುಷೋತ್ತಮರಿಗೆ || ಪ || ಧನವಿದ್ದರೇನಯ್ಯ ಮನವಿಲ್ಲದವರಿಗೆ | ಮನ ವಿದ್ದರೇನಯ್ಯ ಧನವಿಲ್ಲವು || ಧನವೂ ಮನವೂ ಎರಡುಳ್ಳ ಪುರುಷರಿಗೆ | ಅನುಕೂಲವಾದಂಥ ಸತಿಯಿಲ್ಲವಯ್ಯ||೧|| ನಿನ್ನ ಕಣ್ಣ ಮುಂದೆ ಹೋಗುವ ಜೀವನು | ಇನ್ನು ನಿನಗೆ ನಾಚಿಕೆಯಿಲ್ಲವು || ಎನ್ನದು ತನ್ನದು ಎಂಬ ಭ್ರಾಂತಿಯ ಬಿಟ್ಟು | ಇನ್ನೀ ದೇಹವ ನಂಬಿ ಕೆಡಬೇಡ ಮನುಜ || ೨ || ಈಗ ಮಾಡೆಲೊ ಧರ್ಮ ನಾಳೆಯೆಂದೆನಬೇಡ| ನೀವಾರು ನಾವಾರು ಎಲೆ ಮನುಜ || ಊಳಿಗದವರೆಂಬ ಭಟರು ಬಂದೆಳೆವಾಗ | ನಾಳೆ ಮಾಳ್ಪೆನೆನೆ ಬಿಡುವರೆ ಮನುಜ ||೩|| ಎಂದೆಂದು ಈ ಪರಿ ಅಲ್ಲಲ್ಲಿ ಬಳಲಿಕೆ | ಮುಂದೆ ಕಾಣೆನು ಸಾಧನವನು || ತಂದೆ ಶ್ರೀಪುರಂದರವಿಠಲರಾಯನ | ಒಂದು ಸಾರಿಯು ನೀ ನೆನೆ ಕಂಡ್ಯ ಮನುಜ ||೪||

## ೧೯೩ ರಾಗ ಕಾಂಭೋಜಿ ಅಟತಾಳ

ಇರಬೇಕು ಹರಿದಾಸರ ಸಂಗ | ಪರಮ ಜ್ಞಾನಿಗಳ ಸಂಪಾದಿಸಬೇಕು|| || ಪ || ಅತಿ ಜ್ಞಾನಿಯಾಗಬೇಕು | ಹರಿಕಥೆ ಕೇಳಬೇಕು | ಯತಿಗಳ ಪಾದಕ್ಕೆ ಎರಗಬೇಕು || ಸತಿಸುತರಿರಬೇಕು | ಅತಿ ಮೋಹ ಬಿಡಬೇಕು | ಮತಿಯೆಂದು ಬಿಡದೆ ಹರಿ ಪೂಜಿಪರ ಸಂಗ || ೧ || ನಡೆ ಯಾತ್ರೆಯಿನ ಬೇಕು | ನುಡಿನೇಮವಿರಬೇಕು | ಬಿಡದೆ ಹರಿಪೂಜೆಯ ಮಾಡಬೇಕು || ಅಡಿಗಡಿಗೆ ನೆನೆಬೇಕು | ಹರಿಗಡ್ಡ ಬೀಳಬೇಕು | ಬಿಡದೆ ಹರಿಭಜನೆಯ ಮಾಡುವರ ಸಂಗ ||೨|| ಸುರಹರವಿರಿಂಚಿಗಳ | ಪರಿಯ ತಿಳಿಯಲುಬೇಕು| ತಾರತಮ್ಯ ಪಂಚಭೇದ ತತ್ತ್ವನಿರತ|| ಅರಿಯದಿದ್ದರೆ ಗುರು | ಹಿರಿಯರನೆ ಕೇಳಬೇಕು | ಪರಮಾನಂದದಿ ಲೋಲಾಡುವರ ಸಂಗ || ೩ || ಷಟ್ಕರ್ಮ

ಮಾಡಬೇಕು । ವೈಷ್ಣವನೆನಿಸಬೇಕು। ವಿಷ್ಣುದಾಸರ ದಾಸನಾಗಬೇಕು॥ ಉತ್ಕೃಷ್ಟ ವೈರಾಗ್ಯ ಬೇಕು । ದುಷ್ಟಸಂಗ ಬಿಡಬೇಕು । ಎಷ್ಟು ಕಷ್ಟ ಬಂದರು ವಿಷ್ಣುಭಜಕರ ಸಂಗ ॥ ೪ ॥ ಏಕಾಂತ ಕೊಡಬೇಕು। ಲೋಕ ವಾರ್ತೆ ಬಿಡಬೇಕು। ಲೋಕೈಕನಾಥನ ಭಜಿಸಬೇಕು ॥ ಸಾಕು ಸಂಸಾರ ವೆಂದು । ಕಕುಲಾತಿ ಬಿಡಬೇಕು । ಶ್ರೀಕಾಂತ ಪುರಂದರವಿಠಲದಾಸರ ಸಂಗ ॥೫॥

## ೧೯೪ ರಾಗ ಕಾಪಿ ಛಾಪುತಾಳ

ಕಣ್ಣಿನೊಳಗೆ ನೋಡೊ ಹರಿಯ ॥ ಪ ॥ ಒಳ । ಗಣ್ಣಿನೊಳಗಿಂದ ನೋಡೋ ಮೂಜಗದೊಡೆಯನ ॥ ಅ ॥ ಆಧಾರ ಮೊದಲಾದ ಆರು। ಚಕ್ರ। ಶೋಧಿಸಿ ಬಿಡಬೇಕು ಈಷಣ ಮೂರು ॥ ಸಾಧಿಸಿ ಸುಷುಮ್ನಾ ಏರು । ಅಲ್ಲಿ । ಭೇದಿಸಿ ನೀ ಪರಬ್ರಹ್ಮನ ಸೇರು॥೧॥ ಎವೆ ಹಾಕದೆ ಮೇಲೆ ನೋಡಿ। ಬೇಗ। ಪವನನಿಂದಲಿ ವಾಯುಬಂಧನ ಮಾಡಿ ॥ ಸವಿದು ನಾದವ ಪಾನಮಾಡಿ । ಅಲ್ಲಿ। ನವವಿಧ ಭಕ್ತಿಲಿ ನಲಿನಲಿದಾಡಿ ॥ ೨ ॥ ಅಂಡಜ ದೊಳಾಡುತಾನೆ। ಭಾನು। ಮಂಡಲ ನಾರಾಯಣನೆಂಬೋವನೆ॥ ಕುಂಡಲಿ ತುದಿಯೊಳಿದ್ದಾನೆ। ಶ್ರೀಪು । ರಂದರವಿಠ್ಠಲ ಪಾಲಿಸುತಾನೆ ॥೩॥

## ೧೯೫ ರಾಗ ಕಾಂಭೋಜಿ ಛಾಪುತಾಳ

ಸಾಧುಜನರ ಸಂಗವ ಮಾಡಿ ಒಂ । ದಾಧಾರ ವಾದ ಕಲಿತೆ ॥ ಪ ॥ ಸಾಧುಜನರ ಸಂಗ ಬಿಟ್ಟು ಅ । ಜ್ಞಾನದಾಪತ್ತಿಗೆ ಕಲೆತೆ ॥ ಅ ॥ ಆಸೆ ಯೆಂಬೋ ಮಾವಗೆ ನಾನು । ಗ್ರಾಸಹಾಕದೆ ಕೊಂದೆನಪ್ಪ ॥ ಮೋಸದ ಆರು ಮೈದುನರ । ದೇಶಾಂತರದಿ ಓಡಿಸಿದೆನು ॥ ೧ ॥ ಚಿತ್ತವೆಂಬೊ ಅತ್ತಿ ಗೆಯ । ಎತ್ತೋ ಏನೋ ಓಡಿಸಿದೆ॥ ದು। ಶ್ಚಿತ್ತವೆಂಬೊ ಅತ್ತೆಯ ಕಣ್ಣು। ಮತ್ತೆ ನಾನೇ ಕಳೆದೆನಪ್ಪ ॥ ೨ ॥ ಹರಿದ್ವೇಷವೆಂಬೊ ಕೂಸಿನ। ಉರುಳು ಹಾಕಿ ಕೊಂದೆನಪ್ಪ ॥ ಪುರಂದರವಿಠಲನೆಂಬೊ। ಸರಸಗಂಡನ ಕೂಡಿ ದೆನಪ್ಪ ॥ ೩ ॥

## ೧೯೬ ರಾಗ ಪುನ್ನಾಗವರಾಳಿ ಅಟತಾಳ

ಬುದ್ಧಿ ಹೇಳೆ ಗೋಪಿ ನಿನ್ನ ಮುದ್ದು ಕಂದಗೆ ||ಪ|| ನಮ್ದ ಮಾಡದ್ದಾಗೆ ಬಂದು | ಮುದ್ದನಿಟ್ಟು ಪೋದನಮ್ಮ || ಅ || ಗಂಧ ಕಸ್ತೂರಿ ಪುನುಗು ಚೆಂದದಿಂದ ಪೂಸಿಕೊಂಡು | ಮಂದಹಾಸದಿಂದ ಬಂದು ಇಂದಿರೇಶನು || ಸಿಂಧುಶಯನ ತಾ ಬಂದು ಮಂದಿರದೊಳಗೆ ಪೊಕ್ಕು| ಸಂದು ಗೊಂದುಗಳ ಹುಡುಕಿ ಸರಸವಾಡಿ ಪೋದನಮ್ಮ || ೧ || ಚಪ್ಪರಮಂಚದ ಮೇಲೆ ತಪ್ಪಿ ನಾ ಮಲಗಿರೆ | ಸಪ್ಪಳವಾಗದ್ದಾಗೆ ಬಂದು ಅಪ್ಪಿಕೊಂಡನೆ || ಕುಪ್ಪಸದಲಿ ಕೈಯನಿಕ್ಕಿ ಕಕ್ಕಸ ಕುಚಗಳ ಪಿಡಿದು | ತಪ್ಪು ಕಾರ್ಯ ಮಾಡಿ ಅಧರ ಚಪ್ಪರಿಸಿ ಪೋದನಮ್ಮ ||೨|| ಸುಳ್ಳು ಅಲ್ಲವೆ ನಮ್ಮ ಮಾತು ವಲ್ಲಭೆ ಕೇಳೆ ಗೋಪ್ಯಮ್ಮ | ಮೆಲ್ಲಮೆಲ್ಲನೆ ಬಂದು ತಾ ಗಲ್ಲಕ್ಕೆ ಮುದ್ದನಿಟ್ಟು || ನಲ್ಲಳೆ ಬಾ ಎಂದು ಕರೆದು ಸೊಲ್ಲಸೊಲ್ಲ ಮಾತನಾಡಿ | ವಲ್ಲಭ ಶ್ರೀಪುರಂದರ ವಿಠಲ ಬುಲ್ಲಿ ತೋರಿ ಪೋದನಮ್ಮ ||೩||

## ೧೯೭ ರಾಗ ಮೋಹನ ಅಟತಾಳ

ಹರಿಯೇ ಕುಣಿಯೆಂದು ಕುಣಿಸಿದರಯ್ಯ | ಹರಿಯೇ ಕುಣಿಯೆನುತ || ||ಪ|| ನಡೆಯುಡಿಯಿಲ್ಲದೆ ನಡೆವನ ಕುಡಿವನ| ಪಡತಿಂಬನ ಒಡಹುಟ್ಟಿದನ|| ಒಡೆಯನ ಕಂದನ ವೈರಿಯು ಭಂಡಿಯು | ಹೊಡೆದ ಮಹಾತ್ಮನ ಕುಣಿಸಿದರಯ್ಯ || ಹರಿಯೇ ಕುಣಿಯೆನುತ ||೧|| ಒಣಗಿದ ಮರದಲಿ ಇಲ್ಲದ ಬಳ್ಳಿ | ಬಣತಿಗೆ ಹುಟ್ಟಿದವನ ತಳ್ಳಿ || ಕ್ಷಣವೊಂದರಿಯದೆ ಬಿಡದೆ ಆಹಾರಕೆ | ಫಣಿ ಮೆಟ್ಟಿದವನ ಕುಣಿಸಿದರಯ್ಯ|| ಹರಿಯೇ ಕುಣಿಯೆನುತ ||೨|| ಮಾವ ನೊಡನೆ ಮನೆಮಾಡಿ ಗೋಕರ್ಣದಿ | ತಾ ಉರಗನ ಮೇಲೊರಗಿದನ|| ಮೂವರ ಮೊಲೆ ಉಂಡು ಮೂರ್ಜಗವರಿಯದೆ | ಮೂವರಣ್ಣನೆಂದು ಕುಣಿಸಿದರಯ್ಯ | ಹರಿಯೇ ಕುಣಿಯೆನುತ ||೩|| ಲೋಕವ ತಾಳ್ದನ ಮನೆ ಯಲಿ ಪುಟ್ಟಿ | ಶೋಕದ ಸುಡಿಗಳ ಕದ್ದವನ || ನಾಕರಿಸಲು ನಮಗೆ ಗೋಪ ರೂಪದಿಂದ | ಆಕರಿಸಿದನ ಕುಣಿಸಿದರಯ್ಯ |' ಹರಿಯೇ ಕುಣಿಯೆ ನುತ ||೪|| ಗೋಕುಲದೊಳಗಿನ ಗೋಪಿಯರೆಲ್ಲರು| ಏಕಾಂತದಿ ತಮ್ಮೊಳು

ತಾವೇ ‖ ಶ್ರೀಕಾಂತ ನಮ್ಮ ಪುರಂದರವಿಠಲನ । ಏಕಮೂರುತಿಯೆಂದು ಕುಣಿಸಿದಿರಯ್ಯ ‖ ಹರಿಯೇ ಕುಣಿಯೆನುತ ‖ ೫ ‖

### ೧೯೮ ರಾಗ ಆರಬಿ ಆದಿತಾಳ

ಮುರಹರ ನಗಧರ ನೀನೇ ಗತಿ ‖ ಪ ‖ ಧರಣೀಲಕ್ಷ್ಮೀಕಾಂತ ನೀನೇ ಗತಿ ‖ಅ‖ ಶಕಟಮರ್ದನ ಶರಣಾಗತವತ್ಸಲ । ಮಕರಕುಂಡಲಧರ ನೀನೇ ಗತಿ ‖ ಅಕಳಂಕಚರಿತ ಆದಿನಾರಾಯಣ । ರುಕುಮಿಣಿಪತಿ ಕೃಷ್ಣ ನೀನೇ ಗತಿ ‖೧‖ ಮನೆಮನೆಗಳ ಪೊಕ್ಕು ಕೆನೆ ಹಾಲು ಬೆಣ್ಣೆಯ । ಪ್ರಮಿತ ಮೆದ್ದ ಹರಿ ನೀನೇ ಗತಿ ‖ ಅನುದಿನ ಭಕುತರ ಬಿಡದೆ ಕಾಯುವ । ಘನಮಹಿಮ ಕೃಷ್ಣ ನೀನೇ ಗತಿ ‖೨‖ ಪನ್ನಗಶಯನ ಸುಪರ್ಣಗಮನ । ಪೂರ್ಣಚರಿತ ಹರಿ ನೀನೇ ಗತಿ ‖ ಹೊನ್ನ ಹೊಳೆಯಲಿ ಪುರಂದವಿಠಲ । ಚೆನ್ನ ಲಕ್ಷ್ಮೀ ಕಾಂತ ನೀನೇ ಗತಿ ‖ ೩ ‖

### ೧೯೯ ರಾಗ ಸುರುಟಿ ಆದಿತಾಳ

ಮರೆಯದಿರು ಹರಿಯ । ಮರೆವರೆ । ಮೂರುಲೋಕದ ದೊರೆಯ ‖ಪ‖ ಮದಗಜ ಹರಿಯೆಂದು । ಒದರಲು । ಒದಗಿದೆ ಕ್ಷಣದಿ ಬಂದು ‖ ಮುದದಿ ನಕ್ರನ ಕೊಂದು । ಸಲಹಿದ । ಸದ್ಭಕ್ತರ ಬಂಧು ‖ ಮೃದುಲ ಪ್ರಹ್ಲಾದನ ಬೆದರಿಸಿದಸುರನ । ಉದರವ ಬಗಿದಂಥ ಅದ್ಭುತಮಹಿಮನ ‖ ೧ ‖ ನಾರಿ ತನ್ನ ಕರೆದ । ಮಾತ್ರದಿ । ಸೀರೆಯ ಮಳೆಗರೆದ ‖ ಘೋರ ಶಾಪದಿ ಬಿದ್ದ । ಸ್ತ್ರೀಯು । ದ್ಧಾರ ದಯದಿ ಮಾಡ್ದ ‖ ಜಾರ ಅಜಾಮಿಳ ನಾರಾಯಣನೆನೆ। ಪಾರುಗಾಣಿಸಿದಾಪಾರಮಹಿಮನ ‖೨‖ ಒಂದು ಬಾರಿ ಶ್ರೀಶಾ । ಯೆಂದರೆ। ಬಂದ ದುರಿತನಾಶ ‖ ಬೆಂದವು ಭವಪಾಶ। ಅವರಿಗೆ। ಎಂದಿಗಿಲ್ಲವೊ ಕ್ಲೇಶ‖ ಇಂದಿರೆರಮಣ ಶ್ರೀಪುರಂದರವಿಠಲನ । ಎಂದಿಗೆ ನೆನೆವರೊ ಅಂದಿಗೆ ಧನ್ಯರು ‖ ೩ ‖

### ೨೦೦ ರಾಗ ಮುಖಾರಿ ಛಾಪುತಾಳ

ಶ್ರೀಪತಿಯು ನಮಗೆ ಸಂಪದವೀಯಲಿ ‖ಪ‖ ವಾಣೀಪತಿಯು ಎಮಗೆ ದೀರ್ಘಾಯು ಕೊಡಲಿ ‖ ಅ ‖ ವರವಿಬುಧರನು ಪೊರೆಯೆ ವಿಷವ ಕಂಠ

ದಲ್ಲಿಟ್ಟ । ಹರನಿತ್ಯ ನಮಗೆ ಸಹಾಯವಾಗಲಿ ॥ ನರರೊಳುನ್ನತವಾದ ನಿತ್ಯ ಭೋಗಂಗಳನು । ಪುರುಹೂತ ಪೂರ್ಣಮಾಡಿಸಲಿ ನಮಗೆ ॥೧॥ ವಿನುತಸಿದ್ಧಿಪ್ರದನು ವಿಘ್ನೇಶ ದಯದಿಂದ । ನೆನೆದ ಕಾರ್ಯಗಳೆಲ್ಲ ನೆರವೇರಿಸಲಿ ॥ ದಿನದಿನದಿ ಧನ್ವಂತ್ರಿಯಾಪತ್ತುಗಳ ಕಳೆದು । ಮನಹರುಷವಿತ್ತು ಮನ್ನಿಸಲಿ ಬಿಡದೆ ॥೨॥ ನಿರತ ಸುಜ್ಞಾನವನು ಈವ ಮಧ್ವರಾಯ। ಗುರುಗಳಾಶೀರ್ವಾದ ನಮಗಾಗಲಿ ॥ ಪುರಂದರವಿಠಲನ ಕರುಣದಿಂದಲಿ ಸಕಲ । ಸುರರೊಲುಮೆಯು ನಮಗೆ ಸುಸ್ಥಿರವಾಗಲಿ ॥ ೩ ॥

## ೨೦೧ ರಾಗ ಯರಕಲಕಾಂಭೋಜಿ ತ್ರಿಪುಟತಾಳ

ಯಾರು ಬರುವರು ನಿನ್ನ ಹಿಂದೆ ॥ ಪ ॥ ಇತ್ತ । ಬಾರೆಂದು ಯಮಭಟರು ಸೆಳೆದೊಯ್ಯುವಾಗ ॥ಅ॥ ಸತಿಸುತರುಗಳು ಬರುವುದಿಲ್ಲ । ನಿನ್ನ । ಹಿತವಾದ ಬಂಧು ಸ್ನೇಹಿತರು ಬರುವುದಿಲ್ಲ ॥ ಕ್ಷಿತಿ ಮಾನ್ಯ ಕ್ಷೇತ್ರ ಬರುವುದಿಲ್ಲ । ಲಕ್ಷ್ಮೀ । ಪತಿಯೆಂಬವನಲ್ಲದೆ ಗತಿಯೊಬ್ಬರಿಲ್ಲ ॥೧॥ ತುರುಗ ಗಜಗಳು ಬರುವುದಿಲ್ಲ । ನಿನ್ನ । ಮೆರವಣಿಗೆ ಮಾಡುವ ಈ ತನು ನಿನ್ನದಲ್ಲ ॥ ನರಪತಿಯ ಸೇವೆ ಸ್ಥಿರವಲ್ಲ। ನರ। ಹರಿಯೊಬ್ಬನಲ್ಲದೆ ಪರಗತಿಯಿಲ್ಲ ॥೨॥ ಧನಧಾನ್ಯಗಳು ಬರುವುದಿಲ್ಲ। ನಿನ್ನ। ಅನುವಾದ ನವಸಾಧನಗಳು ಬರುವುದಿಲ್ಲ ॥ ಜನನಿಜನಕರು ಬರುವುದಿಲ್ಲ । ನಮ್ಮ । ಹನುಮನಯ್ಯನ ಹೊರತು ಬೇರೆ ಗತಿಯಿಲ್ಲ ॥ ೩ ॥ ಈ ದೇಹ ನೀ ಬಿಟ್ಟ ಬಳಿಕ । ಅವರು । ಬಾಧೆಗೋಸ್ಕರ ಬೆಂಕಿ ಹಾಕಿ ಸುಡುತಿಹರೊ॥ ಬೂದಿ ನೀರೊಳು ಚೆಲ್ಲುತಿಹರೊ। ಬಂದು । ಬೀದಿಯಲಿ ನಿಂತು ಬೊಬ್ಬೆಯ ಮಾಡುತಿಹರೊ ॥ ೪ ॥ ಇನ್ನಾದರೂ ತಿಳಿದುಕೊಂಡು । ಮತ್ತೆ । ಮುನ್ನಾದರೂ ಅನ್ಯಗತಿಯಿಲ್ಲವೆಂದು ॥ ಎನ್ನೊಡೆಯ ನೀನೆ ಗತಿಯೆಂದು । ಬೇಡು । ಮನ್ನಿಸಿ ಪುರಂದರವಿಠಲ ಸಲಹೆಂದು ॥ ೫ ॥

## ೨೦೨ ರಾಗ ಪೂರ್ವಿ ಏಕತಾಳ

ದಾರಿಯ ತೋರೋ ಮುಕುಂದ । ನಾರಾಯಣ ಹರಿ ಗೋವಿಂದ ॥ ॥ಪ॥ ಬಂದೆನು ನಾನಾ ಜನ್ಮದಲಿ । ಬಹು। ಬಂಧನದೊಳು ಸಿಲುಕಿದೆನೊ॥

ಮುಂದಿನ ಪಯಣದ ಗತಿಯೇನೊ । ಇಂದು ನೀ ತೋರೊ ಇಂದಿರೆ ರಮಣನೆ ‖ ೧ ‖ ಉಕ್ಕಿ ಹರಿವ ನದಿಯೊಳಗೆ । ನಾ । ಸಿಕ್ಕಿದೆ ನಡು ನೀರೊಳಗೆ ‖ ಕಕ್ಕುಲತೆಯಿಲ್ಲ ನಿನಗೆ । ಬೇಗ । ನೀ ಕೈಪಿಡಿದೆನ್ನ ಸಲಹಯ್ಯ ಬಿಡದೆ ‖ ೨ ‖ ಕುಕ್ಷಿಯೊಳಗೆ ನೀ ಬಿಟ್ಟು । ಅಯ್ಯ । ಯಾರಿಗೆ ಉಸಿರುವೆನೊ ‖ ಚಿಂತಿತದಾಯಕ ಕೇಳೊ । ನಮ್ಮ । ಪುರಂದರವಿಠಲನೆ ದಯಮಾಡೋ ‖ ೩ ‖

## ೨೦೩ ರಾಗ ಕಾಂಭೋಜಿ ಝಂಪೆತಾಳ

ಯಾಕೆ ನಿರ್ದಯನಾದೆ ಎಲೊ ದೇವನೆ ‖ ಪ ‖ ಶ್ರೀಕಾಂತ ಎನಮೇಲೆ ಎಳ್ಳಷ್ಟು ದಯವಿಲ್ಲ ‖ಅ‖ ಕಂಗೆಟ್ಟು ಕಂಭದಲಿ ಒಡೆದು ಬಳಲಿ ಬಂದು । ಹಿಂಗದೆ ಪ್ರಹ್ಲಾದನಪ್ಪಿಕೊಂಡೆ ‖ಅ‖ ಮಂಗಳಪದವಿತ್ತು ಮನ್ನಿಸಿದೆ ಅವ ನಿನಗೆ । ಭಂಗಾರವೆಷ್ಟು ಕೊಟ್ಟನು ಪೇಳೊ ಹರಿಯೇ ‖ ೧ ‖ ಸಿರಿದೇವಿಗ್ಹೇಳದೆ ಸೆರಗು ಸಂವರಿಸದೆ । ಗರುಡನ ಮೇಲೆ ಗಮನವಾಗದೆ ‖ ಭರದಿಂದ ನೀ ಬಂದು ಕರಿಯನುದ್ಧರಿಸಿದೆ । ಕರಿರಾಜ ಎಷ್ಟು ಕನಕವ ಕೊಟ್ಟ ಹರಿಯೇ ‖ ೨ ‖ ಅಜಮಿಳನು ಅಣ್ಣನೆ ವಿಭೀಷಣನು ತಮ್ಮನೆ । ನಿಜದಿ ರುಕ್ಮಾಂಗದನು ನಿನ್ನ ಮೊಮ್ಮಗನೆ ‖ ಭಜನೆಗವರೇ ಹಿತರೆ ನಾ ನಿನಗೆ ಅನ್ಯನೆ । ತ್ರಿಜಗಪತಿ ಸಲಹೆನ್ನ ಪುರಂದರವಿಠಲ ‖೩‖

## ೨೦೪ ರಾಗ ಸಾರಂಗ ತ್ರಿಪುಟತಾಳ

ಇವಗೇಕೆ ಶೃಂಗಾರ । ಇವಗೇಕೆ ಭಂಗಾರ ‖ ಪ ‖ ಕಾಡ ಕರಡಿಯಂತೆ ಪೋಲುವ ದೇಹಕ್ಕೆ ‖ ಅ ‖ ನೀರೊಳಗೆ ಮುಳುಗಿದವಗೆ ಪರಿಮಳ ಗಂಧವೇಕೆ । ಭಾರ ಪೊತ್ತವಗೆ ಪನ್ನೀರು ಏಕೆ ‖ ಕೋರೆ ದಾಡೆಯ ಘೋರ ಮುಖಕೇಕೆ ಕನ್ನಡಿ । ಕರುಳ ಹಾರ ಧರಿಸಿದವಗೆ ಹಾರಪದಕವೇಕೆ ‖೧‖ ನೆಲವನಳೆವವಗೆ ಕಾಲಕಿರುಗೆಜ್ಜೆ ಏಕೆ । ತಲೆ ತಾಯ ತರಿದವಗೆ ಮರಿಯಾದೆಯೇಕೆ ‖ ಚೇಲಾರುವೆಯ ಉಟ್ಟವಗೇಕೆ ಪೀತಾಂಬರ । ಪಾಲ ಕದ್ದು ಕುಡಿದವಗೆ ಕುಸುಮ ಕೇಸರಿಯೇಕೆ ‖ ೨ ‖ ಬತ್ತಲೆ ನಿಂತಿದ್ದವಗೆ

ಕಸ್ತೂರಿ ತಿಲಕವೇಕೆ । ಉತ್ತಮ ಹಯವನೇರಿದವಗೆ ಪುಷ್ಪಕವೇಕೆ ॥ ಚಿತ್ತಜನಯ್ಯ ಶ್ರೀಪುರಂದರವಿಠ್ಠಲ । ಭಕ್ತರ ಸಲಹುವಗೆ ಬಹಿರಂಗದಾಭರಣವೇಕೆ ॥ ೩ ॥

## ೨೦೫ ರಾಗ ಬಿಲಹರಿ ಅಟತಾಳ

ಶೃಂಗಾರವಾಗಿಹುದು ಶ್ರೀಹರಿಯ ಮಂಚ ॥ ಪ ॥ ಅಂಗನೆ ರುಕ್ಮಿಣಿಯರಸನಾ ಮಂಚ ॥ ಅ ॥ ಬಡಗಿ ಮುಟ್ಟದ ಮಂಚ ಕಡಲಿನೊಳಗಿಹ ಮಂಚ। ಮೃಡನ ತೋಳಿನಲಿ ಅಡಗಿರುವ ಮಂಚ ॥ ಸಡಗರವುಳ್ಳ ಮಂಚ ಹೆಡೆಯುಳ್ಳ ಹೊಸ ಮಂಚ। ಪೊಡವಿಗೊಡೆಯ ಪಾಂಡುರಂಗನ ಮಂಚ॥ ॥ ॥ ಕಾಲಿಲ್ಲದಿಹ ಮಂಚ ಗಾಳಿ ನುಂಗುವ ಮಂಚ । ತೋಳು ಬಿಳುಪಿನ ಮಂಚ ವಿಷದ ಮಂಚ ॥ ಕಾಳಗದೊಳರ್ಜುನನ ಮುಕುಟ ಕೆಡಹಿದ ಮಂಚ । ಕೇಳು ಪರೀಕ್ಷಿತನ ಕೊಂದುದೀ ಮಂಚ॥೨॥ ಕಣ್ಣು ಕಿವಿಯಾದ ಮಂಚ ಬಣ್ಣ ಬಿಳುಪಿನ ಮಂಚ । ಹೊನ್ನ ಪೆಟ್ಟಿಗೆಯೊಳಗೆ ಅಡಗುವ ಮಂಚ॥ ಹುಣ್ಣಿಮೆ ಚಂದ್ರನ ಬಣ್ಣ ಕೆಡಹಿದ ಮಂಚ। ಕನ್ನೆ ಮಹಾಲಕ್ಷ್ಮೀಯರಸನ ಮಂಚ ॥ ೩ ॥ ಹಕ್ಕಿಗೆ ಹಗೆ ಮಂಚ ರೊಕ್ಕಮುಕ್ಕದ ಮಂಚ । ರಕ್ಕಸಾರಿ ಪಾಂಡುರಂಗನ ಮಂಚ ॥ ಸಿಕ್ಕಿಲ್ಲದೀ ಮಂಚ ಶ್ರೀಲಕ್ಷ್ಮೀಪತಿ ಮಂಚ। ಪೊಡವಿಗೊಡೆಯ ಪಾಂಡುರಂಗನ ಮಂಚ॥೪॥ ಅಂಕುಡೊಂಕಿನ ಮಂಚ ಅನಂತ ಕಾಲಿನ ಮಂಚ । ಶಂಕರನ ತೋಳಿಗೆ ಪದಕದ ಮಂಚ ॥ ಶಂಕೆಯೊಳಸುರರ ಸಂಹರಿಸಿದ ಮಂಚ । ಪಂಕಜಾಕ್ಷ ಮುಕುಂದ ಪವಡಿಪ ಮಂಚ ॥ ೫ ॥ ಹುತ್ತದೊಳಿಹ ಮಂಚ ಧರೆಯ ಪೊತ್ತಿಹ ಮಂಚ । ಹೆತ್ತ ಮಕ್ಕಳಿಗೆ ಹೆಸರಿಡುವ ಮಂಚ ॥ ಹತ್ತಬಾರದ ಮಂಚ ಹತ್ತಲೀಸದ ಮಂಚ ॥ ಚಿತ್ತಜಪಿತ ತಾನು ಪವಡಿಪ ಮಂಚ ॥೬॥ ಏಳು ಹಡೆಯುಳ್ಳ ಮಂಚ ಬಹಳ ಮೃದುವಿನ ಮಂಚ । ಧ್ಯಾನಮಾತ್ರದಿ ನಾರದಂಗೊಲಿದ ಮಂಚ ॥ ನಾರಾಯಣನ ಮಂಚ ಶ್ರೀಲಕ್ಷ್ಮೀಪತಿ ಮಂಚ । ಸ್ವಾಮಿ ಶ್ರೀಪುರಂದರವಿಠಲನ ಮಂಚ ॥ ೭ ॥

## ೨೦೬ ರಾಗ ಬೇಹಾಗ್ ಆದಿತಾಳ

ಕಲಿಯುಗದೊಳು ಹರಿನಾಮವ ನೆನೆವರೆ । ಕುಲಕೋಟಿಗಳುದ್ಧರಿಸುವುವು ॥ ಪ ॥ ಸುಲಭದ ಮುಕ್ತಿಗೆ ಸುಲಭನೆಂದೆನಿಸುವ । ಜಲರುಹನಾಭನ

ನೆನೆ ಮನವೆ || ಅ || ಸ್ನಾನವನರಿಯೆನು ಮೌನವನರಿಯೆನು | ಧ್ಯಾನವ ನರಿಯೆನೆಂದೆನಬೇಡ || ಜಾನಕಿವಲ್ಲಭ ದಶರಥನಂದನ | ಗಾನವಿನೋದನ ನೆನೆ ಮನವೆ || ೧ || ಅರ್ಚಿಸಲರಿಯೆನು ಮೆಚ್ಚಿಸಲರಿಯೆನು | ತುಚ್ಛನು ನಾನೆಂದೆನಬೇಡ || ಅಚ್ಯುತಾನಂತ ಗೋವಿಂದ ಮುಕುಂದನ | ಇಚ್ಛೆಯಿಂದ ನೀ ನೆನೆ ಮನವೆ ||೨|| ಜಪವೊಂದರಿಯೆನು ತಪವೊಂದರಿಯೆನು| ಉಪದೇಶವಿಲ್ಲೆಂದೆನಬೇಡ || ಅಪಾರಮಹಿಮ ಶ್ರೀಪುರಂದರವಿಠಲನ | ಉಪಾಯದಿಂದಲಿ ನೆನೆ ಮನವೆ || ೩ ||

## ೨೦೭ ರಾಗ ಮೋಹನ ಅಟತಾಳ

ಹರಿಕಥಾಮೃತಸೇವೆ ಹರಿದಾಸರಲ್ಲದಲೆ | ದುರುಳು ಮೂಢರು ಬಲ್ಲರೆ || ||ಪ|| ಸ್ತನ್ಯಪಾನದ ಸವಿಯ ಚಿಣ್ಣರರಿಯುವಂತೆ | ಮಣ್ಣುಬೊಂಬೆಯು ಬಲ್ಲುದೆ || ಅನ್ನಪಾನದ ಸವಿಯ ಕೊನೆನಾಲಿಗರಿವಂತೆ | ಅಣಿ ಮಾಡಿ ಕೊಡುವಂಥ ಕರ ಬಲ್ಲುದೆ ||೧|| ನವನೀರದಾರ್ಭಟಿಕೆ ನವಿಲುಗಳು ನಲಿವಂತೆ | ಕಾವುಕಾವೆಂಬ ಕಾಕವು ನಲಿವುದೆ || ದಿವಸಾಧಿಪತಿಯುದಿಸಲರಳು ವಬ್ಜಗಳಂತೆ | ದಿವಸಾಂಧ ಪಕ್ಷಿಗಳು ಹರುಷಿಸುವುವೆ || ೨ || ಮಲ್ಲೆ ಮಲ್ಲಿಗೆ ಮುಡಿಯಬಲ್ಲ ಮಾನವರಂತೆ | ಭಲ್ಲೂಕಗಳು ಅದರ ಬಗೆ ಬಲ್ಲುವೆ || ಫುಲ್ಲಾಕ್ಷ ರಘುಪತಿ ಪುರಂದರವಿಠ್ಠಲನ | ಬಲ್ಲ ಸಜ್ಜನರಂತೆ ಖುಲ್ಲರರಿಯುವರೆ || ೩ ||

## ೨೦೮ ರಾಗ ನಾದನಾಮಕ್ರಿಯೆ ಏಕತಾಳ

ಗುದ್ದಿದವನೆ ಬಲ್ಲ| ಗುದ್ದಿಸಿಕೊಂಡವನೆ ಬಲ್ಲ| ಸುದ್ದಿಗೆ ತಾವಿಲ್ಲ| ಬೌದ್ಧರೆ ಕೇಳಿರಿ ನೀವೆಲ್ಲ || ಪ || ಜೀವದೊರಸೆ ಕೊಂದ | ಹವಣಿಸಿ | ನೆವಸದನುಂಗದ || ಬಡು ಭಾಷೆಯ ಕಡಿದ | ಶಿವ ಶಿವ ತಾನಾಗೆ ಬಿರಿದ || ೧ || ಆರಿಗೆ ಮೊರೆಯಿಡಲಿ | ಪಿರಿದಭಿಮಾನಕ್ಕೆ ಸಡಲಿ || ಬಾರವು ತಿರುಗಿರಲಿ | ಕಾರಣ ಇದಿರಲಿ ಇರಲಿ || ೨ || ಕರ್ಮವು ಛೇದಿಸಿದ | ವೈರಕೆ ಗುರಿಯನೆ ಮಾಡಿದ || ಧರ್ಮವ ಭಾವಿಸಿದ ಪುರಂ | ದರವಿಠಲನೆ ನಿಜ ಬುದ್ಧ || ೩ ||

## ೨೦೯ ರಾಗ ತೋಡಿ ಆದಿತಾಳ

ಏನ ಬರೆದೆಯೊ ಬ್ರಹ್ಮ ನೀನೆಷ್ಟು ನಿರ್ದಯನೊ ||ಪ|| ಅಭಿ | ಮಾನ ವನು ತೊರೆದು ಪರರನ್ನು ಬೇಡುವುದ ||ಅ|| ಗೇಣೊಡಲು ಪೊರೆವುದಕೆ ಪೋಗಿ ಪರರನು ಪಂಚ | ಬಾಣಸಮರೂಪ ನೀನೆಂದು ಪೊಗಳೆ || ಆಣೆ ನಿನ್ನಾಣೆಲ್ಲ ನಾಳೆ ಬಾರೆಂದೆನಲು | ಗಾಣ ತಿರುಗುವ ಎತ್ತಿನಂತೆ ಬಳಲು ವುದ||೧||ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು | ಸೊಲ್ಲು ಸೊಲ್ಲಿಗೆ ಅವರ ಕೊಂಡಾಡುತ || ಇಲ್ಲ ಈ ವೇಳೆಯಲಿ ತಿರುಗಿ ಬಾರೆಂದೆನಲು | ಅಲ್ಲ ವನು ತಿಂದ ಇಲಿಯಂತೆ ಕೊರಗುವುದ || ೨ || ಹಿಂದೆ ಬರೆದ ಬರೆಹ ಹೇಗಾದರಾಗಲಿ | ಮುಂದೆನ್ನ ವಂಶದಲಿ ಜನಿಸುವರ ಕಾಯೊ || ಸಂದೇ ಹಿಸಲು ಬೇಡ ಪುರಂದರವಿಠ್ಠಲ | ಕಂದರ್ಪಜನಕ ಉಡುಪಿಯ ಕೃಷ್ಣ ನಾಣೆ || ೩ ||

## ೨೧೦ ರಾಗ ನಾದನಾಮಕ್ರಿಯೆ ಆದಿತಾಳ

ಮನವ ನಿಲಿಸುವುದು ಬಹು ಕಷ್ಟ| ಹರಿದಾಡುವಂಥ | ಮನವ ನಿಲಿಸು ವುದು ಬಹು ಕಷ್ಟ || ಪ || ಕಾಶಿಗ್ಹೋಗಲು ಬಹುದು | ದೇಶ ತಿರುಗಲು ಬಹುದು | ಆಸೆ ಸುಟ್ಟಂತೆ ಇರಬಹುದು || ಹರಿದಾಡುವಂಥ ||೧|| ಜಪವ ಮಾಡಲು ಬಹುದು| ತಪವ ಮಾಡಲು ಬಹುದು | ಉಪವಾಸ ವ್ರತದಲ್ಲಿರ ಬಹುದು || ಹರಿದಾಡುವಂಥ || ೨ || ಸ್ನಾನ ಮಾಡಲು ಬಹುದು | ಮೌನ ಮಾಡಲು ಬಹುದು | ಧ್ಯಾನದಿ ಪುರಂದರವಿಠಲನ ಚರಣದಲಿ || ಹರಿ ದಾಡುವಂಥ || ೩ ||

## ೨೧೧ ರಾಗ ಮುಖಾರಿ ಝಂಪೆತಾಳ

ಜ್ಞಾನವಂತಗೆ ವಿಧಿ ಕಾಡುವುದು ಸತ್ಯ | ಅ | ಜ್ಞಾನಮೂಢರಿಗೆ ಹರಿ ತನದ ಬಲವು ||ಪ|| ಚಂದ್ರನಿಗೆ ವಿಧಿ ಕಾಡಿ ಗ್ರಹಣ ನುಂಗುವುದಾಯ್ತು | ಇಂದ್ರನಿಗೆ ವಿಧಿ ಕಾಡಿ ಭಂಗಬಡಿಸಿತು|| ಚಂದದಲಿ ಪಾಂಡವರ ವನವಾಸ ಮಾಡಿಸಿತು | ಅಂದು ಲಲನೆ ಸೀತೆಯನ್ನು ಲಂಕೆಯಲಡಗಿಸಿತು || ೧ ||

ಹಿಂದಕ್ಕೆ ಹರಿಶ್ಚಂದ್ರನರಣ್ಯವ ಸೇರಿಸಿತು । ಮಡದ್ಯಾಗಿ ಕಾಡಿತೋ ಕರಿ ಬಂಟಿಗೆ । ಕುಂದದೀಶ್ವರನ ಸುಡುಗಾಡು ಸೇರಿಸಿತು । ಇನ್ನು ವಿಧಿಯನು ನೋಡು। ನರರ ಪಾಡೇನು ॥ ೨ ॥ ವಿಧಿ ಕಾಡೂ ಕಾಲಕ್ಕೆ ಇಲ್ಲದಪವಾದ ಬಂತು । ಕಲಿಸಿತೋ ಸುಳ್ಳು ಕಳವು ಹಾದರವ ॥ ವಿಧಿಯೊಳಗಾಗದಾ ನರರು ಮತ್ತಿಲ್ಲ । ವಿಧಿಯಗೆಲ್ದನೊ ಪುರಂದರವಿಠಲ ॥೩॥

## ೨೧೨ ರಾಗ ಬಿಲಹರಿ ಅಟತಾಳ

ಹರಿಯೇ ನಿನ್ನನು ಒಲಿಸಲುಬಹುದು । ನರರನೊಲಿಸುವುದು ಬಲು ಕಷ್ಟ ॥ ಪ ॥ ಸರಿ ಬಂದಂತೆ ಆಡುವ ಜನರಿಗೆ । ಕಡೆತನಕಿರುವುದು ಕಲಿ ಕಷ್ಟ ॥ಅ॥ ಸುಮ್ಮನೆ ಇದ್ದರೆ ಸೇರರು ಸಖರು। ಗಮ್ಮಿನಾತನೆಂತೆಂಬೊರು ಉನ್ಮಯದಿಂದ ಬಹಳನ್ನವನುಂಡರೆ ಭೂತ ಪ್ರಾಣಿ ಇವನೆಂಬೊರು। ಕಮ್ಮ್ಯುಂಡರೆ ಕಡು ಲೋಭಿಯೆಂಬೋರು । ಉಣದಿದ್ದರೆ ರೋಗ್ಯೆಂಬುವರಯ್ಯ॥೧॥ ಸುಮ್ಮನೆ ಇದ್ದರೆ ಬಹಳ ಗರುವಿಕೆ ಆತಗೆಂಬರು। ಹೊರ ಬಿಚ್ಚಾಡಲು ಬಾಯಿ ಬಡಕನೆಂಬರು । ಆಡದಿದ್ದರೆ ಮೂಕನೆಂಬರಯ್ಯ ॥ ೨ ॥ ಒಗೆದ ವಸ್ತ್ರವನು ಶುದ್ಧಾಗಿ ಹೊದ್ದರೆ । ಸುಳುಶೋಕಿನವನಿವನೆಂಬರು ॥ ನಗೆ ಮಾಸಿದರೆ ಹೇಸಿಯೆಂಬರು । ಹೊದಿಯದಿದ್ದರೆ ಹುಚ್ಚನೆಂಬರಯ್ಯ ॥ ೩ ॥ ಸತಿಯಳ ಸಂಗದಿ ಸೌಖ್ಯವಿದ್ದರೆ । ಸಲಿಗೆ ಕೊಟ್ಟಕೋತ್ಯೆಂಬರು ॥ ವ್ರತದ ನಾರೇರ ಸಂಗವ ಬಿಟ್ಟರೆ ನಪುಂಸಕನೆಂತೆಂಬರು । ಅರಿಯದಿದ್ದರೆ ದಡ್ಡನೆಂಬರಯ್ಯ ॥ ೪ ॥ ದಡಬಡಿ ಇದ್ದರೆ ತೊಣ್ಯನೆಂಬರು । ತೆಳುವಿದ್ದರೆ ರೋಗಿಷ್ಠನೆಂಬರು ॥ ಗಳಿಸಿ ಗಳಿಸಿ ಧನವಂತನಾದರೆ । ಪರರ ಒಡವೆ ಕೈಸೇರಿತೆಂಬರು । ಕಡೆಹಾಯಿಸೊ ಎನ್ನ ಕರುಣ ಪಂಢರಪುರ । ದೊಡೆಯ ಶ್ರೀ ಪುರಂದರವಿಠಲ ಕಡೆದೋರ್‍ಯೆ ॥ ೫ ॥

## ೨೧೩ ರಾಗ ನಾದನಾಮಕ್ರಿಯೆ ಝಂಪೆತಾಳ

ಏನೆಂದಳಯ್ಯ ಸೀತೆ । ಹನುಮ ನಿನಗೆ । ಎನ್ನುಡಿದಿಹಳು ಪ್ರೀತೆ ॥ಪ॥ ಚೆನ್ನಿಗ ಚೆಲುವನೆ ಕೇಳೊ । ಜಾನಕಿಯು । ನಿನ್ನ ಬಿಟ್ಟಿರಲಾರಳು ॥ ನಿನ್ನಿರುಳು ನೀ ನೀಲಕುಂತಳೆ ಕನಸಿನಲಿ । ಚೆನ್ನಾಗಿ ನಿಂತಿಯೆಂದಳೊ ರಾಮ

||೧|| ಸ್ವಾಮಿರಾಮರ ಪಾದವ । ಎಲೆ ಕಪಿಯೆ । ನಾನೆಂತು ಬಿಟ್ಟಿರಲಿ || ದಾನವನ ಶಿರವರಿದು ಲಂಕೆಯ ಪುರವನ್ನು । ದಹನವನು ಮಾಡೆಂದಳೊ ರಾಮ ||೨|| ಎಲ್ಲಿಂದ ಬಂದೆ ಹನುಮ । ನೀನೆನ್ನ । ಸೊಲ್ಲ ಕೇಳೊ ಪ್ರೇಮ|| ವಲ್ಲಭನ ಕಾಣದೆ ನಿಮಿಷ ಯುಗವಾಗಿದೆ । ನಿಲ್ಲಲಾರೆ ಎಂದಳು ರಾಮ || ||೩|| ಚಿಂತಿಸುತ ಬಡವಾದಳೊ । ಜಾನಕಿಯು । ಕಾಂತಿಹೀನಾಗಿ ಇಹಳೊ|| ಅಂತರಂಗದಿ ಪ್ರಾಣಕಾಂತಕಾಂತ ಎನುತ । ಭ್ರಾಂತಿಯಲಿ ಮರುಗುತಿಹಳೊ ರಾಮ|| ೪ || ಅಂಜನೆಯ ತನಯ ಕೇಳೊ । ನೀ ಪೋಗಿ । ಕಂಜನಾಭನಿಗೆ ಹೇಳೊ || ಕುಂಜರನ ಕಾಯ್ದ ಶ್ರೀಪುರಂದರವಿಠಲನ್ನ । ಪಂಜರದ ಅರಗಿಣಿ ರಾಮ;ಎಂದಳು ||೫||

## ೨೧೪ ರಾಗ ವಸಂತ ಆದಿತಾಳ

ಕೊಡು ಬೇಗ ದಿವ್ಯಮತಿ । ಸರಸ್ವತಿ । ಕೊಡು ಬೇಗ ದಿವ್ಯಮತಿ ||ಪ|| ಮೃಡ ಹರಿ ಹಯಮುಖರೊಡೆಯಳೆ ನಿನ್ನಯ । ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ || ಅ || ಇಂದಿರಾರಮಣನ ಹಿರಿಯ ಸೊಸೆಯು ನೀನು । ಬಂದೆನ್ನ ವದನದಿ ನಿಂದು ನಾಮವ ನುಡಿಸೆ ||೧|| ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ । ಸುಖವಿತ್ತು ಪಾಲಿಸೆ ಸುಜನಶಿರೋಮಣಿ || ೨ || ಪತಿತಪಾವನೆ ನೀ ಗತಿಯೆಂದು ನಂಬಿದೆ । ವಿತತ ಪುರಂದರವಿಠಲನ ತೋರೆ ||೩||

## ೨೧೫ ರಾಗ ಮೋಹನ ಝಂಪೆತಾಳ

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ । ಸುಜ್ಞಾನಿಗಳ ಕೂಡೆ ಜಗಳವೇ ಲೇಸು ||ಪ|| ಉಂಬುಡುವುದಕ್ಕಿರದ- ಅರಸನೋಲಗಕಿಂತ। ತುಂಬಿದೂರೊಳು ತಿರಿದುಂಬುವುದೆ ಲೇಸು || ಹಂಬಲಿಸಿ ಹಾಳು ಹರಟೆಗಳ ಹರಟೆಗಿಂತ । ನಂಬಿ ಹರಿದಾಸರೊಳು ಪೊಂದುವುದೆ ಲೇಸು ||೧|| ಒಡನೆ ಹಂಗಿಸುವವನ ಪಾಲೋಗರಕ್ಕಿಂತ । ಕುಡಿ ನೀರು ಕುಡಿದುಕೊಂಡಿರುವುದೆ ಲೇಸು|| ಕಡು ಕುಹಕನೊಡನೆ ಸಂಗವ ಮಾಡುವುದಕಿಂತ । ಅಡವಿಯೊಳಗಜ್ಞಾತ

ವಾಸವೇ ಲೇಸು || ೨ || ಮಸಮ ಮತ್ಸರಿಪ ಸತಿಯೊಡನೆ ಸಂಸಾರಕ್ಕಿಂತ। ಹಸನಿಲ್ಲದಾ ಹಾಳುಗುಡಿಯೆ ಲೇಸು || ಎಸೆದು ಭಜಿಸಲು ನಮ್ಮ ಪುರಂದರ ವಿಠಲನ್ನ । ವಶವಹಗೆ ಮುಕ್ತಿಯು ವಶವಹುದು ಕೇಳಿ ||೩||

### ೨೧೬ ರಾಗ ಶಂಕರಾಭರಣ ಝಾಪುತಾಳ

ನೋಡಿರಯ್ಯ ಹನುಮಂತನ ಮಹಿಮೆಯ । ಬೇಡಿರೊ ವರಗಳನು || || ಪ || ರೂಢಿಯೊಳು ಇವನನ್ನು ಪಾಡಿ ಪೊಗಳುತಿಪ್ಪ ಜನರ। ನೋಡಿ ನೋಡಿ ವರವನೀವ ಗಾಡಿಗಾರ ಹನುಮನ್ನ || ಅ || ಅಂದು ದಶರಥಸುತ ನಾಗಿ । ಬಂದು ನಿಂದು ಸಾಕೇತದಿ । ಚಂದದಿಂದಿಪ್ಪನೆಂದು ಅಂದದಿಂ ವಿಶ್ವಾಮಿತ್ರ || ತಂದು ರಘುರಾಮನಿಗೊರೆಯಲಂದು ಯಾಗವ ಕಾಯ್ದು । ಸುಂದರ ರಾಮನಿಗೆ ವಂದನೆಗೆಯ್ವನೀತ || ೧ || ಧೀರನಾಗಿ ಧನುವ ಮುರಿದು ಮರೆದು ಮರೆದು ದಂಡಕವ। ಸೇರಿ ಘೋರ ರಕ್ಕಸರ ಸದೆದು ಜರಿದು ತಂದು ಕಪಿಪತಿಯೊಡನೆ || ಸೇರಿ ಸಖ್ಯವನ್ನೆ ಮಾಡಿ ಧಾರಿಣಿ ಯೊಳಗೆ ಕಡು। ನಾರಿಯನ್ನೆ ಹುಡುಕಿದ ಧೀರ ರಾಮದೂತನೀತ || || ೨ || ಖ್ಯಾತಿಯಿಂದ ಸೇತುವೆಯನು ಕಟ್ಟಿ ಮೆಟ್ಟಿ ರಾವಣಪಡೆಯ। ಭೂತಳದೊಳು ಕೆಡಹಿ ಬಿಟ್ಟು ಮಹಾಂತದೊಳು || ಈತನೆಂದು ಸೇರಿ ಬಂದು ವಾತತನುಜನೆಮ್ಮ ಬಹು । ಪ್ರೀತಿಯಿಂದ ಪುರಂದರವಿಠಲನ್ನ ದಾಸನಾದ || ೩ ||

### ೨೧೭ ರಾಗ ಪೂರ್ವಿ ಆದಿತಾಳ

ಇರಬೇಕು ಇರದಿರಬೇಕು ||ಪ|| ಸಂ। ಸಾರದಿ ಜನಕಾದಿ ರಾಜಋಷಿ ಗಳಂತೆ || ಅ || ಮಿಥಿಲಾಪಟ್ಟಣವು ದಹಿಸಿತೆಂಬುದ ಕೇಳಿ। ಮಿಥಿಲೇಶ "ಮಮ ಕಿಂಚಿನ್ನ ದಹ್ಯತೇ" ಎಂಬಂತೆ ಇರಬೇಕು || ೧ || ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು। ಮಧುವೈರಿ ವೈಕುಂಠಪುರವಿತ್ತ ತೆರದಂತೆ ಇರ ಬೇಕು || ೨ || ಪುರಂದರವಿಠಲನ್ನ ದಾಸರ ಸಂಗಡ । ಪುತ್ರ ಮಿತ್ರ ಕಳತ್ರ ಬಂಧುಗಳಂತೆ ಇರಬೇಕು ||೩||

## ೨೧೮ ನಾದನಾಮಕ್ರಿಯೆ ಅಟತಾಳ

ಊಟಕ್ಕೆ ಬಂದೆವು ನಾವು । ನಿಮ್ಮ । ಆಟಪಾಟವ ಬಿಟ್ಟು ಅಡುಗೆ ಮಾಡಮ್ಮ ॥ಪ॥ ಕತ್ತಲಿಟ್ಟಾವಮ್ಮ ಕಣ್ಣು । ಬಾಯಿ । ಬತ್ತಿ ಬರುತಲಿದೆ ಕೈಕಾಲು ಝುಮ್ಮು ॥ ಹೊತ್ತು ಹೋಗಿಸಬೇಡವಮ್ಮ । ಒಂದು । ತುತ್ತಾದರು ಇತ್ತು ಸಲಹು ನಮ್ಮಮ್ಮ ॥೧॥ ಒಡಲೊಳಗೇ ಉಸಿರಿಲ್ಲ । ಒಂದು । ಕ್ಷಣವಾದರೆ ಜೀವ ನಿಲ್ಲುವುದಿಲ್ಲ ॥ ಮಡಿವರೆ ದೋಷ ತಟ್ಟುವುದು । ಒಂದು । ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು ॥೨॥ ಹೊನ್ನರಾಸಿಯ ತಂದು ಸುರಿಯೆ । ಕೋಟಿ । ಕನ್ನಿಕೆಯರ ತಂದು ಧಾರೆಯನೆರೆಯೆ ॥ ಅನ್ನದಾನಕ್ಕಿನ್ನು ಸರಿಯೆ । ಪ್ರ । ಸನ್ನ ಪುರಂದರವಿಠಲ ಧೊರೆಯೆ ॥೩॥

## ೨೧೯ ರಾಗ ಕಲ್ಯಾಣಿ ಆದಿತಾಳ

ಸತ್ಯವೆಂಬುದೆ ಸ್ನಾನ ಉಪವಾಸ ಜಪ ನೇಮ ।ಅ। ಸತ್ಯದಲಿ ಮಾಡುವ ಕರ್ಮ ವ್ಯರ್ಥ ॥ಪ॥ ಅಪ್ಪಳಿಸಿ ಪರರ ಒಡವೆಗಳ ತಂದುಂಡು ತಾ । ನೊಪ್ಪಿಂದುಪವಾಸ ವ್ರತವ ಮಾಡಿ ॥ ತಪ್ಪದಲೆ ಸ್ವರ್ಗವನು ಸೂರೆಗೊಂಬುವೆನೆಂಬೆ । ಸರ್ಪಗಳು ಮಾಡಿದ ಅಪರಾಧವೇನಯ್ಯ ॥೧॥ ಬಿಡದೆ ಮದಮತ್ಸರಾಹಂಕಾರದಲಿ ಮುಳುಗಿ । ಒಡನೆ ಬೆರಳುಗಳೆಣಿಸಿ ಮೌನದಿಂದ ॥ ತಡೆಯದಲೆ ಪರಲೋಕ ಸೂರೆಗೊಂಬುವೆನೆಂಬೆ । ಬಡ ಬಕನು ಮಾಡಿದ ಅಪರಾಧವೇನಯ್ಯ ॥ ೨ ॥ ಪರಸತಿಯು ಪರಧನವು ಪರನಿಂದೆ ಪರಹಿಂಸೆ । ಪರಮಪಾತಕದ ಕಾರಣವೆಂದು ತಿಳಿದು ॥ ಧರೆಗಧಿಕ ಪುರಂದರವಿಠಲನ ಚರಣವನು । ನೆರೆಭಜಿಸಿ ಸುಖಿಯಾಗಿ ಬಾಳೆಲವೊ ಮನುಜ ॥ ೩ ॥

## ೨೨೦ ರಾಗ ಪೂರ್ವಿಕಲ್ಯಾಣಿ ಅಟತಾಳ

ಹರಿಚಿತ್ತ ಸತ್ಯ ಹರಿಚಿತ್ತ ॥ ಪ ॥ ನರಚಿತ್ತಕೆ ಬಂದದ್ದು ಲವಲೇಶ ನಡೆಯದು ॥ ಅ ॥ ಸುದತಿಮಕ್ಕಳ ಭಾಗ್ಯ ಬಯಸೋದು ನರಚಿತ್ತ । ಮದುವ್ಯಾಗದಿರುವುದು ಹರಿಚಿತ್ತವು ॥ ಕುದುರೆ ಅಂದಣ ಆನೆ ಬಯಸೋದು ನರಚಿತ್ತ । ಪದಚಾರಿಯಾಗೋದು ಹರಿಚಿತ್ತವಯ್ಯ ॥೧॥ ವಿಧವಿಧ ಯಾತ್ರೆಯ

ಬಯಸೋದು ನರಚಿತ್ತ । ಒದಗಿ ಬರುವ ರೋಗ ಹರಿಚಿತ್ತವು ‖ ಸದಾ ಅನ್ನದಾನವ ಬಯಸೋದು ನರಚಿತ್ತ । ಉದರಕ್ಕೆ ಅಳುವುದು ಹರಿಚಿತ್ತವಯ್ಯ ‖ ೨ ‖ ಧರಣಿಯನಾಳಬೇಕೆಂಬುದು ನರಚಿತ್ತ । ಪರರ ಸೇವಿಸುವುದು ಹರಿಚಿತ್ತವು ‖ ಪುರಂದರವಿಠಲನ ಬಯಸೋದು ನರಚಿತ್ತ । ದುರಿತವ ಕಳೆವುದು ಹರಿಚಿತ್ತವಯ್ಯ ‖೩‖

## ೨೨೧ ರಾಗ ಶಂಕರಾಭರಣ ಅಟತಾಳ

ಮಗನೆಂದಾಡಿಸುವಳು ಜಗದುದರನ್ನ । ಆನಂದದಿ ಗೋಪಿ ‖ ಪ ‖ ಕುಕ್ಷಿಯೊಳೀರೇಳು ಜಗವೆಲ್ಲವ ತಾಳಿ । ರಕ್ಷಿಸಿಕೊಂಡಿಹ ಬಲವಂತನ ‖ ಪಕ್ಷಿವಾಹನ ದೇವ ಅಂಜಿದಂಜಿದನೆಂದು । ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ‖ ‖೧‖ ಸಾಗರಪತಿಯಾಗಿ ಭೋಗಿಶಯನದಲಿ । ಯೋಗನಿದ್ರೆಯೊಳಿಪ್ಪ ಆಕಂದನ ‖ ಆಗಮ ಶ್ರುತಿಗಳು ಅರಸಿ ಕಾಣದ ವಸ್ತು । ತೂಗಿ ನೋಡುವ ಪುಣ್ಯವೆಲ್ಲಿ ಪಡೆದಳೊ ‖ ೨ ‖ ವೇದತತಿಗಳಿಂದ ಬೋಧ ತಪಗಳಿಂದ । ಹೋದ ಹೊಲಬನರಿಯದಾತನ ‖ ಬೀದಿಯಲಾಡುವ ಮಗನನರಸಿ ವಿ । ನೋದವಾಡುವ ಪುಣ್ಯವೆಲ್ಲಿ ಪಡೆದಳೊ ‖ ೩ ‖ ಹೊನ್ನ ಮಣೆಯ ಮೇಲೆ ಚಿಣ್ಣನ ಕುಳ್ಳಿರಿಸಿ । ಎನ್ನ ಮೋಹದ ಮುದ್ದು ಮಗನೆನುತ ‖ ಹೊನ್ನ ತಾ ಗುಬ್ಬಿ ತಾ ಹೊನ್ನ ಗುಬ್ಬಿಯೆಂದು । ಚಿಣ್ಣನಾಡಿಪ ಪುಣ್ಯವೆಲ್ಲಿ ಪಡೆದಳೊ‖ ‖೪‖ ಬಲಿಯಿತ್ತ ಧಾರೆಯ ಜಲವ ಕರದೊಳಿಟ್ಟು । ನೆಲನ ಈರಡಿ ಮಾಡಿದ ದೇವನ ‖ ಲಲನೆ ತೊಡೆಯೊಳಿಟ್ಟು ತಲೆಯ ನೇವರಿಸುತ್ತ । ಮೊಲೆಯ ಕೊಡುವ ಪುಣ್ಯವೆಲ್ಲಿ ಪಡೆದಳೊ ‖೫‖ ಮುದದಿ ಬಾಲಕನ ನಿಲ್ಲೊ ನಿಲ್ಲೋ ಎಂದು । ಬಿಡದೆ ಕೊನೆಬೆರಳಲ್ಲಿ ಕರಪಿಡಿದು ‖ ಅಡಿಯಿಡು ಮಗನೆ ದಟ್ಟಡಿಯಿಡು ಇಡು ಎಂದು । ನಡೆಯ ಕಲಿಸುವ ಪುಣ್ಯವೆಲ್ಲಿ ಪಡೆದಳೊ ‖ ೬ ‖ ಒಣಗಿದ ತನು ತಲೆಜಡೆ ಹಣೆಯಲಿ ನಾಮ । ಪ್ರಣವಜಪದಿ ಮಣಿಮಾಲೆಯನೆಣಿಸಿ ‖ ಮುನಿಜನಗಳೆಂದೂ ಅರಸಿ ಕಾಣದವನೊಳ್ । ಅಣಕವಾಡುವ ಪುಣ್ಯವೆಲ್ಲಿ ಪಡೆದಳೊ ‖ ೭ ‖ ಪಶುಪತಿ ಬ್ರಹ್ಮರು ಸುರ ಸಿದ್ಧಸಾಧ್ಯರು । ವಸುಧೆಯೊಳಗೆ ಬಂದು ಕಾದಿರಲು ‖ ಶಶಿಮುಖಿ ಸಾಸಿರ ಪೆಸ

ರುಳ್ಳ ದೇವನ । ಪೆಸರಿಡುವ ಪುಣ್ಯವೆಷ್ಟಿ ಪಡೆದಳೊ ॥೮॥ ಮಂದಗಮನೆ ಆನಂದದಿ ನಿಟ್ಟಿಸಿ । ಕುಂದದೆ ಜಯ ಜಯವೆನುತಿರಲು ॥ ಮಂದರಧರ ಪುರಂದರವಿಠಲನ । ಬಂದಪ್ಪುವ ಪುಣ್ಯವೆಷ್ಟಿ ಪಡೆದಳೊ ॥೯॥

## ೨೨೨ ರಾಗ ನಾದನಾಮಕ್ರಿಯೆ ಅಟತಾಳ

ದುಗ್ಗಾಣಿ ಎಂಬುದು ದುರ್ಜನಸಂಗ ॥ ಪ ॥ ದುಗ್ಗಾಣಿ ಬಲು ಕೆಟ್ಟ ದಣ್ಣ ॥ ಅ ॥ ಆಚಾರ ಹೋಗೋದು ದುಗ್ಗಾಣಿ । ಬಹು । ನೀಚರ ಮಾಡೋದು ದುಗ್ಗಾಣಿ॥ ನಾಚಿಕೆಯಿಲ್ಲದೆ ಮನೆಮನೆ ತಿರುಗಿಸಿ । ಛೀ ಛೀ ಎನಿಸೋದು ದುಗ್ಗಾಣಿಯಣ್ಣ ॥೧॥ ನೆಂಟತನ ಹೇಳೋದು ದುಗ್ಗಾಣಿ । ಬಹು। ನೆಂಟರನೊಲಿಸೋದು ದುಗ್ಗಾಣಿ॥ ಒಂಟಿ ಹಾಂಗೆ ವೋರ್ಕೆಮೇಲಕ್ಕೆ ಸೆಳಕೊಂಡು । ಕುಂಟನೆನಿಸುವುದು ದುಗ್ಗಾಣಿಯಣ್ಣ ॥೨॥ ಮಾನವಾಗಿರಿಸೋದು ದುಗ್ಗಾಣಿ । ಮಾನ ಹವಗೆಡಿಸೋದು ದುಗ್ಗಾಣಿ ॥ ಬಹು। ಮಾನನಿಧಿ ಶ್ರೀಪುರಂದರವಿಠಲನ । ಕಾಣಿಸದಿರುವುದು ದುಗ್ಗಾಣಿಯಣ್ಣ ॥೩॥

## ೨೨೪ ರಾಗ ಆನಂದಭೈರವಿ ಝಂಪೆತಾಳ

ನೋಡದಿರು ಪರಸ್ತ್ರೀಯರ ॥ ಪ ॥ ನೋಡಿದರೆ ಕೇಡಹುದು ತಪ್ಪದಿದಕೊ ॥ಅ॥ ನೋಡಿದರೆ ಸ್ತ್ರೀಹತ್ಯವು । ನುಡಿಸಿ ಮಾ । ತಾಡಿದರೆ ಗೋಹತ್ಯವು ॥ ಕಾಡಿದರೆ ಶಿಶುಹತ್ಯವು । ಮೈ । ಗೂಡಿದರೆ ಬ್ರಹ್ಮಹತ್ಯವು ॥೧॥ ಎರಳೆಗಂಗಳೆರೊಲುಮೆಗೆ । ಮರುಳಾಗಿ । ಬರಿದೆ ನೀ ಕೆಡಬೇಡವೊ ॥ ದುರುಳ ಯಮಲೋಕದಲ್ಲಿ । ಕರೆದೊಯ್ದು । ಉರಿಗಂಬವಪ್ಪಿಸುವರೊ ॥೨॥ ಮರುಳು ಮಾನವನೆ ಕೇಳೊ । ಪರಸತಿಯು । ಉರಿಯೆಂದು ನೋಡು ನಿತ್ಯ॥ ವರದ ಪುರಂದರವಿಠಲನ । ನೆನೆದರೆ । ಸ್ಥಿರವಾದ ಮುಕುತಿಯಹುದು ॥೩॥

## ೨೨೫ ರಾಗ ನಾದನಾಮಕ್ರಿಯೆ ಆದಿತಾಳ

ಅದರಿಂದೇನು ಫಲ ಇದರಿಂದೇನು ಫಲ । ನಮ್ಮ । ಪುರಂದರವಿಠಲನ ನಾಮವ ನೆನೆಯದೆ ॥ಪ॥ ಹೃದಯಕಮಲವನು ತೊಳೆಯಲಾರದೆ ವ್ಯರ್ಥ।

ಉದಯಾಸ್ತಮಾನ ನೀರೊಳು ಮುಳುಗುವರು ॥ ಅದಕಿಂತ ಸರ್ವದಾ ನೀರೊಳಗಿರುತಿಪ್ಪ। ಮುದಿಕಪ್ಪೆ ಮಾಡಿದ ತಪ್ಪೇನಯ್ಯ॥೧॥ ಹಲವು ಕಾಲ ಕಲ್ಲು ನೀರೊಳಗಿದ್ದರೇನು। ಬಲು ನೆನೆದಮೃತ ಶಿಲೆಯಾಗುವದೆ ॥ ಕರದಲಿ ಜಪಮಾಲೆ ಮಣಿಗಳನೆಣಿಸುತ। ಪರನಿಂದೆ ಬಾಯಲಿ ಮಾಡುವರಯ್ಯ ॥೨॥ ಸ್ನಾನವ ಮಾಡುವರು ಆಸನ ಹಾಕುವರು। ಮೌನದಿ ಚಪ್ಪಾಳಿಟ್ಟು ಹಕ್ಕಿ ಬೆದರುವಂತೆ ॥ ಕಣ್ಣನ್ನು ಮುಚ್ಚುವರು ಮೂಗನ್ನೆ ಹಿಡಿವರು। ಚೆನ್ನಾಗಿ ಮನವ ನಿಲ್ಲಿಸಲರಿಯರು ವ್ಯರ್ಥ ॥ ೩ ॥ ನೇಮವನು ತಾಳುವರು ದಾನವ ಮಾಡುವರು। ಕಾಮ ಕ್ರೋಧ ಮದ ಮತ್ಸರ ಬಿಡದೆ ಇಂಥಾ ॥ ನಾಯಿ ಕುನ್ನಿಗಳ ಕಂಡೊಳಗಿಟ್ಟುಕೊಂಡರೆ। ಕಾಶಿಯಲಿ ಮುಳುಗಿದ ಫಲವೇನಯ್ಯ ॥ ೪ ॥ ಮೂರು ಕೋಡಿ ವನಮಾಲೆಯು ಜೋಗಿಣಿಯು। ಕೊರಳೊಳು ಕವಡೆಯ ಸರದಂತೆ॥ ಮೂರಾರು ಪುರಾಣ ತಿರುವಿ ಹಾಕುವರು। ಮಾಪಿತನ ಮನಮುಟ್ಟಿ ಭಜಿಸದೆ ವ್ಯರ್ಥ ॥೫॥ ಹಸಿವಾಯಿತೇಳು ದೇವರ ತೊಳೆಯೆಂಬರು। ಹಸನಾಗಿ ಮನಮುಟ್ಟಿ ಪೂಜಿಸರು ॥ ಹೊಸ ಹಾವಿನ ಬುಟ್ಟಿಯಂತೆ ಮುಂದಿಟ್ಟುಕೊಂಡು। ವಸುಧೆಯೊಳ್ ಗಾರುಡಿಯಾಟವಾಡುವರು ॥೬॥ ಪರಧನ ಪರಸತಿ ಪರನಿಂದೆಗಳುಕದೆ। ತೊರೆಯೊಳು ಮಿಂದರೆ ದುರಿತ ಪೋಗುವುದೆ ॥ ಸರುವವ ತೊರೆದು ಹರಿಯ ಧ್ಯಾನ ಮಾಡಲು। ವರವ ಕೊಡುವ ನಮ್ಮ ಪುರಂದರವಿಠಲ ॥೭॥

## ೨೨೬. ರಾಗ ನಾಟಕುರಂಜಿ (ಕುಮಾಚು) ಅಟತಾಳ

ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ। ಎಲ್ಲೆಲ್ಲಿ ನೋಡಿದರಲ್ಲಿ ರಾಮ ॥ಪ॥ ರಾವಣನ ಮೂಲಬಲ ಕಂಡು ಕಪಿಸೇನೆ। ಆವಾಗಲೆ ಬೆದರಿ ಓಡಿದವು ॥ ಈ ವೇಳೆ ನರನಾಗಿ ಇರಬಾರದೆಂದೆಣಿಸಿ। ದೇವ ರಾಮಚಂದ್ರ ಜಗವೆಲ್ಲ ತಾನಾದ॥ ೧ ॥ ಅವನಿಗೆ ಇವ ರಾಮ ಇವನಿಗೆ ಅವ ರಾಮ। ಅವನಿಯೊಳೀಪರಿ ರೂಪವುಂಟೆ ॥ ಲವಮಾತ್ರದಿ ಅಸುರ ದುರುಳರೆಲ್ಲರು। ಅವರವರ್ ಹೊಡೆದಾಡಿ ಹತರಾಗಿ ಪೋದರು ॥೨॥ ಹನುಮದಾದಿ ಸಾಧು ಜನರು ಅಪ್ಪಿಕೊಂಡು। ಕುಣಿಕುಣಿದಾಡಿದರು ಹರುಷದಿಂದ ॥ ಕ್ಷಣದಲ್ಲಿ ಪುರಂದರವಿಠ್ಠಲರಾಯನು। ಕೊನೆಗೊಡೆಯನು ತಾನೊಬ್ಬನಾಗಿ ನಿಂತ॥

## ೨೨೭ ರಾಗ ಕಾಂಭೋಜಿ ಅಟತಾಳ

ಆರು ಬದುಕಿದರೇನು ಆರು ಬಾಳಿದರೇನು । ಪೂರ್ವಜನ್ಮದ ಕರ್ಮ ವಿಧಿ ತೀರದನಕ ॥ ಪ ॥ ಪತಿಭಕುತಿಯಿಲ್ಲದಿಹ ಸತಿಯಿದ್ದು ಫಲವೇನು । ಮತಿಯಿಲ್ಲದವಗೆ ಬೋಧಿಸಿದರೇನು ॥ ಪತಿಯಿಲ್ಲದವಳಿಗೆ ಬಹು ಭೋಗ ವಿದ್ದರೇನು । ಮತಿಹೀನನಾದಂಥ ಮಗನ ಗೊಡವೇನು ॥೧॥ ಜ್ಞಾನವಿಲ್ಲ ದವ ನಿತ್ಯಸ್ನಾನಮಾಡಿ ಫಲವೇನು । ದಾನಧರ್ಮವಿಲ್ಲದವನ ದಯವಾದ ರೇನು ॥ ಮಾನಾಭಿಮಾನಗಳ ಮರೆದವನ ಸಂಗವೇನು । ದೀನನಾದವನಿಗೆ ಧೈರ್ಯವಿದ್ದರೇನು॥೨॥ ಕಣ್ಣಿಲ್ಲದವಗೆ ಚಂದ್ರನುದಯದಾ ಭ್ರಮೆಯೇನು। ಹೆಣ್ಣಿಲ್ಲದಿಹ ಅಷ್ಟಭೋಗಂಗಳೇನು ॥ ಬಣ್ಣ ಬಂಗಾರವನು ಬಚ್ಚಿಟ್ಟು ಫಲವೇನು । ಅಣ್ಣ ತಮ್ಮಂದಿರನು ಅಗಲಿ ಸುಖವೇನು ॥೩॥ ಗುರುದೈವವ ರಿಯದವ ಹಿರಿಯನಾದರೆಯೇನು । ಜರಿದು ಕೆಟ್ಟಾಡುವನ ಸರಸವೇನು ॥ ಮರೆಹೊಕ್ಕವರ ಕಾಯದವನ ಧೊರೆತನವೇನು । ಪರರಿಗುಪಕರಿಸದವ ಬಾಳಿ ಫಲವೇನು ॥ ೪ ॥ ವೇದಗಳನೋದಿ ತಾ ವಾದಿಸಲು ಫಲವೇನು । ಭೇದವೆಣಿಸುತಿಹನ ನೆಂಟತನವೇನು ॥ ಮೋದದಿಂದ್ಹರಿಗರ್ಪಿಸದ ಕವಿತೆ ಯಿಂದೇನು। ಓದಿಸದೆ ಕೆಡಿಸುವ ತಂದೆಯಿದ್ದೇನು ॥೫॥ ಭಾವಶುದ್ಧಿಯಿಲ್ಲ ದವನ, ದೇವತಾರ್ಚನೆಯೇನು । ಆವ ವರಗಳ ಕೊಡದ ದೇವರೇನು ॥ ದೇವ ಶ್ರೀಪುರಂದರವಿಠಲನ್ನ ಚರಣವನು । ಆವಾಗ ನೆನೆಯದಿಹ ಜಿಹ್ವೆ ಯಿದ್ದೇನು ॥ ೬ ॥

## ೨೨೮ ರಾಗ ಬಿಲಹರಿ ಅಟತಾಳ

ಹೆತ್ತ ತಾಯಿತಂದೆಗಳ ಚಿತ್ತವ ನೋಯಿಸಿ। ನಿತ್ಯ ದಾನವ ಮಾಡಿ ಫಲವೇನು॥ ಸತ್ಯ ಸದಾಚಾರ ಇಲ್ಲದವನು ಜಪ । ಹತ್ತು ಸಾವಿರ ಮಾಡಿ ಫಲವೇನು ॥೧॥ ತನ್ನ ಸತಿಸುತರ ಬಂಧುಗಳ ನೋಯಿಸಿ। ಚಿನ್ನದಾನವ ಮಾಡಿ ಫಲವೇನು ॥ ಬಿನ್ನಣದಿಂದಲಿ ದೇಶದೇಶವ ತಿರುಗಿ । ಅನ್ನದಾನವ ಮಾಡಿ ಫಲವೇನು ॥ ೨ ॥ ಗೌಪ್ಯಗುಣ ಗುಟ್ಟು ಇಲ್ಲದ ಹೆಣ್ಣಿಗೆ । ರೂಪ ವಿದ್ದು ಫಲವೇನು ॥ ತಾಪತ್ರಯದ ಸಂಸಾರ ಕೆಡಿಸುವಂಥ ।

ಪಾಪಿ ಮಗನು ಇದ್ದು ಫಲವೇನು ||೩|| ತಾಂಡವ ಧನದಿಂದ ತಂದೆಮಾತು ಕೇಳದ । ತೊಂಡಮಗನು ಇದ್ದು ಫಲವೇನು || ಭಂಡು ಮಾಡಿ ಅತ್ತೆ ಮಾವನ ಬೈವ । ತುಂಡುಸೊಸೆಯಿದ್ದು ಫಲವೇನು || ೪ || ಸ್ನಾನಕ್ಕೆ ಪಾನಕ್ಕೆ ಆಗುವ ತಿಳಿನೀರು । ಕಾನನಮೊಳಗಿದ್ದು ಫಲವೇನು || ಆನಂದ ಮೂರುತಿ ಪುರಂದರವಿಠಲನ । ನೆನೆಯದ ತನುವಿದ್ದು ಫಲವೇನು ||೫||

## ೨೨೯ ರಾಗ ಧನ್ಯಾಸಿ ಆದಿತಾಳ

ಮೋಸಹೋದೆನಲ್ಲ । ತಿಳಿಯದೆ । ಮೋಸಹೋದೆನಲ್ಲ || ಪ || ಕ್ಲೇಶ ಪಾಶವನು ನಾಶಮಾಡುವ । ಶ್ರೀಶನಂಘ್ರಿಗಳ ಲೇಸಾಗಿ ಸ್ಮರಿಸದೆ ||ಅ|| ಕಾಯದಾಸೆಯಿಂದ ಕಂಡದ್ದು ಬೇಡಿ ಶ್ವಾನನಂತೆ। ಮಾಯಪಾಶದಲಿ ಸಿಲುಕಿ ನಾನು ಮಾರಮಣನೆ ನಿನ್ನ ಧ್ಯಾನವ ಮಾಡದೆ ||೧|| ಪುಷ್ಪ ಜಾಜಿಗಳನು ತಂದು ಭಕ್ತಿಭಾವದಿಂದ । ಕೃಷ್ಣಾವತಾರನ ಪೂಜೆಯಮಾಡಿ ವಿಷ್ಣುಲೋಕವನು ಸೂರೆಗೊಳ್ಳದೆ ||೨|| ಸತಿಸುತಾದಿ ಬಂಧುಬಳಗ ಹಿತವ ನುಡಿವರ್ಯಾರೋ । ಗತಿ ನೀನೆ ತಂದೆತಾಯಿ ನೀನೆ ಸದ್ಗತಿ ಈಯೊ ಪುರಂದರವಿಠಲ ||೩||

## ೨೩೦ ರಾಗ ಕೇದಾರಗೌಳ ಛಾಪುತಾಳ

ನಾನೇಕೆ ಪರದೇಶಿ ನಾನೇಕೆ ಬಡವನು || ಪ || ಎನ್ನ । ಮಾನಾಭಿಮಾನಕ್ಕೆ ವಿಠಲ ನೀನಿರಲಾಗಿ || ಅ || ಮೂರುಲೋಕದ ಅರಸು ಶ್ರೀಹರಿ ಎನ್ನ ತಂದೆ । ವಾರಿಜಮುಖಿ ಲಕುಮಿ ಎನ್ನ ತಾಯಿ || ಮೂರು ಅವತಾರದ ಹನುಮಂತ ಎನ್ನ ಗುರು । ಹರಿಭಕ್ತಜನರೆಲ್ಲ ಬಂಧುಬಳಗಿರಲಾಗಿ ||೧|| ಇಪ್ಪತ್ತನಾಲ್ಕು ಅಕ್ಷರವೆಂಬೊ ಹಳೆನಾಣ್ಯ । ಮುಪ್ಪದಿಂದಲಿ ಕುಳಿತು ಉಣಲು ಬಹುದು || ತಪ್ಪದೆ ನವವಿಧ ಭಕ್ತಿ ಜ್ಞಾನಗಳಿಂದ । ಮುಪ್ಪು ಇಲ್ಲದ ಭಾಗ್ಯ ಎನ್ನಲ್ಲಿ ಇರಲಾಗಿ || ೨ || ನಿನ್ನ ನಂಬಿದವರಿಗೊಲಿವೆಯೋ ಶ್ರೀಹರಿ । ನಿನಗಿಂತ ಇನ್ನು ಒಲಿವರು ಇಲ್ಲವೊ|| ಪನ್ನಗಶಯನ ಶ್ರೀಪುರಂದರವಿಠಲನ ಚರಣ । ಅನುಮಾನವಿಲ್ಲದೆ ಎನ್ನ ಶಿರದಲ್ಲಿರಲಾಗಿ ||೩||

## ೨೩೧ ರಾಗ ಯರಕಲಕಾಂಭೋಜಿ ಝಂಪೆತಾಳ

ಒಂದೇ ಮನದಿ ಭಜಿಸು ವಾಗ್ದೇವಿಯ||ಪ|| ಇಂದು ಮತಿ ಕೊಡುವಳು ಹರಿಯ ಧ್ಯಾನವಲಿ || ಅ || ಹಿಂದೆ ಪ್ರಲ್ಹಾದನು ಕಮಲಜನ ಸತಿಗೆರಗಿ | ನಿಂದು ಆರಾಧಿಸಲು ಹರಿ ವಿಶ್ವನೆಂದು || ಬಂದ ವಿಘ್ನವ ಕಳೆದು ಭಾವ ಶುದ್ಧಿಯನಿತ್ತು | ಪೊಂದಿಸಿದಳಾಗ ಶ್ರೀಹರಿಯ ಚರಣದಲಿ ||೧|| ಅಂದು ದಶಮುಖನನುಜ ವಂದಿಸವೆ ವಾಣಿಯನು | ನಿಂದು ತಪವನು ಗೈಯ್ಯೆ ಬಹುಕಾಲವು|| ಅಂದದಿಂದಜ ಮೆಚ್ಚಿ ವರವಧಿಕ ಬೇಡೆನಲು| ನಿಂದು ಜಿಹ್ವೆಯಲಿ ನಿದ್ರೆಯ ಬೇಡಿಸಿದವಳು ||೨|| ಅರಿತು ಭಜಿಸಲು ಬಿಡದೆ ಅಜನ ಅರಸಿಯ ನಿತ್ಯ | ಗುರುತರವಾದ ವಾಕ್ಸಿದ್ಧಿಯನಿತ್ತು || ತ್ವರಿತದಿ ಪುರಂದರ ವಿಠಲನ ಸೇವೆಯೊಳಿರಿಸಿ| ಪರತತ್ತ್ವವಾದ ಕಥಾಮೃತ ನುಡಿಸುವಳು ||೩||

## ೨೩೨ ರಾಗ ದರ್ಬಾರು ಅಟತಾಳ

ಈ ತನುವ ನಂಬಲುಬೇಡ ಜೀವವೆ ||ಪ|| ಅನುವಾಗಿ ನಿನ್ನಂಗಕೆ ಕೆಲ ಕಾಲ ತೋರುವುದು | ಅನುವಿಲ್ಲದಾಗ ಈ ತನುವೆ ನಿನಗೆ ವೈರಿ || ಅ || ಜರೆಯು ಮರಣದಿಂದ ಭರಿತವಾದುದೀ ಕಾಯ | ಸ್ಥಿರವೆಂದು ನಂಬಿ ನೀ ಮರುಳಾಗಬೇಡ ||೧|| ಧನಧಾನ್ಯ ಪಶುಪತ್ನಿ ಸ್ಥಿರವೆಂದು ತಿಳಿದು | ಮನುಮಥನಯ್ಯನ ಮರೆಯದೆ ಮನವೆ||೨|| ಶರಣೆಂದವರ ಕಾವ ಗರುಡಕೇತನ ನಮ್ಮ| ಪುರಂದರವಿಠಲನ್ನ ಮರೆಯದೆ ಮನವೆ ||೩||

## ೨೩೩ ರಾಗ ಸುರುಟಿ ಆದಿತಾಳ

ಕೊಡುವ ಕರ್ತು ಬೇರೆ | ಇರುತಿರೆ | ಬಿಡು ಬಿಡು ಚಿಂತೆಯನು ||ಪ|| ಬಡತನೈಶ್ವರ್ಯ ಎರಡಕ್ಕೆ ಕಾರಣ | ಒಡೆಯ ಶ್ರೀವೆಂಕಟರಮಣನು ತಾನೆ || ಅ || ಜನನವಾಗದ ಮುನ್ನ | ಜನನಿಯ | ತನುವಿನೊಳಗೆ ಪಾಲ|| ಜನನವಾದ ಬಳಿಕ ಜನನಿಯ ಮೊಲೆಯುಣಿಸುತ| ತುಳಿಯ ತುಳಿ ಬೆಳೆಸುವ ಜನವ ||೧|| ಹೆಣ್ಣು ಮಣ್ಣು ಹೊನ್ನು | ಈ ಮೂರನು |

ಮುನ್ನ ಪಡೆಯಲಿಲ್ಲ ॥ ಅನ್ಯರ ನೋಡಿ ಸಹಿಸಲಾರದೆ । ಖಿನ್ನನಾಗಿ ನೀ ಬಳಲವುದೇಕೆ ॥ ೨ ॥ ತಂಪ ಫಲಗಳಿಲ್ಲದೆ । ಇರುತಿರೆ। ತಂದು ಬಯಸ ಲುಂಟೆ ॥ ತಂದೆ ಪುರಂದರವಿಠಲರಾಯನ ದಯ ಬರೆ । ಅಂದಿಗೆ ಇಹಪರ ಸುಖಭೋಗ ॥ ೩ ॥

### ೨೩೪ ರಾಗ ಕೇದಾರಗೌಳ ಅಟತಾಳ

ನಾಯಿ ಬಂದವಪ್ಪ ಅಣ್ಣ ಅತ್ತಲಾಗಿರಿ ॥ಪ॥ ನಾಯಿ ಅಂದರೆ ನಾಯಿ ಅಲ್ಲ । ಮಾನವ ಜನ್ಮದ ಹೀನ ನಾಯಿ ॥ಅ॥ ಕೊಟ್ಟ ಸಾಲವ ಕೊಡದವ ನಾಯಿ। ಇಟ್ಟ ಭಾಷೆಯ ತಪ್ಪುವ ನಾಯಿ॥ ಕಟ್ಟೆಮೇಲೆ ಕುಳಿತುಕೊಂಡು। ಅಟ್ಟಹಾಸದಿ ಬೊಗಳುವ ನಾಯಿ ॥ ೧ ॥ ಕೊಟ್ಟು ಕುದಿಯುವೋ ಕೆಟ್ಟ ನಾಯಿ । ಇಟ್ಟ ಅನ್ನವ ಹಂಗಿಪ ನಾಯಿ ॥ ಪುಟ್ಟ ಮಾತೆಗರ್ಭದಲ್ಲಿ ಕೆಟ್ಟ ಕೃತ್ಯವ ಮಾಳ್ಪವ ನಾಯಿ ॥೨॥ ಪಟ್ಟ ಸ್ತ್ರೀಯಳ ಬಿಟ್ಟಹ ನಾಯಿ । ಬಿಟ್ಟ ಸ್ತ್ರೀಯಳ ಆಳ್ವ ನಾಯಿ ॥ ದಿಟ್ಟ ಶ್ರೀಪುರಂದರವಿಠಲರಾಯನ ಮುಟ್ಟಿ ಭಜಿಸದೆ ಹೋದ ನಾಯಿ ॥೩॥

### ೨೩೫ ರಾಗ ಶಂಕರಾಭರಣ ಆದಿತಾಳ

ಹರಿನಾರಾಯಣ ಹರಿನಾರಾಯಣ ಹರಿನಾರಾಯಣ ಎನು ಮನವೆ ॥ ॥ಪ॥ ನಾರಾಯಣನೆಂಬ ನಾಮವ ಬೀಜವ ನಾರದ ಬಿತ್ತಿದ ಧರೆಯೊಳಗೆ॥ ॥ ಅ ॥ ತರಳ ಧ್ರುವನಿಂದ ಅಂಕುರಿಸಿತು ಅದು । ವರ ಪ್ರಹ್ಲಾದನಿಂದ ಮೊಳಕೆ ಆಯ್ತು ॥ ಧರಣೀಶ ರುಕ್ಮಾಂಗದನಿಂದ ಚಿಗುರಿತು । ಕುರುಪಿತಾ ಮಹನಿಂದ ಹೂವಾಯ್ತು ॥ ೧ ॥ ವಿಜಯನ ಸತಿಯಿಂದ ಫಲವಾಯಿತು ಅದು । ಗಜರಾಜನಿಂದ ದೋರೆ ಹಣ್ಣಾಯ್ತು ॥ ದ್ವಿಜ ಶುಕಮುನಿಯಿಂದ ಫಲ ಪಕ್ವಾಯಿತು । ಅಜಮಿಳ ತಾನುಂಡು ರಸ ಸವಿದ ॥ ೨ ॥ ಕಾಮಿತ ಫಲವೀವ ನಾಮವೊಂದಿರಲಿಕ್ಕೆ। ಹೋಮ ನೇಮ ಜಪತಪವೇಕೆ॥ ಸ್ವಾಮಿ ಶ್ರೀಪುರಂದರವಿಠ್ಠಲನಾಮವ । ನೇಮದಿಂದ ನೆನೆಮನವೆ ॥೩॥

### ೨೩೬ ರಾಗ ಸಾವೇರಿ ಛಾಪುತಾಳ

ನಾರಾಯಣ ನಿನ್ನ ನಾಮಾಮೃತವನು ನಾಲಿಗೆಯಲ್ಲಿ ನಿಲ್ಲಿಸಯ್ಯ ॥ ॥ಪ॥ ಧರಾಧರನಿಭ ಚಾರು ಶ್ಯಾಂ । ಗಾರಶೇಖರ ತರಳ ನಾರಸಿಂಹ ॥ಅ॥

ನಾರದಸನ್ನುತ ನೀರಜನಾಭ ಸುಹಾರ ಉದಾರ ಅಪಾರ ದಯಾಕರ। ಭೂರಮಣೀಶ ವಿಚಾರವಿದೂರ ಮುರಾರಿ ತ್ರಿವಿಕ್ರಮನೆ॥ ಸೇರಿದೆ ನಿನ್ನನು ಕೋರಿದ ವರಗಳ ಬೀರುವೆನೆಂದು ವಿಚಾರ ಬಿಡಿಸೊ ಎನ್ನ। ಮಾರಜನಕ ನಿನ್ನಾದರದಲಿ ಎನ್ನ ಸೆರೆ ತೆಗೆಯೋ ಶ್ರೀಶೂರತನಯ ಹರಿ ||೧|| ಅಂಡಜ ವಾಹನ ಕುಂಡಲಿಶಯನ ಪ್ರಚಂಡವಿಕ್ರಮ ರಿಪುಖಂಡನ ಈ ಕ್ಷಿತಿ। ಮಂಡಲದೊಳು ಉದ್ದಂಡ ದೈತ್ಯರ ದಂಡಿಪ ನರಹರಿಯೇ॥ ಪುಂಡರೀ ಕಾಕ್ಷ ವೇದಾಂತ ರಕ್ಷಣ ಮಣಿಕುಂಡಲಧರ ಅಖಂಡಲನುತ ರವಿ। ಮಂಡ ಲಾಶ್ರಿತ ಬ್ರಹ್ಮಾಂಡ ನಾಯಕ ನಿನ್ನ ತೊಂಡನ ರಕ್ಷಿಸೊ ಪಾಂಡವಪ್ರಿಯ ಹರಿ ||೨|| ಮಂದರಧರ ಗೋವಿಂದ ಜನಾರ್ದನ ಇಂದುವದನ ಮಕರಂದ ಭೂಷಣ ಗೋ। ವೃಂದಗಳಿಗೆ ಆನಂದವ ತೋರುವ ಅಂತರಂಗದಿ ನೀನೆ ಕಂದನ ಲಾಲಿಸು॥ ಇಂದಿಗೆ ಎನ್ನನು ಸಲಹಬೇಕೆಂದು ಬೇಡುವೆ ಮುಚು ಕುಂದವರದ। ತಂದೆ ಎನ್ನ ರಕ್ಷಿಸೊ ದೀನ ಬಂಧು ಶ್ರೀಪುರಂದರ ವಿಠಲ || ೩ ||

## ೨೩೬ ರಾಗ ಕಾಂಭೋಜಿ ಝಂಪೆತಾಳ

ನರಸಿಂಹ ಮಂತ್ರವೊಂದಿರಲು ಸಾಕು। ದುರಿತ ಕೋಟಿಯ ತರಿದು ಭಾಗ್ಯವನು ಕೊಡುವ ॥ ಪ ॥ ಶಿಶುವಾದ ಪ್ರಹ್ಲಾದನ ಬಾಧೆ ಬಿಡಿಸಿದ ಮಂತ್ರ। ಅಸುರಕುಲದವರಿಗೆ ಶತ್ರು ಮಂತ್ರ॥ ವಸುಧೆಯೊಳು ಪಾತಕಿ ಗಳಘವ ಹೀರುವ ಮಂತ್ರ। ಪಶುಪತಿಗೆ ಪ್ರಿಯವಾದ ದಿವ್ಯ ಮಂತ್ರ॥ ನರಸಿಂಹ॥ ೧ ॥ ದಿಟ್ಟ ಧ್ರುವರಾಯನಿಗೆ ಪಟ್ಟಗಟ್ಟಿದ ಮಂತ್ರ। ಶಿಷ್ಟ ವಿಭೀಷಣನ ಪೊರೆದ ಮಂತ್ರ ॥ ಕಟ್ಟಕಡೆಯಲಿ ಅಜಾಮಿಳನ ಸಲಹಿದ ಮಂತ್ರ। ಮುಟ್ಟಿ ಭಜಿಸಿದವರಿಗೆ ಮೋಕ್ಷಮಂತ್ರ॥ ನರಸಿಂಹ ||೨|| ಹಿಂಡು ಭೂತವ ಕಡಿದು ತುಂಡುಮಾಡುವ ಮಂತ್ರ। ಕೊಂಡಾಡೊ ಲೋಕಕೆ ಪ್ರಚಂಡ ಮಂತ್ರ॥ ಗಂಡುಗಲಿ ಕದನ ಉದ್ದಂಡವಿಕ್ರಮ ಮಂತ್ರ। ಪುಂಡರೀ ಕಾಕ್ಷ ಪುರಂದರವಿಠಲಮಂತ್ರ॥ ನರಸಿಂಹ ॥ ೩ ॥

## ೨೩೭ ರಾಗ ರೇಗುಪ್ತಿ ಅಟತಾಳ

ಸ್ಮರಣೆ ಒಂದೇ ಸಾಲದೆ। ಗೋವಿಂದನ। ನಾಮ ಒಂದೇ ಸಾಲದೆ ॥ಪ॥ ಪರಮಪುರುಷನನ್ನು ನೆರೆ ನಂಬಿದವರಿಗೆ। ದುರಿತಬಾಧೆಗಳ ಗುರುತು

ತೋರುವುದೆ ||ಅ|| ಕಡು ಮೂರ್ಖನಾದರೇನು | ದುಷ್ಕರ್ಮದಿಂ | ತೊಡೆದಾತನಾದರೇನು|| ಜಡನಾದರೇನಲ್ಪ ಜಾತಿಯಾದರೇನು| ಬಿಡದೆ ಪ್ರಹ್ಲಾದನ್ನ ಸಲಹಿದ ಹರಿಯು ||೧|| ಪಾತಕಿಯಾದರೇನು | ಸರ್ವಪ್ರಾಣಿ ಘಾತಕಿಯಾದರೇನು | ನೀತಿಯು ಬಿಟ್ಟು ದುಷ್ಕರ್ಮಿಯಾದರೇನು | ಪ್ರೀತಿಯಿಂದಜಾಮಿಳನ ಸಲಹಿದ ಹರಿಯು ||೨|| ಸಕಲ ತೀರ್ಥಯಾತ್ರೆಯ | ಮಾಡಿದಂಥ| ನಿಖಿಳ ಪುಣ್ಯದ ಫಲವು || ಭಕುತಿಪೂರ್ವಕವಾಗಿ ಬಿಡದನುದಿನದಲ್ಲಿ | ಪ್ರಕಟ ಪುರಂದರವಿಠಲನ ನಾಮದ ||೩||

## ೨೩೮ ರಾಗ ನಾದನಾಮಕ್ರಿಯೆ ಛಾಪುತಾಳ

ಮನವ ಶೋಧಿಸಬೇಕೋ ನಿಚ್ಚಾ | ದಿನ | ದಿನ ಮಾಡುವ ಪಾಪ ಪುಣ್ಯದ ವೆಚ್ಚ||ಪ|| ಧರ್ಮ ಅಧರ್ಮ ವಿಂಗಡಿಸಿ | ಅ | ಧರ್ಮದ ನರಗಳ ಬೇರ ಕತ್ತರಿಸಿ || ನಿರ್ಮಲಾಚಾರದಿ ಚರಿಸಿ | ಪರ | ಬೊಮ್ಮ ಮೂರುತಿ ಪಾದಕಮಲವ ಭಜಿಸಿ ||೧|| ತನುವ ಖಂಡಿಸಿ ಒಮ್ಮೆ ನಾಣೋ | ನಿನ್ನ | ಮನವ ದಂಡಿಸಿ ಪರಮಾತ್ಮನ್ನ ಕಾಣೋ || ಕೊನೆಗೆ ನಿನ್ನೊಳಗೆ ನೀ ಜಾಣೋ | ಮುಕ್ತಿ | ನಿನಗೆ ದೂರಿಲ್ಲವು ಒಂದೇ ಗೇಣೋ ||೨|| ಆತನವರಿಗೆ ಕೇಡಿಲ್ಲ | ಅವ | ಪಾತಕ ಪತಿತಸಂಗವ ಮಾಡ್ವನಲ್ಲ || ನೀತಿವಂತರು ಕೇಳಿರೆಲ್ಲ| ನಮ | ಗಾತನೆ ಗತಿಯೀವ ಪುರಂದರವಿಠಲ ||೩||

## ೨೩೯ ರಾಗ ಧನ್ಯಾಸಿ ಅಟತಾಳ

ಕಣ್ಣಾರೆ ಕಂಡೆನಚ್ಯುತನ | ಕಂಚಿ | ಪುಣ್ಯಕೋಟಿ ಕರಿರಾಜವರದನ || ||ಪ|| ವರ ಮಣಿಮುಕುಟಮಸ್ತಕನ| ಸರ್ವ| ಸುರ ಸನಕಾದಿವಂದಿತ ಪಾದಯುಗನ || ತರುಣಿ ಲಕ್ಷ್ಮೀಮನೋಹರನ | ಪೀತಾಂ | ಬರದುಡುಗೆಯಲಿ ರಂಜಿಪ ವಿಗ್ರಹನ ||೧|| ಕಸ್ತೂರಿತಿಲಕನೊಸಲಿನ | ತೋರ | ಮುತ್ತಿನ ಹಾರ ಪದಕಭೂಷಣನ| ಎತ್ತಿದಭಯಹಸ್ತದವನ| ತನ್ನ | ಭಕ್ತರ ಸ್ತುತಿಗೆ ಹಾರೈಸಿ ಹಿಗ್ಗುವನ ||೨|| ನೀಲಮೇಘಶ್ಯಾಮನ | ಬಾಲ | ಲೋಲ ಮಕರ ಕುಂಡಲ ಧರಿಸಿಹನ || ಮೂಲೋಕದೊಳಗೆ ಚೆನ್ನಿಗನ | ಉಮಾ |

ಲೋಲಜ ವಂದ್ಯ ವೈಕುಂಠವಲ್ಲಭನ ॥ ೩ ॥ ಭಾಸುಕೋಟಿತೇಜದವನ । ಭವ । ಕಾನನ ರಾಶಿಗೆ ಹವ್ಯವಾಹನನ ॥ ದಾನವರೆದೆಯ ದಲ್ಲಣನ । ಮುನಿ । ಮಾನಸಹಂಸ ಎಂದೆನಿಸಿಕೊಂಬವನ ॥ ೪ ॥ ತುಂಗಚತುರ್ಭುಜವವನ । ಶುಭ । ಮಂಗಳ ರೇಖೆ ಅಂಗಾಲಲೊಪ್ಪುವನ ॥ ಶೃಂಗಾರಹಾರಕಂಧರನ । ದೇವ । ಗಂಗೆಯ ಪಿತ ಪುರಂದರವಿಠ್ಠಲನ ॥೫॥

## ೨೪೦ ರಾಗ ರೇಗುಪ್ತಿ ಝಂಪೆತಾಳ

ಯಾರೂ ಸಂಗಡ ಬಾಹೋರಿಲ್ಲ। ನಾರಾಯಣನ ನಾಮ ನೆರೆ ಬಾಹೋದಲ್ಲದೆ ॥ ಪ ॥ ಹೊತ್ತು ನವಮಾಸ ಪರ್ಯಂತರವು ಗರ್ಭದಲಿ । ಹೆತ್ತು ಬಲು ನೋವು ಬೇನೆಗಳಿಂದಲಿ ॥ ತುತ್ತು ಬುತ್ತಿಯ ಕೊಟ್ಟು ಸಲಹಿದಂಥಾ ತಾಯಿ । ಅತ್ತು ಕಳುಹುವಳಲ್ಲದೆ ನೆರೆ ಬಹಳೆ ॥ ೧ ॥ ದೇವ ವಿಪ್ರರು ಅಗ್ನಿ ಸಾಕ್ಷಿಯಿಂದಲಿ ತನ್ನ । ಭಾವಶುದ್ಧದಿ ಧಾರೆಯೆರೆಸಿಕೊಂಡ ॥ ದೇವಿ ತನ್ನತಿ ತಲೆಗೆ ಕೈಯಿಟ್ಟುಕೊಂಡು ಇ । ನ್ನಾವ ಗತಿಯೋ ಎಂದು ಅಳುತುಳಿವಳಲ್ಲದೆ ॥೨॥ ಮತ್ತೆ ಪ್ರಾಣನು ತನುವ ಬಿಟ್ಟು ಹೋಗುವಾಗ । ಎತ್ತಿವನ ಹೊರಗೆತ್ತಿ ಹಾಕೆಂಬರು ॥ ಎತ್ತಿದಾ ಕಸಕಿಂತ ಕಡೆಯಾಯಿತೀ ದೇಹ । ವಿತ್ತವೆಷ್ಟಿದ್ದರೂ ಫಲವಿಲ್ಲ ಪ್ರಾಣಿ ॥ ೩ ॥ ಪುತ್ರ ಮಿತ್ರರು ಸಕಲ ಬಂಧುಗಳು ಸತಿಯರು। ಹತ್ತಿರದೊಳ್ ನಿಂತು ನೋಡುವರಲ್ಲದೆ॥ ಮೃತ್ಯು ದೇವಿಯು ಬಂದು ಪ್ರಾಣವನು ಸೆಳೆವಾಗ । ಜಾತ್ರೆ ಜನರಷ್ಟಿದ್ದು ಏನು ಮಾಡುವರು ॥ ೪ ॥ ಯಮನ ದೂತರು ಬಂದು ಪಾಶವನು ತಗಲ್ಹಾಕಿ । ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು ॥ ವಿಮುಖನಾಗಿ ತಾನು ವ್ಯಥೆಯಿಂದ ಪೋಪಾಗ । ಕಮಲಾಕ್ಷ ಪುರಂದರವಿಠಲ ನೀನಲ್ಲದೆ ॥೫॥

## ೨೪೧ ರಾಗ ನಾದನಾಮಕ್ರಿಯೆ ಛಾಪುತಾಳ

ರಾಗಿ ತಂದಿರ್ಯಾ । ಭಿಕ್ಷಕೆ । ರಾಗಿ ತಂದಿರ್ಯಾ ॥ಪ॥ ಯೋಗ್ಯರಾಗಿ ಭೋಗ್ಯರಾಗಿ । ಭಾಗ್ಯವಂತರಾಗಿ ನೀವು ॥ ಅ ॥ ಅನ್ನದಾನವ ಮಾಡುವರಾಗಿ । ಅನ್ನ ಛತ್ರವನಿಟ್ಟವರಾಗಿ ॥ ಅನ್ಯವಾರ್ತೆಯ ಬಿಟ್ಟವರಾಗಿ । ಅನುದಿನ ಭಜನೆಯ ಮಾಡುವರಾಗಿ ॥ ೧ ॥ ಮಾತಾಪಿತೃಗಳ ಸೇವಿಸರಾಗಿ ।

ಪಾಪಕರ್ಮವ ಬಿಟ್ಟವರಾಗಿ । ಜಾತಿಯಲ್ಲಿ ಮಿಗಿಲಾದವರಾಗಿ। ನೀತಿ ಮಾರ್ಗದಲಿ ಖ್ಯಾತರಾಗಿ ॥ ೨ ॥ ಗುರುಕಾರುಣ್ಯವ ಪಡೆದವರಾಗಿ । ಗುರು ವಿನ ಮರ್ಮವ ತಿಳಿದವರಾಗಿ॥ ಗುರುವಿನ ಪಾದವ ಸ್ಮರಿಸುವರಾಗಿ। ಪರಮ ಪುಣ್ಯವ ಮಾಡುವರಾಗಿ ॥ ೩ ॥ ಶ್ರೀನಿವಾಸನ ಸ್ಮರಿಸುವರಾಗಿ । ಪ್ರಾಣ ರಾಯರ ದಾಸರಾಗಿ || ದಾನಕೆಂದು ಬಲು ಹೆದರಿರುವರಾಗಿ । ದೀನ ವೃತ್ತಿ ಯಲಿ ಹೀನರಾಗಿ ||೪|| ಪಕ್ಷ ಮಾಸ ವ್ರತ ಮಾಡುವರಾಗಿ । ಪಕ್ಷಿವಾಹನಗೆ ಪ್ರಿಯರಾಗಿ ॥ ಕುಕ್ಷಿಯಲಿ ಕಲುಷ ಇಲ್ಲದವರಾಗಿ । ಭಿಕ್ಷುಕರು ಅತಿ ತುಚ್ಛ ರಾಗಿ ॥ ೫ ॥ ವೇದ ಪುರಾಣವ ತಿಳಿದವರಾಗಿ । ಮೇದಿನಿಯಾಳುವರಂಥವ ರಾಗಿ ॥ ಸಾಧು ಧರ್ಮಗಳಾಚರಿಸುವರಾಗಿ । ಓದಿ ಗ್ರಂಥಗಳ ಪಂಡಿತರಾಗಿ॥ ||೬|| ಆರು ಮಾರ್ಗವ ಅರಿತವರಾಗಿ । ಮೂರು ಮಾರ್ಗವ ತಿಳಿದವರಾಗಿ ॥ ಭೂರಿತತ್ತ್ವವ ಬೆರೆದವರಾಗಿ । ಕ್ರೂರರ ಸಂಗವ ಬಿಟ್ಟವರಾಗಿ ||೭|| ಕಾಮ ಕ್ರೋಧವ ಅಳಿದವರಾಗಿ । ನೇಮ ನಿತ್ಯವ ಮಾಡುವರಾಗಿ ॥ ಆ ಮಹಾ ಪದವಿಯ ಸುಖಿಸುವರಾಗಿ । ಪ್ರೇಮದಿ ಕುಣಿಕುಣಿದಾಡುವರಾಗಿ ॥ ೮ ॥ ಸಿರಿರಮಣನ ಸದಾ ಸ್ಮರಿಸುವರಾಗಿ । ಗುರುತಿಗೆ ಬಾಹೋರಂಥವರಾಗಿ || ಕರಕರೆ ಸಂಸಾರವ ನೀಗುವರಾಗಿ । ಪುರಂದರವಿಠಲನ ಸೇವಿಪರಾಗಿ ||೯||

## ೨೪೨ ರಾಗ ಕಾಂಭೋಜಿ ಝಾಪುತಾಳ

ಏಕೆ ಮುರ್ಖನಾದ್ಯೋ । ಮನವೆ। ಏಕೆ ಮುರ್ಖನಾದ್ಯೋ ॥ಪ॥ ಕಾಕು ಬುದ್ಧಿಯ ಬಿಟ್ಟು । ಲೋಕನಾಯಕನ ನೆನೆ ಕಂಡ್ಯ ಮನವೆ ||ಅ|| ಹೆಂಡಿರು ಮಕ್ಕಳು ನಿನ್ನವರೆಂದು । ರೊಕ್ಕವಾದರು ಗಳಿಸಿಕೊಂಡು ॥ ಸೊಕ್ಕಿನಿಂದ ತಿರುಗುವೆಯೇನೊ ಮನವೆ ॥ ೧ ॥ ರಕ್ಕಸನ ದೂತರು ಬಂದು । ಲೆಕ್ಕ ವಾಯಿತು ಹೊರಡು ಎನಲು॥ ನಕ್ಕು ನಗುವರೆಲ್ಲ ಬಿಡಿಸುವರೇನೊ ಮನವೆ॥ ॥ ೨ ॥ ದಾನಧರ್ಮವನು ಮಾಡಿ । ಜ್ಞಾನಿಗಳ ಸೇವೆಗೈದು || ಜಾನಕೀ ಪತಿಯ ಪಾಡೊ ಜಾಣ ಮನವೆ ॥ ೩ ॥ ಸಾಧುಜನರ ಸಂಗವ ಮಾಡು । ಭೇದಾಭೇದವ ತಿಳಿದು ನೋಡು॥ ವಾದ ಬುದ್ಧಿಯ ಮಾಡದಿರು ಮನವೆ॥ ||೪|| ಅರಿಷಡ್ವರ್ಗದಾಸೆಯ ಬಿಟ್ಟು । ಪುರಂದರವಿಠಲನ ಧ್ಯಾನವ ಮಾಡಿ॥ ಹರಿಯ ಸೇರುವ ದಾರಿಯನ್ನು ನೋಡೊ ಮನವೆ ॥ ೫ ॥

## ೨೪೩ ರಾಗ ಖರಹರಪ್ರಿಯ ಆದಿತಾಳ

ತಿರುಪತಿ ವೇಂಕಟರಮಣ ನಿನ। ಗೇತಕೆ ಬಾರದು ಕರುಣ ||ಪ|| ನಂಬಿದೆ ನಿನ್ನಯ ಚರಣ। ಪರಿಪಾಲಿಸಬೇಕೋ ಕರುಣ । ಅ || ಅಳಗಿರಿಯಿಂದಲಿ ಬಂದ । ಸ್ವಾಮಿ । ಅಂಜನಗಿರಿಯಲಿ ನಿಂದ || ಕೊಳಲು ಧ್ವನಿಯೂದೋ ಚಂದ। ನಮ್ಮ। ಕುಂಡಲರಾಯ ಮುಕುಂದ ||೧|| ಬೇಟೆಯಾಡುತ ಬಂದ। ಸ್ವಾಮಿ। ಬೆಟ್ಟದ ಮೇಲೆ ನಿಂದ || ಮೀಟುಗಾರ ಗೋವಿಂದ |ಅಲ್ಲಿ| ಜೇನುಸಕ್ಕರೆಯನು ತಿಂದ || ೨ || ಮೂಡಲಗಿರಿಯಲಿ ನಿಂತ । ಮುದ್ದು । ವೆಂಕಟಪತಿ ಬಲವಂತ || ಈಡಿಲ್ಲ ನಿನಗೆ ಶ್ರೀಕಾಂತ । ಈ । ರೇಳುಲೋಕ ಕನಂತ ||೩|| ಆಡಿದರೆ ಸ್ಥಿರವಪ್ಪ । ಅ । ಬದ್ಧಗಳಾಡಲು ಒಪ್ಪ || ಬೇಡಿದ ವರಗಳನಿಪ್ಪ । ನಮ್ಮ ಮೂಡಲಗಿರಿ ತಿಮ್ಮಪ್ಪ || ೪ || ಅಪ್ಪವ ಅತಿರಸ ಮೆದ್ದ । ಸ್ವಾಮಿ । ಅಸುರರ ಕಾಲಲಿ ಒದ್ದ || ಸತಿಯ ಕೂಡಾಡುತಲಿದ್ದ । ಸ್ವಾಮಿ । ಸಕಲ ದುರ್ಜನರನು ಗೆದ್ದ ||೫|| ಬಗೆ ಬಗೆ ಭಕ್ಷ್ಯ ಪರಮಾನ್ನ। ನಾನಾ । ಬಗೆಯ ಸಕಲ ಶಾಲ್ಯನ್ನ || ಬಗೆ ಬಗೆ ಸೊಬಗು ಮೋಹನ್ನ । ನಮ್ಮ। ನಗುಮುಖದ ಸುಪ್ರಸನ್ನ ||೬|| ಕಾಶಿ ರಾಮೇಶ್ವರದಿಂದ । ಅಲ್ಲಿ । ಕಾಣಿಕೆ ಬರುವುದು ಚಂದ || ದಾಸರ ಕೂಡೆ ಗೋವಿಂದ । ಅಲ್ಲಿ । ದಾರಿ ನಡೆವುದೆ ಚಂದ || ೭ || ಎಲ್ಲಾ ದೇವರ ಗಂಡ । ಅವ । ಚಿಲ್ಲರೆ ದೈವದ ಮಿಂಡ || ಬಲ್ಲಿದವರಿಗೆ ಉದ್ದಂಡ । ಶಿವ । ಬಿಲ್ಲ ಮುರಿದ ಪ್ರಚಂಡ ||೮|| ಕಾಸು ತಪ್ಪಿದರೆ ಪಟ್ಟಿ । ಬಡ್ಡಿ । ಕಾಸು ಬಿಡದೆ ಗಂಟು ಕಟ್ಟಿ || ದಾಸನೆಂದರೆ ಬಿಡ ಗಟ್ಟಿ। ನಮ್ಮ । ಕೇಸಕ್ಕಿ ತಿಮ್ಮಪ್ಪಸೆಟ್ಟಿ||೯|| ದಾಸರ ಕಂಡರೆ ಪ್ರಾಣ । ತಾ । ಧರೆಯೊಳಗಧಿಕ ಪ್ರವೀಣ || ದ್ವೇಷಿಯ ಗಂಟಲಗಾಣ । ನಮ್ಮ । ದೇವಗೆ ನಿತ್ಯ ಕಲ್ಯಾಣ || ೧೦ || ಮೋಸಹೋಗುವನಲ್ಲಯ್ಯ । ಒಂದು। ಕಾಸಿಗೆ ಒಡ್ಡುವ ಕೈಯ || ಏಸು ಮಹಿಮೆಗಾರನಯ್ಯ । ನಮ್ಮ । ವಾಸುದೇವ ತಿಮ್ಮಯ್ಯ || ೧೧ || ಚಿತ್ರಜನಾಭ ಪರಾಕು । ನಿನ್ನ । ಚಿತ್ತದ ದಯ ಒಂದೆ ಸಾಕು || ಸತ್ಯ ವಾಹಿನಿ ನಿನ್ನ ವಾಕು । ನೀನು । ಸಕಲ ಜನರಿಗೆ ಬೇಕು||೧೨|| ಅಲ್ಲಲ್ಲಿ ಪರಿಷೆಯ ಗುಂಪು । ಮ । ತ್ತಲ್ಲಲ್ಲಿ ತೋಪಿನ ತಂಪು|| ಅಲ್ಲಲ್ಲಿ ಸೊಗಸಿನ ಸೊಂಪು । ಮ । ತ್ತಲ್ಲಲ್ಲಿ ಪರಿಮಳದಿಂಪು ||೧೩||

ಅಲ್ಲಲ್ಲಿ ಜನಗಳ ಕೂಟ । ಮ । ತ್ತಲ್ಲಲ್ಲಿ ಬ್ರಾಹ್ಮಣರೂಟ ॥ ಅಲ್ಲಲ್ಲಿ ಪಿಡಿವ ಕೋಲಾಟ । ಮ । ತ್ತಲ್ಲಿಂದ ಊರಿಗೆ ಓಟ ॥೬॥ ಪಾಪವಿನಾಶಿನಿ ಸ್ನಾನ। ಹರಿ । ಪಾದೋದಕವೇ ಪಾನ ॥ ಕೋಪತಾಪಗಳ ನಿಧಾನ । ನಮ್ಮ। ಪುರಂದರವಿಠಲನ ಧ್ಯಾನ ॥೭॥

## ೨೪೪ ರಾಗ ಮೋಹನಕಲ್ಯಾಣಿ ಅಟತಾಳ

ಚಿಕ್ಕವನೇ ಇವನು । ನಮ್ಮ ಕೈಗೆ । ಸಿಕ್ಕದೆ ಓಡುವನು ॥ಪ॥ ಅಕ್ಕಯ್ಯ ಮಕ್ಕಳು ಹುಟ್ಟುವ ಮರ್ಮವ । ಘಕ್ಕನೆ ಎನಕೂಡೆ ಹೇಳು ಹೇಳೆನು ತಾನೆ ॥ಅ॥ ನೀರಿಗೆ ಹೋಗುವಾಗ । ನಿಂತುಕೊಂಡು । ಯಾರೂ ಇಲ್ಲದೆ ಕರೆವ ॥ ದಾರಿಯಡ್ಡವ ಕಟ್ಟಿ ಕೂಡಿಕೊ ಎನುತಲಿ। ಹೋರಾಟವ ಮಾಡಿ ಗೋಳಾಡಿಸಿದನಮ್ಮ ॥ ಚಿಕ್ಕವನೇ ॥ ೧ ॥ ಮೊಸರನ್ನ ಕಡೆಯುವಾಗ । ಬೆನ್ನಿಲಿ ಬಂದು। ಕಣ್ಣ ಮುಚ್ಚಿ ಕಾಡುವ ॥ ಬೆಣ್ಣೆಯ ತಾರೆಂದು ಕುಚಗಳ ಪಿಡಿಯುತ । ಬಣ್ಣಿಸಿ ಬಣ್ಣಿಸಿ ಪ್ರಣಯ ಮಾಡಿದನಮ್ಮ ॥ ಚಿಕ್ಕವನೇ ॥೨॥ ನಿದ್ದೆಕಣ್ಣಿಲಿ ನಾನಿದ್ದೆ । ಗಂಡನೆಂದು । ಬುದ್ಧಿಯಿಲ್ಲದೆ ಕೂಡಿದೆ ॥ ಎದ್ದು ನೋಡಲು ಅವನ ಎಡಗಯ್ಯ ಪಿಡಿಯುತ್ತ । ಮುದ್ದು ಶ್ರೀಪುರಂದರವಿಠಲ ಕಾಣಮ್ಮ ॥ ಚಿಕ್ಕವನೇ ॥ ೩ ॥

## ೨೪೫ ರಾಗ ಶಂಕರಾಭರಣ ತ್ರಿಪುಟತಾಳ

ಸರ್ವಾಪರಾಧವ ಕ್ಷಮಿಸಯ್ಯ ಎನ್ನ । ಗರ್ವಾಂಧಕಾರವ ಬಿಡಿಸಿ ರಕ್ಷಿಸು॥ಪ॥ ಎಂದೆಂದು ಹಿರಿಯರ ನಿಂದಿಸಿದೆನು ಚೆಲ್ವ। ಚಂದನಗಂಧಿಯ ರೊಳು ಸರಸವಾಡಿದೆನು ॥ ಬಂಧು ಬಂದರೆ ಎನ್ನ ಬಿಗುವ ಬಿಂಕವ ತೋರ್ದೆ। ಬಂದೋಡ್ವರ್ರೈ ಎನ್ನ ಬೇಕೆಂದು ಕೋರದೆ ॥ ಕುಂದಕುಂಡಲದಂತ ಚಂದ ರದನ ಗೋ । ವಿಂದನ ಪಾದಾರವಿಂದವ ಸ್ಮರಿಸೆನು ॥ ಒಂದು ದಿನವು ನಾನು ಮಿಂದು ಮಡಿಯನುಟ್ಟು। ಗಂಧಪುಷ್ಪಾರ್ಚನೆಗಳ ಮಾಡೆನು ಎನ್ನ ॥ ೧ ॥ ಅನ್ನದಾನವ ಮಾಡಲರಿಯೆನು ನಾ ಮುನ್ನ । ಸ್ವರ್ಣದಾನದ ಮಾತು ಸೊಗಸದು ಕಿವಿಗೆ ॥ ಕನ್ಯಾದಾನದ ಮಾತು ಕನಸಿಲಿ ನಾ ಕೇಳೆ।

ಮುನ್ನಸರಿಯುವ ಮಹ ಮುಗ್ಧ ಕಾಣಯ್ಯ || ಉನ್ನತ ಗೋದಾನ ಭೂದಾನ ಮೊದಲಾದ್ದು| ಸನ್ಮತಿಯಲಿ ಕೊಟ್ಟು ಸುಖಿಸುವದರಿಯೆನು || ಅನ್ಯಾಯವ ಮಾಡಿ ಹರಿ ನಿನ್ನ ಮರೆಹೊಕ್ಕೆ | ಬೆಣ್ಣೆಕಳ್ಳನೆ ಮುದ್ದು ಚಿನ್ನ ಕೃಷ್ಣಯ್ಯ ||೨|| ಪಾಪಿಯರೊಳು ಅತಿ ಪಾಪಿಯೆಂತೆಂಬರು | ಕೋಪಿಯ ರೊಳು ಉಗ್ರ ಕೋಪಿ ನಾನೆ|| ಕೋಪತಾಪದ ವ್ಯಾಧಿಯನೆಲ್ಲ ಗುಣಮಾಡಿ| ಶ್ರೀಪತಿಯೆ ನೀ ಸಲಹೋ ಕರುಣದಿ || ಈ ಪರಿಯಲಿ ಮೇಲುಕೋಟೆ ಇಂದಿರೆವರ | ಆಪದ್ಬಂಧುವೆ ಭಕ್ತರಘಹರನೆ|| ತಾಪತ್ರಯಗಳ ಬಿಡಿಸಿ ಚೆಲ್ವ ರಾಯ| ಗೋಪಾಲಮೂರುತಿ ಪುರಂದರವಿಠಲ ||೩||

### ೨೪೬ ರಾಗ ಆನಂದಭೈರವಿ ತ್ರಿಪುಟತಾಳ

ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯ ನಾಮವು|| ಪ || ಜನ್ಮ ಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ||ಅ|| ಭಕ್ತಿರಸದಲಿ ತನ್ನ ಚಿತ್ತ ಪರವಶನಾಗಿ | ಅಚ್ಯುತನ ನಾಮವ ಬಚ್ಚಿಟ್ಟುಕೊಂಡವಗಲ್ಲದೆ || ೧ || ಕಂತುಪಿತನ ದಿವ್ಯನಾಮ ಅಂತರಂಗದೊಳಿಟ್ಟು | ಚಿಂತೆಯೆಲ್ಲ ಬಿಟ್ಟು ನಿಶ್ಚಿಂತನಾದವಗಲ್ಲದೆ ||೨|| ಕಣ್ಣೊಳಗಿದ್ದ ಮೂರುತಿ ತನ್ನೊಳಗೆ ತಂದು | ಘನ್ನಪೂರ್ಣ ಪುರಂದರವಿಠಲನ ಭಜಿಸದೆ ||೩||

### ೨೪೭ ರಾಗ ಗೌಳೀಪಂತು ಅಟತಾಳ

ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೋ ||ಪ|| ಬಾಯ ಮುಚ್ಚಬೇಡಿ ನಾರಾಯಣನ ನೆನೆಯಿರೊ || ಅ || ನಿತ್ಯವಿಲ್ಲ ನೇಮವಿಲ್ಲ | ಮತ್ತೆ ದಾನ ಧರ್ಮವಿಲ್ಲ || ವ್ಯರ್ಥವಾಗಿ ಕೆಡದೆ ಪುರು | ಷೋತ್ತಮನ ನೆನೆಯಿರೊ ||೧|| ಕದ್ದು ಪುಸಿಯನಾಡಿ ಅಪ್ರ | ಬುದ್ಧಿಯಿಂದ ಕೆಡಲುಬೇಡಿ || ಬುದ್ಧಿವಂತ ರಾಗಿ ಅನಿ | ರುದ್ಧನನ್ನು ನೆನೆಯಿರೊ || ೨ || ಭಕ್ತಿ ಕೊಡುವ ಮುಕ್ತಿ ಕೊಡುವ | ಮತ್ತೆ ಸಾಯುಜ್ಯ ಕೊಡುವ || ಕರ್ತ ನಮ್ಮ ಪುರಂದರ | ವಿಠ್ಠಲನ್ನ ನೆನೆಯಿರೊ || ೩ ||

### ೨೪೮ ರಾಗ ಮುಖಾರಿ ಝಂಪೆತಾಳ

ಯಾರಿದ್ದರೇನಯ್ಯ ನೀನಲ್ಲದೆನಗಿಲ್ಲ | ಕಾರುಣ್ಯನಿಧಿ ಹರಿಯೆ ಕೈಯ ಬಿಡಬೇಡ ||ಪ|| ದುರುಳ ಕೌರವನನುಜ ದ್ರುಪದಜೆಯ ಸೀರೆಯನು | ಕರ

ದಿಂದ ಸೆಳೆಯುತಿರೆ ಪತಿಗಳೆಲ್ಲ || ಗರಹೊಯ್ದಂತಿರ್ದರಲ್ಲವೇ ನರಹರಿಯೆ| ಕರುಣದಿಂ ನೀನಲ್ಲದಿನ್ನಾರು ಕಾಯ್ದವರು || ೧ || ಅಂದು ನೆಗಳಿನ ಬಾಧೆ ಯಿಂದ ಗಜರಾಜನನು| ತಂದೆ ನೀ ವೈಕುಂಠದಿಂದ ಬಂದು|| ಇಂದಿರೇಶನೆ ಚಕ್ರದಿಂದ ನೆಗಳಿನ ಬಾಯ| ಸಂಧಿಯನು ಸೀಳಿ ಪೊರೆದೆಯಲ್ಲೊ ಹರಿಯೆ || ೨ || ಅಜಮಿಳನು ಕುಲಗೆಟ್ಟು ಕಾಲದೂತರು ಬರಲು | ನಿಜಸುತನ ಕರೆಯೆ ನೀನತಿ ವೇಗದಿ || ತ್ರಿಜಗದೊಡೆಯನೆ ಪುರಂದರವಿಠಲ ಕರುಣ ದಲಿ | ನಿಜದೂತರನು ಕಳುಹಿ ಕಾಯ್ದೆ ಶ್ರೀ ಹರಿಯೆ ||೩||

## ೨೪೯ ರಾಗ ಮುಖಾರಿ ಝಂಪೆತಾಳ

ಏನು ಮಾಡಿದರೇನು ಭವ ಹಿಂಗದು| ದ ನವಾಂತಕ ನಿನ್ನ ದಯವಾಗ ದನಕ ||ಪ|| ಅರುಣೋದಯದಲೆದ್ದು ಅತಿ ಸ್ನಾನಗಳ ಮಾಡಿ | ಬೆರಳನೆಣಿ ಸಿದೆ ಅದರ ನಿಜವರಿಯದೆ || ಚರಣ ಸಾಷ್ಟಾಂಗವನು ಮಾಡಿ ನಾ ದಣಿ ದೆನೊ| ಹರಿ ನಿನ್ನ ಕರುಣಾಕಟಾಕ್ಷವಾಗದನಕ||೧|| ಶ್ರುತಿ ಶಾಸ್ತ್ರ ಪುರಾಣ ಗಳನೋದಿ ಬೆಂಡಾದೆ | ಅತಿ ಶೀಲಗಳನೆಲ್ಲ ಮಾಡಿ ದಣಿದೆ || ಗತಿಯ ಪಡೆವೆನೆಂದು ಕಾಯ ದಂಡಿಸಿದೆನೊ | ರತಿಪತಿಪಿತ ನಿನ್ನ ದಯವಾಗ ದನಕ ||೨|| ಧ್ಯಾನವನು ಮಾಡಿದೆನು ಮೌನವನು ತಾಳಿದೆನು | ನಾನು ಪುರುಷಾರ್ಥಕೆ ಮನವನಿಕ್ಕಿ || ಅನಾಥಬಂಧು ಶ್ರೀಪುರಂದರವಿಠ್ಠಲನ | ಧ್ಯಾನಿಸುವರೊಡಗೂಡಿ ನೆಲೆಗಾಣದನಕ ||೩||

## ೨೫೦ ರಾಗ ಕಾಪಿ ಆದಿತಾಳ

ಏತರ ಕಟಪಟಿ | ಒಂದಿನ| ಹೋಗುತಿದೆ ಲಟಪಟಿ ||೧|| ಬರೋ ವಾಗ್ಗೆ ಏನು ತಂದೆ | ಬರುತಲೇ | ಎಲ್ಲಾನು ನನ್ನದೆಂದೆ || ದುಡ್ಡು ಕೊಡಿಟ್ಟು ಬಳಿದು ಹೋಗುವಾಗ| ಬಳಲಿ ಬಳಲಿ ಅಳಮಾರಿಗೆ ಬಂದೆ ||೧|| ದೊಡ್ಡ ಮನೆಯ ಕಟ್ಟಿ | ಅದರೊಳು | ಮಡದಿಯ ಒಯ್ದಿಟ್ಟೆ || ಮಡದಿಗೆ ಮೋಹದ ಮಗು ಒಂದು ಹುಟ್ಟಿ| ಅದರ ಮೇಲೆ ನೀ ಮನಸಿಟ್ಟೆ || ೨ || ಸಂಸಾರ ಬಲು ಖೊಟ್ಟಿ | ಅದರೊಳು | ಬಿದ್ದಿದ್ದಿ ಕಾಲ್ಕಟ್ಟಿ || ತಂದೆ ಶ್ರೀಪುರಂದರವಿಠ್ಠಲರಾಯನ | ಧ್ಯಾನವನ್ನೆ ಮರೆತು ಬಿಟ್ಟೆ ||೩||

## ೨೫೧ ರಾಗ ಕಾಂಭೋಜಿ ಝಂಪೆತಾಳ

ಮರೆಯದಲೆ ಮನದಲಿ ಸಿರಿವರನ ಚರಣವನು। ಸ್ಮರಿಸುವಂಥವರಿಗೆ ನರರೆನ್ನಬಹುದೆ ॥ ಪ ॥ ಮುರಹರಗೆ ಎರಗುವಾ ಶಿರ ದ್ವಾರಕಾಪುರವು । ಹರಿಕಥೆಯ ಕೇಳುವಾ ಕರ್ಣ ಗೋಕರ್ಣ ॥ ಬಿರುದು ಪೊಗಳುವ ಜಿಹ್ವೆ ಸುರರ ಕ್ಷೀರಾರ್ಣವವು । ಸಿರಿವರನ ಪೂಜಿಪ ಕರವು ರಾಮೇಶ್ವರವು ॥ ೧ ॥ ಸೃಷ್ಟೀಶ ನಿರ್ಮಾಲ್ಯ ಘ್ರಾಣಿಪ ನಾಸಿಕ ಕಾಶಿ। ವಿಷ್ಣುವನು ನೋಡುವ ದೃಷ್ಟಿ ಶ್ರೀಮುಷ್ಣ ॥ ಅಷ್ಟ ಮದ ಜರಿದ ಕಾಯಯೋಧ್ಯೆ ಮಥುರಾಪುರ ಶ್ರೀ । ಕೃಷ್ಣನ ಪಾಡುವ ಕಂಠವೇ ಶ್ರೀವೈಕುಂಠ ॥ ೨ ॥ ಧರೆಯೊಳಗೆ ಶ್ರೀ ಪುರಂದರವಿಠಲರೇಯನ । ಪರಮ ಭಾಗವತರ ಉದರ ಬದರಿ ॥ ಪರಕೆ ನಡೆಸುವ ಜಂಘೆ ಹರಿವ ಗಂಗೋತ್ತುಂಗೆ। ಪರಿಯಲೊಪ್ಪುವ ಅಂಗ ಮೇಲು ಶ್ರೀರಂಗ ॥ ೩ ॥

## ೨೫೨ ರಾಗ ಪೂರ್ವಿ ಅಟತಾಳ

ನೋಡ ಬನ್ನಿರೋ ಜನರು। ಶ್ರೀಕೃಷ್ಣನ । ಜೋಡು ದೀವಟಿಗೆ ಸೇವೆ॥ ॥ ಪ ॥ ನೋಡಿಯೇ ನಮ್ಮಯ ಮನದ ಇಷ್ಟಾರ್ಥವ । ಬೇಡಿ ಶರಣು ಪೊಗುವ ಪದಯುಗವ ॥ ಅ ॥ ಅಂಜಿಕೆ ಪರಿಹರ ಅಸುರಭಂಜನನಾದ । ಕಂಜಾಕ್ಷ ಶ್ರೀಕೃಷ್ಣ ನಿದಿರೊಳು ॥ ನಿಂದು ಸಂಜೆಯ ವೇಳ್ಯದಿ ರಾಜಿಪ ರಜತದ । ಪಂಜಿ ಸೇವೆಯ ಕರಾಂಜಲಿಯನೆ ಮುಗಿದು ॥ ೧ ॥ ನೆರೆವ ಜನರ ಮುಂದೆ ಗುರುರಾಯ ತಾ ಬಂದು । ಕರವ ಮುಗಿದು ನಿಂದಿರುತಿಪ್ಪ ಸಮಯದಿ ॥ ಪರಿಪರಿ ವಿನಿಯೋಗದವರೆಲ್ಲ ತಾವ್ ತಮ್ಮ। ಸರತಿ ತಪ್ಪದೆ ಬಂದು ಇರುತಿಪ್ಪ ಸೊಬಗನು ॥ ೨ ॥ ಪಂಚಮುಖದ ಜ್ಯೋತಿ ಬೆಳಗಲು ಎಡ ಬಲ। ಸಂಚರಿಸುವ ಪೊಮ್ಮರಿಮೃಗಚೌರಿಯ ॥ ಕಾಂಚನಮಯದ ಕಟ್ಟಿಗೆ ಕೋಲ ಹಸುವಿನ। ಲಾಂಛನವಾದಗೆ ಹಾಕುವ ಪರಿಯ ॥ ೩ ॥ ಬಟ್ಟಲ ವೀಳ್ಯ ವಿಶಿಷ್ಟ ಲಾಜಾಕ್ಷತೆ। ಪುಟ್ಟೆ ಕದಳಿ ಬೆಲ್ಲ ಕತ್ತುರಿಗಳಿಂದ ॥ ಕೃಷ್ಣ ರಾಯನಮುಂದಿಟ್ಟು ಸಮರ್ಪಿಸಿ ಹೊ । ತ್ತಿಟ್ಟ ಆರತಿ ಶ್ರೇಷ್ಠರೆತ್ತುವುದನ್ನು ॥೪॥ ದೇವದೇವೋತ್ತಮ ದೇವೇಶನೆನುತಲಿ। ಭಾವಶುದ್ಧದಿ

ಭಕ್ತರು ಸ್ತುತಿಗೈಯುತ್ತ ॥ ಗೋವಳರಾಯನೆ ಜಯಶೀಲನಾಗೆಂದು। ಗೋವಿಂದ ಎನುತಲಿ ಘೋಷಮಾಳ್ಪುದನು ॥ ೫ ॥ ಭಯನಿವಾರಣ ಭಕ್ತ ದುರಿತನಿವಾರಣ। ಹರಿ ಕೃಷ್ಣ ಪರದೈವ ಪರಮಪುರುಷನೆಂದು ॥ ಸ್ಮರಣೆ ಯಿಂದಲಿ ಮನವೆರಸಿ ವಂದಿಸಿ ತ। ಚ್ಚರಣವ ನೋಡಿಯೆ ಕರುಣ ಪಡೆ ವರೆ ॥೬॥ ಮಧ್ವರಾಯರ ಮತಕದ್ವೈತನಾಗಿಯೆ। ಸಿದ್ಧವಾಗಿಹ ಫಲವೆದ್ದು ತೋರವ ತೆರ ॥ ಉದ್ಧರಿಸುವೆನೆಂಬ ಪುರಂದರವಿಠಲನ। ಮುದ್ದು ಶ್ರೀ ಕೃಷ್ಣನ ಮೂರುತಿಮಹಿಮೆಯು ॥೭॥

## ೨೫೩ ರಾಗ ಬೇಹಾಗ್ ಆದಿತಾಳ

ಹರಿ ಕುಣಿದ। ನಮ್ಮ। ಹರಿ ಕುಣಿದ ॥ಪ॥ ಅಕಳಂಕಚರಿತ। ಮಕರ ಕುಂಡಲಧರ॥ ಸಕಲರ ಪಾಲಿಪ। ಹರಿ ಕುಣಿದ॥೧॥ ಅರಳೆಲೆ ಮಾಗಾಯಿ। ಕೊರಳ ಮುತ್ತಿನ ಸರ ॥ ತರಳೆಯರೊಡಗೂಡಿ। ಹರಿ ಕುಣಿದ ॥ ೨ ॥ ಅಂದುಗೆ ಅರಳೆಲೆ। ಬಿಂದುಲ್ಲಿ ಬಾಪುರಿ ॥ ಚೆಂದದಿ ನಲಿವುತ್ತ। ಹರಿ ಕುಣಿದ ॥೩॥ ಉಟ್ಟ ಪಟ್ಟೆಯ ದಟ್ಟಿ। ಇಟ್ಟ ಕಾಂಚಿಯ ದಾಮ ॥ ದಿಟ್ಟ ಮಲ್ಲರ ಗಂಡ। ಹರಿ ಕುಣಿದ ॥ ೪ ॥ ಪರಮ ಭಾಗವತರ। ಕೇರಿಯೊಳಾ ಡುವ ॥ ಪುರಂದರವಿಠಲ। ಹರಿ ಕುಣಿದ ॥೫॥

## ೨೫೪ ರಾಗ ಸೌರಾಷ್ಟ್ರ ಅಟತಾಳ

ಗೋಕುಲದೊಳಗೊರ್ವ ರಾಕೇಂದುಮುಖಿ ತಾನು। ಜೋಕೆಲಿ ಕೊಡನ ಪೊತ್ತು ॥ ಬೇಕಾದವರಿಗೆ ನಾ ಕೊಡುವೆನು ಹಾಲ। ಆಕೆ ಸಾರುತ ಬಂದಳು ॥೧॥ ಕನ್ನಡಿಕದಪಿನ ಎಣ್ಣೆಗೆಂಪಿನ ಜಾಣೆ। ಕಣ್ಣಿಗೆ ಕಪ್ಪನ್ಹಚ್ಚಿ॥ ಚಿನ್ನಾಬರಣವನಿಟ್ಟು ಬಿನ್ನಬಿಳಿದನುಟ್ಟು। ಬೆಣ್ಣೆ ಮಾರುತ ಬಂದಳು ॥೨॥ ನುಡಿಗಿಳಿ ಸುಳಿಪಲ್ಲು ನಡೆ ಹಂಸಗಮನದಿ। ಬೆಡಗಿನಿಂದಡಿಯಿಡುತ ॥ ಸಡ ಗರದಿಂದಲಿ ನಡುಬೀದಿಯೊಳಗೆಲ್ಲ। ಮಡದಿ ಸಾರುತ ಬಂದಳು ॥ ೩ ॥ ಪನ್ನಗಶಯನನು ಸಣ್ಣ ನಾಮವನಿಟ್ಟು। ರನ್ನದ ಕೊಳಲ ಪಿಡಿದು ॥ ಕನ್ನೆ ಹೆಣ್ಣುಗಳ ಕೈಸನ್ನೆಯ ಮಾಡುತ। ಚೆನ್ನಕೇಶವ ಬಂದನು ॥೪॥ ಪಟ್ಟಣ

ದೊಳು ನಿನ್ನ ಬಿಟ್ಟವನಾರೆಲೆ । ಕೊಟ್ಟು ಪೋಗೆಲೆ ಸುಂಕವ ॥ ಸಿಟ್ಟು ಬಂದರೆ ನಿನ್ನ ಬಟ್ಟಕುಚದ ಮೇಲೆ । ಪೆಟ್ಟು ಹಾಕುವೆನೆಂದನು॥೫॥ ಪೆಟ್ಟು ಹಾಕುವುದಕ್ಕೆ ಬಿಟ್ಟಿಗೆ ಬಿದ್ದಿಲ್ಲ । ಇಷ್ಟು ಮಾತುಗಳೇತಕೋ ॥ ಪಟ್ಟೆವರಸ ಗ್ಡೇಳಿ ಕಟ್ಟಿಸುವೆನು ಕೈಯ । ಗುಟ್ಟಲಿ ಸುಮ್ಮನಿರು॥೬॥ ತಡೆಯುವೆ ಕೊಡು ಬೇಗ ಬಿಡುವವ ನಾನಲ್ಲ। ಉಡುತೆಗಣ್ಣವಳೆ ಕೇಳೆ॥ ಬಡನಡುವಿನೊಳಟ್ಟ ಉಡುಗೆಯ ಸೆಳೆದು ನಿ । ನ್ನೊಡಗೂಡಿಬಿಡುವೆನೆಂದ ॥೭॥ ಕಾಯಾತುರ ದೊಳು ಆಯಾಸಗೊಳಿಸದೆ । ಗಾಯಕತನವೇತಕೊ॥ ಛಾಯಾಮಾಯವ ತಾಳಿ ಆಯಾಸಕೊಳಗಾಗಿ । ನೋಯುವೆ ತೊಲಗೊ ನೀನು ॥೮॥ ತೊಲ ಗುವವ ನಾನಲ್ಲ ಚೆಲುವೆ ಚಂದನಗಂಧಿ। ಲಲನೆ ಒಲಿದು ಬಂದೆನೆ॥ ಹಲವು ಹಂಬಲಿಸದೆ ಬಳಿಯೆ ಕುಳ್ಳಿರು ಎಂದು । ಸೆಳೆವ ಸೆರಗ ಪಿಡಿದು ॥ ೯ ॥ ದುಡುಕಿನಿಂದಲಿ ಎನ್ನ ಪಿಡಿದು ನಿಲ್ಲಿಸಲಿಕ್ಕೆ । ಒಡೆಯನುಳ್ಳವಳು ನಾನು॥ ಕಡು ಕೋಪವೇತಕೆ ಬಿಡಿವುದೆನ್ನನು ಕೈಯ । ಬಿಡು ಭಾವ ಎನುತಿದ್ದಳು॥ ॥೧೦॥ ಭಾವ ಎಂತೆಂದಿಹೆ ಪಾವೆ ಅರಿಯದ ಹೆಣ್ಣೆ । ಕಾವರು ಎಷ್ಟೆ ನಿನಗೆ॥ ಮಾವ ಕಂಸನ ಕೊಂದ ಕೋವಿದರರಸನು । ಜೀವದೊಲ್ಲಭ ನಿನಗೆ ॥೧೧॥ ಹೊಂದಿಕೆ ಮಾತಾಡಿ ಬಂದು ನೀ ನಿಲ್ಲದೆ । ಕಂದಯ್ಯ ಸೆರಗ ಬಿಡೊ ॥ ಮಂದರಧರ ಗೋವಿಂದ ಮಾಧವ ನಿನ್ನ । ಕಂದನ ತಂದೆ ಕಾಣೆ ॥ ೧೨ ॥ ಒಪ್ಪದೊಂದೂರೊಳು ತುಪ್ಪ ಮಾರುತ ಬಂದೆ । ಅಪ್ಪಯ್ಯ ಸೆರಗ ಬಿಡೊ॥ ಪುಷ್ಪಶರನ ಕಂದರ್ಪಜನಕ ನಿನ್ನ। ಅಪ್ಪನ ಅಳಿಯ ಕಾಣೆ॥೧೩॥ ಬಿನ್ನಾಣ ಮಾತಾಡಿ ಕಣ್ಣ ಮೀಟುತಲಿಪ್ಪ । ಅಣ್ಣಯ್ಯ ಸೆರಗ ಬಿಡೊ ॥ ಹುಣ್ಣಿಮೆ ಚಂದ್ರನ ಪೋಲ್ವ ಪುಣ್ಯಸ್ತ್ರೀ ನಿ । ನ್ನಣ್ಣನ ಭಾವ ಕಾಣೆ ॥ ೧೪ ॥ ಎಷ್ಟು ಹೇಳಿದರು ನೀ ಬಿಟ್ಟುಹೋಗುವನಲ್ಲ । ಇಷ್ಟು ಮಾತುಗಳೇತಕೊ॥ ಭ್ರಷ್ಟ ತನದಿಂದ ದುಷ್ಟಬುದ್ಧಿಯ ಮಾಳ್ಪೆ । ಧಿಟ್ಟ ನೀನಾರು ಪೇಳೊ ॥ ೧೫ ॥ ಗಾದೆಯ ಮಾತಲ್ಲ ಆದಿಬ್ರಹ್ಮನ ಕೈಯ । ವೇದವನೊಯ್ದವನ॥ ಮೇದಿನಿ ಪಿಡಿದು ಭೇದಿಸಿ ವೇದವ ತಂದ । ಆದಿಮತ್ಸ್ಯಾವತಾರನೆ ॥೧೬॥ ಬಡಿವಾರ ಹೇಳಿ ನೀ ಬೆಡಗಿ ನೀರೊಳು ಮುಳುಗಿ। ಅಡಗಿಕೊಂಡಿಹುದೇತಕೊ॥ ಕಡಲ ಕಡೆದು ಮಹಾಗಿರಿಯ ಬೆನ್ನಲಿ ಪೊತ್ತು। ಅಡರಿ ಎತ್ತಿದ ಕೂರ್ಮನೆ ॥೧೭॥ ಮೋರೆಯ ಬಗ್ಗಿಸಿ ದಾರಿಯ ನಡೆವಾಗ । ಕೂರಿಕೊಂಡಿಹುದೇತಕೋ ॥

ಘೋರ ರಾಕ್ಷಸನ ಸಂಹಾರ ಮಾಡಿದ ಮಹಾ । ಧೀರ ವರಹವತಾರನೆ ॥ ॥೧೮॥ ಹಿರಿದು ಕೂಗುತ ರಕ್ತ ಸುರಿದು ನಾಲಿಗೆ ಬಾಯ । ತೆರೆದು ಕೊಂಡಿಹುದೇತಕೊ॥ ತರಳನಿಗೊಲಿದು ಹಿರಣ್ಯನ ಸೀಳಿದ। ನರಸಿಂಹ ಅವ ತಾರನೆ ॥೧೯॥ ಬಲು ದರಿದ್ರನೆಂದು ಚೆಲುವ ಬ್ರಾಹ್ಮಣನಾಗಿ । ಇಳೆಯ ದಾನವ ಬೇಡಲು ॥ ಬಲಿಚಕ್ರವರ್ತಿಯ ಛಲದಿ ಪಾತಾಳಕ್ಕೆ । ತುಳಿದ ವಾಮನವತಾರನೆ ॥೨॥ ಕರದಿಂದ ಕೊಡಲಿಯ ಪಿಡಿಧುಕೊಂಡಿಹ ನೀನು । ಯಾರು ಪೇಳಿಲೊ ಎನಗೆ ॥ ಧುರದಿ ಕ್ಷತ್ರಿಯರ ಶಿರವ ತರಿದು ಕೊಂದ । ಶೂರ ಭಾರ್ಗವವತಾರನೆ ॥೨೧॥ ದಶರಥರಾಯನ ಸುತನಾಗಿ ವನವಾಸ । ಜತದಿ ನೀ ತಿರುಗಲೇಕೊ ॥ ದಶಶಿರದ ರಾವಣನ ಶಿರವ ತರಿದು ಕೊಂದ। ಸೀತಾಪತಿ ರಾಮನೆ ॥೨೨॥ ಪೋಗಲಸಮರೂಪ ನಾಗವೇಣಿಯರು ಅನು। ರಾಗದಿಂ ಸೆಳೆವೆ ಪೇಳೊ ॥ ಸೋಗೆಗಂಗಳೆ ಕೇಳೆ ಬೇಗ ಅಸುರರ ಗೆಲಿದು । ಛೇದಿಸಿದ ಶ್ರೀಕೃಷ್ಣನೆ ॥೨೩॥ ಪಟ್ಟೆ ಪೀತಾಂಬರ ಉಟ್ಟುಕೊಳ್ಳದೆ ನೀನು। ಬತ್ತಲೆ ತಿರುಗಲೇಕೊ॥ ಶ್ರೇಷ್ಠ ತ್ರಿಪುರಸ್ತ್ರೀಯರ ವ್ರತವ ಕೆಡಿಸಿದ। ಚೆಲುವ ಬುದ್ಧವತಾರನೆ ॥೨೪॥ ಹರಿಯು ರಾವುತನೆಂದು । ತುರಗವೇರಿ ಹೊಟ್ಟೆ । ಹೊರೆದು ಕೊಂಡಿಹುದೇತಕೊ ॥ ಸರಿಯಿಲ್ಲ ನಮಗಾರು ತರುಣಿ ಕೇಳಿಲೆ ನಾನು । ಧೀರ ಕಲ್ಕ್ಯವತಾರನೆ ॥೨೫॥ ಹತ್ತವತಾರದ ವಿಸ್ತಾರ ಪೇಳಿದ । ಮತ್ತೆ ನಾನಾರು ಕೇಳೆ ॥ ಕತ್ತಲೆ ಕವಿದಂತೆ ಎತ್ತ ತಿಳಿಯಲಿಲ್ಲ । ಸ್ವಚ್ಛದಿ ತಿಳಿಯಪೇಳೊ ॥ ೨೬ ॥ ಗೋಪಿಯ ತನಯನೆ ರಾಪು ಮಾಡಲು ಬೇಡ । ಗೋಪ್ಯದಿ ಸುಮ್ಮನಿರು॥ ಭಾಪುರೆ ಗೋವರ್ಧನಗಿರಿಯನೆತ್ತಿದ। ಗೋಪಾಲ ಕೃಷ್ಣ ಕಾಣೆ ॥೨೭॥ ಹೃದಯದಿ ತಲ್ಲಣಿಸಿ ಗಡ ಗಡ ನಡುಗುತ। ಪದುಮ ನಾಭನ ಮುದದಿ॥ ವಿಧವಿಧ ಸ್ತುತಿಸುತ್ತ ಮುಖವೆತ್ತಿ ಮುದ್ದಾಡಿ। ಚದುರೆ ಸಂತವಿಸಿದಳು ॥ ೨೮ ॥ - ತೆರೆದಿದ್ದ ಕುಚ ತೆಗೆದು ಗಮ್ಮನೆ ಎದೆಗೊತ್ತು। ತಧರಾಮೃತವನೆ ಸವಿದು ॥ ಸದಮಲದಿಂದಲಿ ಮದನಕೇಳಿಯೊಳು । ಸುಗುಣನೊಳಿರುತಿದ್ದಳು ॥ ೨೯ ॥ ಸೃಷ್ಟಿಗಧಿಕವಾದ ಶೇಷಗಿರಿಯವಾಸ। ಧಿಟ್ಟ ವೇಂಕಟಮೂರುತಿ ॥ ಸೃಷ್ಟಿಸಿಹ ನಿನ್ನನ್ನು ಎನಗಾಗಿ ಪುರಂದರ । ವಿಠಲರಾಯ ಕಾಣೆ ॥೩೦॥

## ೨೫೫ ರಾಗ ಕಾಂಭೋಜಿ ಝಂಪೆತಾಳ

ಪೂರ್ವಜನ್ಮದಲಿ ನಾ ಮಾಡಿದ ಅಘದಿಂದ| ಊರ್ವಿಯೊಳು ಜನಿಸಿದೆನೊ ಕೃಷ್ಣ ॥ ಕಾರುಣ್ಯನಿಧಿಯೆನ್ನ ಕಾಯಬೇಕಯ್ಯ ಹರಿ । ವಾರಿಜನಾಭ ಶ್ರೀಕೃಷ್ಣ ॥ ಪ ॥ ಹುಟ್ಟಿದಂದಿಂದಿಗೂ ಸುಖವೆಂಬುದನು ಅರಿಯೆ । ಕಷ್ಟವಾಗಿರುತಿಹುದು ಕೃಷ್ಣ ॥ ದಟ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು । ತಟ್ಟುವುದು ನಿನಗಯ್ಯ ಕೃಷ್ಣ ॥ ೧ ॥ ಕಾಸಿನಾ ಆಸೆಯನು ಮಾಡಿ ಬಹುದಿನದಿಂದಾ । ಯಾಸದೊಳಗಿರುತಿಹೆನೊ ಕೃಷ್ಣ ॥ ಆಸೆಯನು ಬಿಡಿಸಿ ಮಿಗೆ ದೋಷವನು ಪರಿಹರಿಸೊ । ಸಾಸಿರನಾಮ ಶ್ರೀಕೃಷ್ಣ ॥೨॥ ಮುಟ್ಟಲಂಜುವರು ಬಂಧುಗಳು ಕಂಡರೆ ಎನ್ನ। ಅಟ್ಟಿ ಕೊಲುತಿಹರಯ್ಯ ಕೃಷ್ಣ ॥ ತೊಟ್ಟಿಲ ಶಿಶು ಬಾಯ ಬಿಡುವ ತೆರದಿ ಕಂ । ಗೆಟ್ಟು ಶೋಕಿಸುವೆನೋ ಕೃಷ್ಣ ॥ ೩ ॥ ಈಪರಿಯಿಂದ ನಾನಾಪತ್ತು ಪೇಳಿದರೆ। ನನ್ನ ಕಾಯದಿರುವೆಏಕೊ ಕೃಷ್ಣ ॥ ಶಪಿಸುವೆನೆಂದರೆ ಸಾವು ಹುಟ್ಟು ನಿನಗಿಲ್ಲ। ಏನು ದೊರೆತನವಯ್ಯ ಕೃಷ್ಣ ॥ ೪ ॥ ತಂದೆತಾಯಿಯು ಇಲ್ಲ ಬಂಧುಬಳಗವು ಇಲ್ಲ । ಇದೇನು ತೆರಹೇಳೆ ಶ್ರೀಕೃಷ್ಣ ॥ ಮಂದರಧರ ಶ್ರೀಪುರಂದರ ನೀ । ಬಂದು ನೆಲೆಯಾಗಯ್ಯ ಕೃಷ್ಣ ॥೫॥

## ೨೫೬ ರಾಗ ಶಂಕರಾಭರಣ ಆದಿತಾಳ

ಹರಿ ಹರಿ ಹರಿಯೆಂದು ಸ್ಮರಿಸುವ ಜನರಿಗೆ| ದುರಿತವೆತ್ತಣದು ದುರ್ಗತಿಯೆಲ್ಲಿ ಬಹುದು ॥ ಪ ॥ ಸ್ನಾನವೇತಕೆ ಸಂಧ್ಯಾಜಪತಪವೇತಕೆ । ಮೌನವೇತಕೆ ಮೇಲೆ ವ್ರತವೇತಕೆ ॥ ಮಾನಸದಲಿ ವಿಷ್ಣುವನು ಧ್ಯಾನಿಸುವ ಮಹಾ । ಜ್ಞಾನಿಗಳ ಸಂಗಸುಖದೊಳಿರ್ಪರಿಗೆ ॥ ೧ ॥ ಯಾತ್ರೆಯೇತಕೆ ಕ್ಷೇತ್ರ ತೀರ್ಥಗಳ ಮಾಡಲೇಕೆ । ಗೋತ್ರಧರ್ಮದ ಪುಣ್ಯಫಲವೇತಕೆ ॥ ಸೂತ್ರದಿಂ ಜಗವ ಮೋಹಿಸುವ ಮುರಾರಿಯ । ಸ್ತೋತ್ರದಿಂ ಪೊಗಳಿ ಹಿಗ್ಗುವ ಭಾಗವತರಿಗೆ ॥ ೨ ॥ ಅಂಗದಂಡನೆಯೇಕೆ ಆತ್ಮಘಾತದ ಒಂದು। ತಿಂಗಳ ಚಂದ್ರಾಯಣವು ಏತಕೆ ॥ ಮಂಗಳಮೂರುತಿ ಪುರಂದರವಿಠಲನ್ನ। ಹಿಂಗದೆ ಅರ್ಚನೆ ಮಾಡುವ ಭಕುತರಿಗೆ ॥ ೩ ॥

## ೨೫೭ ರಾಗ ಪುನ್ನಾಗವರಾಳಿ ಛಾಪುತಾಳ

ಕಾಲ ಕಳೆದೆವಲ್ಲ । ಜ್ಞಾನ ಬರಲಿಲ್ಲವಲ್ಲ ॥ ಪ ॥ ಕಾಲನವರು ಕರೆಯ ಬಂದರೆ ಏನು ಹೇಳಲಿ ಸೊಲ್ಲ ॥ ಅ ॥ ಬಾಲನಾಗಿ ಜನಿಸಿ । ತಾಯ ಮೊಲೆಗೆ ಭ್ರಮಿಸಿ ॥ ಹಾಲು ಬೆಣ್ಣೆ ಉಣಿಸಿ । ಹಸು ಕೂಸು ಎಂದೆನಿಸಿ ॥ ॥೧॥ ಚೆಂಡು ಬುಗುರಿಯಾಡಿ । ಚೆಲುವ ವಸನ ಬೇಡಿ ॥ ಹಿಂಡು ದುಷ್ಟರ ಕೂಡಿ । ಕ್ರೂರಕೃತ್ಯ ಮಾಡಿ ॥ ೨ ॥ ಪ್ರಾಯದಲ್ಲಿ ಸಿಕ್ಕಿ । ಮಾಯದಲ್ಲಿ ಸೊಕ್ಕಿ ॥ ಸ್ತ್ರೀಯರೊಡನೆ ಮಿಕ್ಕಿ । ಹೇಯ ಬುದ್ಧಿಲಿ ಸಿಕ್ಕಿ ॥ ೩ ॥ ಮಕ್ಕಳಾಧೀನದಿ । ಸಿಕ್ಕಿದೆ ದೈನ್ಯದಿ॥ ಕಕ್ಕುಲತೆ ಬುದ್ಧಿ। ಕೊಕ್ಕದಿಟ್ಟು ಮೋದದಿ ॥೪॥ ರಾಮಪೂಜೆಯನ್ನು । ಮಾಡಲಿಲ್ಲವು ಇನ್ನು ॥ ಸ್ವಾಮಿ ಪುರಂದರ ವಿಠಲನ್ನ । ಪ್ರೇಮಕ್ಕೆ ದೂರನು ॥೫॥

## ೨೫೮ ರಾಗ ಸಾವೇರಿ ತ್ರಿಪುಟತಾಳ

ಬಾರಯ್ಯ ವೆಂಕಟರಮಣ । ಭಕ್ತರ ನಿಧಿಯೆ ॥ ಪ ॥ ತೋರೊ ನಿನ್ನ ದಯ । ತೋಯಜಾಂಬಕನೆ ॥ಅ॥ ವೇದಗೋಚರ ಬಾರೊ । ಆದಿಕಚ್ಛಪ ಬಾರೊ ॥ ಮೋದಸೂಕರ ಬಾರೊ । ಸದಯಾ ನರಸಿಂಹ ಬಾರೊ ॥ ೧ ॥ ವಾಮನ ಭಾರ್ಗವ ಬಾರೊ । ರಾಮಕೃಷ್ಣನೆ ಬಾರೊ॥ ಪ್ರೇಮದ ಬುದ್ಧನೆ ಬಾರೊ । ಸ್ವಾಮಿ ಕಲ್ಕಿ ನೀ ಬಾರೊ ॥ ೨ ॥ ಅರವಿಂದನಾಭ ಬಾರೊ । ಸುರರ ಪ್ರಭುವೇ ಬಾರೊ ॥ ಪುರುಹೂತವಂದ್ಯ ಬಾರೊ । ಪುರಂದರವಿಠಲ ಬಾರೊ ॥ ೩ ॥

## ೨೫೯ ರಾಗ ನಾದನಾಮಕ್ರಿಯೆ ಆದಿತಾಳ

ಹರಿಯ ಬಿಟ್ಟರೆ ಗತಿಯಿಲ್ಲ । ಮಾರುತಿ ಮರೆತಗೆ ಸಾಧನವಿಲ್ಲ ॥ ಪ ॥ ಹರಿ ಒಲಿದವರಿಗೆ ಹನುಮ ಒಲಿವ । ಹನುಮ ಒಲಿಯದಿರೆ ಹರಿ ಒಲಿಯ ಲಿಲ್ಲ ॥ ಹರಿಸಂಕಲ್ಪವೆಲ್ಲ ಹನುಮ ಬಲ್ಲ। ಹನುಮ ಬಿಟ್ಟದನು ಹರಿ ತಾನೊಲ್ಲ ॥೧॥ ಮೂರವತಾರದಿ ಬಂದು । ಮುಕ್ತಿ । ದಾರಿಗಳೆಲ್ಲ ತೋರಿದ ನಿಂದು॥ ಸಾರಿ ಜನರಿಗೆ ಅಂದು । ಮುಕ್ತಿ । ಸೇರೋ ಮಾರ್ಗವ ತೋರಿದ

ಸಿಂಧು ॥೨॥ ಶತಕಲ್ಪಗಳಲಿ ಸದಾ ಈತ । ಹಂಸ । ಮಂತ್ರಗಳೆಲ್ಲ ಜಪಿಸುವ ಖ್ಯಾತ ॥ ತತ್ತ್ವೇಶರಿಗನುಕೂಲನೀತ । ಗುರು । ಪುರಂದರವಿಠಲನ ನಿಜದೂತ ॥ ೩ ॥

## ೨೬೧ ರಾಗ ಸಾವೇರಿ ತ್ರಿಪುಟತಾಳ

ಹರಿದರುಶನಕಾಗಿ ನಾರದರು ಬರಲು । ಸಿರಿದೇವಿ ಹೊರಗಿನ ಬಾಗಿಲಲ್ಲಿದ್ದಳು ॥ಪ॥ ಕರಕಮಲ ಮುಗಿದು । ಧೊರೆ ಸಮಯವೇನೆನಲು । ನಾರಿಮಣಿ ಲಕುಮಿ ಅರುಹುವಳಾಗ ॥ ಅ ॥ ವರ ದೇವತಾರ್ಚನೆ ಅರಮನೆಯೊಳಗೆ । ಭರದಿಂದ ಕುಳಿತಿಪ್ಪ ಪರಮಾತ್ಮನು ॥ ಸರಸಿಜೋದ್ಭವನಾದಿ ಸುರರಿಗೆ ಧೊರೆಯಿಾತ । ಪರಮ ಆಶ್ಚರ್ಯವ ಅರಿಯಬೇಕೆಂದು ॥ ೧ ॥ ಕಳವಳಿಸುತ ಮನದೊಳಗೆ ತೋರುತಲಿದೆ। ಥಳಥಳಿಸುವ ರತ್ನಸಂಪುಟದಿ॥ ಕಲುಷದೂರನನ್ನು ಪ್ರಹ್ಲಾದ ವರ ಧ್ರುವನು। ಬಲಿ ಅಂಬರೀಷಮುಖ್ಯರು ಪೂಜೆಗೈಯ್ವ ॥ ೨ ॥ ಹರಿದಾಸರ ಚರಣರಜಗಳ ತುಂಬಿಟ್ಟು । ತೆಗೆದು ತೋರಿದ ಮುನಿಗೆ ಪರಮಾತ್ಮನು ॥ ಪರಮಾನಂದಭರಿತನಾದ । ವಿರಂಚಿಸುತ । ಸಿರಿಪತಿ ಪುರಂದರವಿಠಲನ್ನ ಸ್ತುತಿಸುತ ॥೩॥

## ೨೬೨ ರಾಗ ನಾದನಾಮಕ್ರಿಯೆ ಅಟತಾಳ

ಊರ ದೇವರ ಮಾಡಬೇಕಣ್ಣ । ತನ್ನೊಳಗೆ ತಾನೆ । ಊರ ದೇವರ ಮಾಡಬೇಕಣ್ಣ ॥ ಪ ॥ ಊರ ದೇವರ ಮಾಡಿರೆಂದು ಸಾರುತಿವೆ ಶ್ರುತಿ ಸ್ಮೃತಿಗಳು । ದ್ವಾರಗಳೊಂಭತ್ತು ಮುಚ್ಚಿ ನಿಲ್ಲಿಸಿ ಧ್ಯಾನ ಭ್ರೂಮಧ್ಯದಿ ॥ ॥ಅ॥ ಎಷ್ಟು ಯುಗಗಳು ತೀರಿಹೋಯಿತಣ್ಣ । ದೇವರ ಮಾಡದೆ । ಕಷ್ಟದಿಂದ ನೊಂದೆ ಕಾಣಣ್ಣ ॥ ಅಷ್ಟದಳದ ಕಂಭ ನಿಲ್ಲಿಸಿ। ನಷ್ಟ ಬರುವ ಕಾಲದಲ್ಲಿ । ಕೆಟ್ಟ ದೈವಕವಾಗಿ ನೀನು । ದುಷ್ಟ ಕೋಣನ ಶಿರವ ತರಿದು ॥ ॥೧॥ ನಾನೆ ಎಂಬೋ ಮೇಕೆ ಹೋತಣ್ಣ । ಅದಕ್ಕೆ ತಕ್ಕ । ಜ್ಞಾನವೆಂಟ ಪೋತರಾಜಣ್ಣ ॥ ತಾನೆ ಎಂಬೋ ಭಲ್ಲ ಹಿಡಿದು । ಹೀನ ಹೋತಿನ ಸೀಳಿ ಬಿಸುಟು । ಜ್ಞಾನಗುಡಿಸಲು ಸೂರೆಗೊಂಡು। ತಾನೆ ಬೆಳಗೋ ಜ್ಯೋತಿ

ನಿಲ್ಲಿಸಿ ॥ ೨ ॥ ಕರ್ತನೆಂಬೋ ಕ್ಲೇಶ ಕುರಿಯಣ್ಣ । ಅದನು ತಂದು । ಕಟ್ಟಿ ತಲೆಯನೆ ಕುಟ್ಟಬೇಕಣ್ಣ ॥ ಅಷ್ಟ ವಿಧದ ಕುರಿಗಳನ್ನು । ಕಟ್ಟಿ ತಲೆಯನೆ ಚೆಂಡನಾಡಿ ಹುಟ್ಟಿ ತಿರುಗೋ ಕೋಳಿಯನ್ನು । ಕುಟ್ಟಿ ಚೂರಿ ಹಾಕುತಲಿ ॥ ೩ ॥ ನಾಳೆ ನೋಡುವನೆನ್ನಬೇಡಣ್ಣ । ಕೇಳಣ್ಣ ನಿನ್ನ । ಬಾಳುಯೆಂತೊ ನೀನೆ ನೋಡಣ್ಣ । ನಾಳೆ ನಾಡದು ಎಂದು ಹೀಗೆ । ಬಾಳುವ ಕಾಲದಿ ಯಮನು । ಕೋಳಿಪಿಳ್ಳೆಯಾಡುವಾಗ । ಹಾಳಿ ಹದ್ದಿನಂತೆ ಒಯ್ಯುವ ॥೪॥ ಹೆಂಡರು ಮಕ್ಕಳು ಸುಳ್ಳಣ್ಣ । ಕೇಳಣ್ಣ ನಿನ್ನ । ಮಂಡೆ ತುಂಬ ಬಳಗ ಕಾಣಣ್ಣ॥ ತುಂಡನಾದ ಯಮನು ಬಂದು । ಮಂಡೆಮೇಲೆ ಹೊಯ್ಯುವಾಗ। ಹೆಂಡರು ಮಕ್ಕಳು ನಿನ್ನ। ಕಂಡು ಕಂಡು ಬಿಡಿಸೋದಿಲ್ಲ॥ ॥ ೫ ॥ ಮತ್ತೆ ಹೆಣ್ಣಿನ ನೋಡುವೆಯಲ್ಲೋ । ನೀ ಗಳಿಸಿದಂಥ । ಬುತ್ತಿ ಯನ್ನೆ ಉಂಬುವೆಯಲ್ಲೋ ॥ ಮೃತ್ಯುವಿನ ಬಾಯಿಗೆ ನೀ । ತುತ್ತು ಆಗಿ ಹೋಗಬೇಡ । ತೊತ್ತಾಗಿ ಗುರುವಿಗೆ ನಿತ್ಯ । ಉತ್ತಮ ಸೇವೆಯನ್ನು ಮಾಡು॥೬॥ ಮುಂದೆ ಇಂಥ ಜನ್ಮ ಕಾಣಣ್ಣ । ಬಾರದೋ ನಿನಗೆ । ಮಂದ ಮತಿಯು ಆಗಬೇಡಣ್ಣ ॥ ಹಿಂದಿದ ಕಷ್ಟದಕಿಂತ । ಮುಂದಿನ ಹೆಮ್ಮೆಯ ಮರೆತು । ತಂದೆ ಪುರಂದರವಿಠಲನ್ನ। ಹೊಂದಿ ನೀನು ಮುಕ್ತನಾಗೊ ॥೭॥

## ೨೬೩ ರಾಗ ನೀಲಾಂಬರಿ ಆದಿತಾಳ

ಎನ್ನ ಕಡೆಹಾಯಿಸುವುದು ನಿನ್ನ ಭಾರ ॥ ನಿನ್ನ ನೆನೆಯುತಿಹುದೆ ಎನ್ನ ವ್ಯಾಪಾರ ॥ ಪ ॥ ಎನ್ನ ಸತಿಸುತರಿಗೆ ನೀನೇ ಗತಿ ॥ ನಿನ್ನನೊಪ್ಪಿಸುವುದು ಎನ್ನ ನೀತಿ ॥ ೧ ॥ ಎನ್ನ ಒಡಲ ಪೊರೆವುದು ನಿನ್ನ ಧರ್ಮ ॥ ನಿನ್ನ ಅಡಿ ಗೆರಗುವುದು ಎನ್ನ ಕರ್ಮ ॥ ೨ ॥ ಹರಿ ನೀನಲ್ಲದೆ ಆರ ಮೊರೆಯಿಡುವೆ ॥ ಸಿರಿಪುರಂದರವಿಠಲ ನಿನ್ನ ಪಾಡುವೆ ॥ ೩ ॥

## ೨೬೪ ರಾಗ ಶಂಕರಾಭರಣ ಆದಿತಾಳ

ವೇಣುನಾದ ಬಾರೋ ಶ್ರೀವೆಂಕಟರಮಣನೆ ಬಾರೊ । ಬಾಣನ ಭಂಗಿಸಿದಂಥ ಭಾವಜನಯ್ಯನೆ ಬಾರೋ ॥ಪ॥ ಪೂತನಿಯ ಮೊಲೆಯುಂಡ

ನವನೀತಚೋರನೆ ಬಾರೋ ॥ ಭೀತ ರಾವಣನ ಸಂಹರಿಸಿದ ಸೀತಾ ನಾಯಕ ಬಾರೋ ॥೧॥ ಬಿಲ್ಲ ಮುರಿದು ಮಲ್ಲರ ಗೆದ್ದ ಫುಲ್ಲನಾಭನೆ ಬಾರೋ ॥ ಗೊಲ್ಲತೇರೊಡನೆ ನಲಿದ ಚೆಲುವ ಮೂರುತಿ ಬಾರೋ ॥೨॥ ಮಂದರಗಿರಿ ಎತ್ತಿದಂಥ ಇಂದಿರೆರಮಣನೆ ಬಾರೋ॥ ಕುಂದದೆ ಗೋವುಗಳ ಕಾಯಿದ ಪುಂಡರೀಕಾಕ್ಷನೆ ಬಾರೋ ॥೩॥ ನಾರಿಯರ ಮನೆಗೆ ಪೋಗುವ ವಾರಿಜನಾಭನೆ ಬಾರೋ॥ ಈರೇಳು ಭುವನವ ಕಾಯುವ ಮಾರನಯ್ಯನೆ ಬಾರೋ ॥೪॥ ಶೇಷಶಯನಮೂರುತಿಯಾದ ವಾಸುದೇವನೆ ಬಾರೋ ॥ ದಾಸರೊಳು ದಾಸನಾದ ಪುರಂದರವಿಠಲ ಬಾರೋ ॥೫॥

## ೨೬೫ ರಾಗ ನಾಟಕುರಂಜಿ ಮಟ್ಟೆತಾಳ

ನಡೆದು ಬಾ ನಾಲ್ವರಿದ್ದೆಡೆಗೆ ಎನ್ನಯ್ಯನೆ! ನಮ್ಮ ನಿಮ್ಮ ತೊಡಕ ನಿರ್ಣಯಿಸಿಕೊಂಬೆನು ತೋಯಜಾಕ್ಷ ॥ಪ॥ ಆದಿಯಲ್ಲಿ ಎನ್ನ ಮುತ್ತಾತರು ನಿನ್ನ । ಪಾದಸೇವೆಯ ಮಾಡಿ ಹಲವು ಕಾಲ ॥ ಸಾಧಿಸಿದರ್ಥವ ಸಲೆ ಎನ್ನ ಜೀವಕ್ಕೆ । ಆಧಾರವಾದುದನನೇಕೆ ಕೊಡಲೊಲ್ಲೆ ॥೧॥ ಸಾಲವ ಕೊಡವಲ್ಲೆ ಸಲೆ ಠೌಳಿಯ ಮಾಡಿ । ಕಾಲವ ಕಳೆವೆ ನೀ ಕಪಟದಿಂದ ॥ ಮೇಲಾದ ವಿಬುಧರು ಮೆಚ್ಚುವಂತೆ ನಿನ್ನ। ಕಾಲಿಗೆ ಎನ್ನ ಕೊರಳ ಹತ್ತಕಟ್ಟುವೆ ॥೨॥ ಸನಕಾದಿ ಮುನಿಗಳ ಸಾಕ್ಷಿಯಿಂದಲಿ ಎನ್ನ । ಮನಕೆ ಬಪ್ಪಂತೆ ನೀ ಘನ ನಂಬುಗೆಯಿತ್ತೆ ॥ ಅನುಮಾನವೇಕಿನ್ನು ಪಾಲಿಸಯ್ಯ ಈಗ । ವನಜಾಕ್ಷ ತಂದೆ ಶ್ರೀಪುರಂದರವಿಠಲ ॥ ೩ ॥

## ೨೬೬ ರಾಗ ಹಿಂದುಸ್ಥಾನಿ ದೇಶಿ ರೂಪಕತಾಳ

ಸಾಕು ಸಂಸಾರ ತೆರೆಯ ನೂಕಲಾರೆನು । ಬೇಕು ನಿನ್ನ ಚರಣಕಮಲ ಬೇರನ್ಯತ್ರ ಗತಿಯ ಕಾಣೆ ॥ ಪ ॥ ಹುಟ್ಟಿದಂದಿನಿಂದ ಕಷ್ಟ । ಪಟ್ಟು ಕಂಗೆಟ್ಟು ಮನದಿ । ಗುಟ್ಟು ಪೇಳ್ವೆನಯ್ಯ ಒಂ । ದಿಷ್ಟು ಲಾಲಿಸೊ ॥ ಕೊಟ್ಟ ಕಳತ ಕಣ್ಣ ನೆಲಕೆ । ತಟ್ಟದಲ್ಲದೆ ಬಿಡದು ವೊರೆ। ಯಿಟ್ಟ ಕಾಯ ದಿರೆ ದೂರು । ಮುಟ್ಟುವುದು ಶ್ರೀಲಕ್ಷ್ಮೀರಮಣ ॥ ೧ ॥ ತಂದೆ ತಾಯಿ

ಬಂಧುಬಳಗ | ವೆಂಬ ಪಾಶಕ್ಕೆ ಸಿಲ್ಕಿ| ಒಂದು ದಿನದ ಸುಖವನು| ಇಂದು ಕಾಣೆನೊ || ಕಂದರ್ಪಜನಕ ನೀನು | ಕರುಣವಿಟ್ಟು ಕಾಯದಿರೆ | ಕುಂದು ನಿಂದೆ ಬಂದರೆ ಮೂರು | ತಂದು ಕೊಡುವರು ಲಕ್ಷ್ಮೀರಮಣ ||೨|| ತುಂಡು ತುತ್ತು ಕೂಳಿಗಾಗಿ| ಕಂಡವರ ಕಾಡಿ ಬೇಡಿ|| ಹಿಂಡಿ ಹಿಪ್ಪೆಮಾಡಿ ಮನವ| ಹೀನಗೊಳಿಸಿದೆ || ಉಣ್ಣ ಬಾರದ ಊಟವನ್ನು | ಕಾಣಬಾರದ ಕರ್ಮವನ್ನು | ಗುಂಡೆಗಾರರ ಕೇರಿಗೆ ಸಿಕ್ಕಿ | ಚೆಂಡಿಗಿಂತ ಹಗುರವಾದೆ || ೩ || ವಾಸಿಪಂಥಕಾಗಿ ಎನ್ನ | ಭಾಷೆಯನ್ನು ಜನರು ನೋಡಿ | ಆಶೆಮಾಡಿ ಕೊಂಡರೆ ನಿ | ರಾಶೆಯಾಯಿತೊ || ಮೋಸದಿಂದ ಮಡುವ ಧುಮುಕಿ | ಈಸಲಾರೆ ಮುಳುಗಿ ಮುಳುಗಿ | ಘಾಸಿಯಾಗುತೇನೆ ಕೇಳು | ವಾಸುದೇವ ಸುಪ್ರಸನ್ನ ||೪|| ಇಷ್ಟು ದಿನದಿ ಜನರ ಕೈಯ | ನಿಷ್ಠುರಾದ ಮಾತ ಕೇಳಿ | ಕಷ್ಟಕಾಲ ಬಂತು ಫಳಿಗೆ | ಕಳೆಯಲಾರೆನು || ಇಷ್ಟರ ಮೇಲಿನ್ನು ಮನಸು | ಎರಕವಿಲ್ಲದೆ ಕೇಳು | ಇಷ್ಟ ನೀನಹುದು ಪುರಂದರ | ವಿಠ್ಠಲ ನೀನಲ್ಲದಿಲ್ಲ || ೫ ||

## ೨೬೭ ರಾಗ ಮೋಹನ ಅಟತಾಳ

ನಿನ್ನ ದಯವೃಷ್ಟಿಗೆ ಚಿತ್ತವಿಲ್ಲದಿರೆ | ಮುನ್ನೇನು ಗತಿಯು ಎನಗೆ ||ಪ|| ಚೆನ್ನಾರ ಚಲುವ ಕೇಶವರಾಯ ನಂಬಿದೆನೊ | ಧನ್ಯನ ಮಾಡಿ ಸಲಹೋ ದೇವ ||ಅ|| ಅರಿಯೆನೋ ತಾರತಮ್ಯಾನುಸಾರಗಳಿಂದ ಗುರುಹಿರಿಯರನು ಭಜಿಸದೆ| |ಗರುವ ಅಹಂಕಾರದಲಿ ಐಶ್ವರ್ಯಮದದಿಂದ ಪರರ ನಿಂದಿಸುತಲಿದ್ದೆ|| ಅರುಣೋದಯದಲೆದ್ದು ಸ್ನಾದ್ಬಹಳವಹುದೆಂದು ಮೋರೆ ತೊಳೆಯದೆ ಮೆಲ್ಲುತಿದ್ದೆ | ಘೋರ ದುರಿತಗಳ ಎಣಿಸಿದರೆ ನೆಲೆಗಾಣೆ ಮೊರೆಹೊಕ್ಕೆ ಹರಿ ರಕ್ಷಿಸೊ || ೧ || ಸ್ನಾನಮಾಡಿದರೆನ್ನ ದೇಹ ತಾಳದು ಎಂದು ಕಳ್ಳನಾವುವತಿದ್ದುವೆ| ಘನ್ನ ಬ್ರಹ್ಮರು ಉಪನ್ಯಾಸ ಮಾಡಿದರೆ ಕಂಡು ಕೋಪದಿ ನೂಕುವೆ| ದೀನತ್ವದಿಂದ ಒಬ್ಬರಿಗೆ ರುವ್ವಿ ಕೊಡದಲೆ ಧನಗಳಿಸಿ ಕೂಡ್ಹಾಕುವೆ | ಏನು ಮಾಡಲಿ ಜನ್ಮ ವ್ಯರ್ಥವಲ್ಲದೆ ಕೆಟ್ಟೆ ನೀನೆ ರಕ್ಷಕನು ಕಾಯೊ ದೇವ || ೨ || ಸತಿಸುತರ ಮೆಚ್ಚಿ ತಾಯಿತಂದೆಯು ಕೂಡೆ ಅತಿ ದ್ವೇಷವನು

ಮಾಡುವೆ । ಪ್ರತ್ಯೇಕ ವಂಚಿಸಲಿ ಪಗತನದಿ ಮನೆಯೊಳಗೆ ನಿಗ್ರಹವ ಮಾಡುವೆ ॥ ಕಥೆ ಪುರಾಣಶ್ರವಣ ಮಾಡುವರ ಬಳಿಗ್ಹೋಗಿ ಪ್ರತಿಭಂಡ ಮಾತಾಡುವೆ । ಚಿತ್ತಜನ ಪಡೆದಂಥ ಅಚ್ಯುತನೇ ಲಾಲಿಸೋ ಕುತ್ಸಿತ ಬುದ್ಧಿಗಳ ಬಿಡಿಸೊ ದೇವ ॥ ೩ ॥ ಇರುಳು ಹಗಲು ಮನಸಿನೊಳು ಕ್ಷಣ ಮಾತಿನ ಧ್ಯಾನ ಹರಿಯೆಂದು ಸ್ಮರಿಸಲಿಲ್ಲ । ಘಳಘಳನೆ ಪರರಂಗನೆಯರ ಚೆಲುವಿಕೆ ಕಂಡು ಬಿದ್ದೊದ್ದರಳಿ ಕೆಟ್ಟೆನಲ್ಲ । ಶ್ರೀರಮಣ ಕ್ಷಮಿಸಯ್ಯ ಸರ್ವಾಪರಾಧಗಳ ನಿನ್ನ ಕಿಂಕರನೆನಿಸೊ ॥ ೪ ॥ ಕೆಟ್ಟ ಅಜಮಿಳಗೆ ನೀ ಕೊಟ್ಟೆ ಮುಕುತಿಯ ಬೇಗ ಕಾಯ್ದೆ ದ್ರೌಪದಿಮಾನವ । ಸೃಷ್ಟೀಶ ನೀನರಿಯೆ ಅವರ ಸರಿಯಾಗುವೆನೆ ದಾಸಾನುದಾಸ ನಾನು ॥ ಇಟ್ಟು ನಿನ್ನ ಪಾದದಡಿಯಲ್ಲಿ ಹಲಕಾಲ ಮನವಿಡ್ವಂತೆ ಮಾಡಲಿನ್ನ । ಸಟೆಯನಾಡುವನಲ್ಲ ಪುರಂದರವಿಠಲ ದಢ ಸೇರಿಸೋ ಎನ್ನನು ದೇವ ॥೫॥

## ೨೬೮ ರಾಗ ಮೋಹನ ಆದಿತಾಳ

ಏನನಿತ್ತು ಮೆಚ್ಚಿಸುವೆನೊ ಏನೊ ವಿಠಲ ॥ ಪ ॥ ದೀನರಕ್ಷಕನೆ ನಿನ್ನ ಧ್ಯಾನವೇನೊ ವಿಠಲ ॥ ಅ ॥ ಓದಿ ನಿನ್ನ ಮೆಚ್ಚಿಸುವೆನೆ । ವೇದವ ತಂದಜನಿಗಿತ್ತೆ ॥ ವಾದಿಸಿ ನಿನ್ನ ಮೆಚ್ಚಿಸುವೆನೆ । ಆದಿಶೇಷಶಯನನೆ ॥೧॥ ಆಡಿ ನಿನ್ನ ಮೆಚ್ಚಿಸುವೆನೆ । ಮೃಡನಯ್ಯನಯ್ಯನೆ ॥ ಪಾಡಿ ನಿನ್ನ ಮೆಚ್ಚಿಸುವೆನೆ । ಪವನಜನ ಸ್ವಾಮಿ ನೀನೆ ॥ ೨ ॥ ಚಿನ್ನವಿತ್ತು ಮೆಚ್ಚಿಸುವೆನೆ । ಸಿರಿದೇವಿಯರಸನೆ ॥ ಪೂರ್ಣಾನಂದಸ್ವಾಮಿ ನೀನೆ । ಪುರಂದರವಿಠಲ ನಿನ್ನ ॥ ೩ ॥

## ೨೬೯ ರಾಗ ಆನಂದಭೈರವಿ ಅಟತಾಳ

ಸಾಮಾನ್ಯವಲ್ಲ ಶ್ರೀಹರಿಸೇವೆ । ಪಾಮರ ಜನರಿಗೆ । ಸಾಮಾನ್ಯವಲ್ಲ ಶ್ರೀಹರಿಸೇವೆ ॥ ಪ ॥ ಸಾಮಜವರದನ ಪ್ರೇಮದಿ ನೆನೆವುದು । ತಾಮಸ ಬುದ್ಧಿಯ ತಾ ತಗ್ಗಿಸದೆ ॥ ಅ ॥ ಅಂತರ ಮಲಿನವಳಿಯಬೇಕು ಸಂತತ ಶ್ರವಣದಿ ಶ್ರೀ । ಕಾಂತನ ಚರಿತ ಕೇಳಲು ಬೇಕು ॥ ಸಂತತವಿರಬೇಕು

ಸಂತಜನರ ಗುಣ । ಸಂತತ ಮನದಿ ನಿರಂತರದಲಿ ತಾ ಚಿಂತಿಸಬೇಕು ||೧|| ಜ್ಞಾನಕರ್ಮೇಂದ್ರಿಯ ನಿಗ್ರಹಿಸಿ ಜ್ಞಾನವ ಸಂಗ್ರಹಿಸಿ । ಹೀನವೃದ್ಧಿಗಳೆರಡನುತಾ ಸಹಿಸಿ|| ದೀನತೆಯನು ವಹಿಸಿ ಮಾನಪ। ಮಾನ ಸಮಾನವೆಂದರಿದು ನಿ । ಧಾನದಿ ಹರಿಗುಣ ಧ್ಯಾನವ ಮಾಳ್ಪುದು ||೨|| ಸರ್ವಾಂತರ್ಯಾಮಿ ಶ್ರೀಹರಿಯೆಂದು । ಸರ್ವೇಶ್ವರನೆಂದು ಸ್ವರಮಣನೆಂದು || ಸರ್ವಾನುಗನೆಂದು ಸರ್ವಮೂರುತಿ ಪುರಂದರ ವಿಠಲನ। ಸರ್ವದಾ ಧ್ಯಾನಿಸಿ ಗರ್ವವಳಿಯಬೇಕು ||

## ೨೭೦ ರಾಗ ಕಾಂಭೋಜಿ ಅಟತಾಳ

ಸಂಸಾರವೆಂಬಂಥ ಭಾಗ್ಯವಿರಲಿ ||ಪ|| ಕಂಸಾರಿ ನೆನೆವಂಥ ಸೌಭಾಗ್ಯವಿರಲಿ || ಅ || ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ । ಪೊಂದಿದ ಅಣ್ಣನು ವನಜಸಂಭವನು || ಇಂದು ಮುಖಿ ಸರಸ್ವತೀದೇವಿಯೇ ಅತ್ತಿಗೆಯು । ಎಂದೆಂದಿಗೂ ವಾಯುದೇವರೇ ಗುರುವು ||೧|| ಭಾರತೀದೇವಿಯೇ ಗುರು ಪತ್ನಿಯು ಎನಗೆ । ಗರುಡ ಶೇಷಾದಿಗಳೆ ಗುರುಪುತ್ರರು|| ಹರಿದಾಸರೆಂಬುವರೆ ಇಷ್ಟಬಾಂಧವರೆನಗೆ। ಹರಿಜಭನೆ ನಡೆಯುತಿಹ ಸ್ಥಳವೆ ಮಂದಿರವು || ೨ || ಸರುವಾಭಿಮಾನವನು ತ್ಯಜಿಸುವುದೆ ಸುಸ್ನಾನ । ಹರಿಯ ನಾಮವೆ ಇನ್ನು ಅಮೃತಪಾನ || ವರದ ಪುರಂದರವಿಠಲ ನಿನ್ನ ಪಾದಧ್ಯಾನ । ಕರುಣಿಸಿ ಅನವರತ ಕರಪಿಡಿದು ಕಾಯೊ || ೩ ||

## ೨೭೧ ರಾಗ ಕಾಂಭೋಜಿ ಅಟತಾಳ

ವರುಷ ಕಾರಣವಲ್ಲ ಹರಿಭಜನೆಗೆ || ಪ || ಅರಿತು ತತ್ವಜ್ಞರು ಕೇಳಿ ಸನ್ಮುದದಿ ||ಅ|| ತರಳತನದಲಿ ಕಂಡ ಹರಿಯ ಧ್ರುವರಾಯನು । ಹಿರಿಯ ತಾನವನಪ್ಪ ಕಂಡನೇನೋ|| ತರಳ ಪ್ರಹ್ಲಾದನು ನರಹರಿಯ ತಾ ಕಂಡ। ಹಿರಿಯನವನಪ್ಪ ತಾ ಮರೆಯಲಿಲ್ಲೇನೋ || ೧ || ಹಿರಿದಾಗಿ ಬಹುಕಾಲ ಮರದ ಮೇಲ್ ಬಾಳುವ । ಇರುಳುಗಣ್ಣಿನ ಗೂಬೆ ತಾ ದೊಡ್ಡದೆ || ಮರಿಯಾದ ಅರಗಿಣಿಯು ಹರಿ ಕೃಷ್ಣ ಎಂದೊದರೆ। ಮರಿ ದೊಡ್ಡದೆಂತೆಂದು

ಪೇಳುವದು ಜನರು ॥ ೨ ॥ ಸರುವದಾ ಒದರುವರು ಅರಣ್ಯವಾಸಿಗಳು । ಮರವಡಿಗೆ ಬಿದ್ದ ಎಲೆಗಳ ತಿನ್ನುತ॥ ಪರಮಪಾತಕಿ ಅಜಾಮಿಳನು ನಾರಗ ಎನಲು । ಭರದಿಂದ ಸಲಹಿದನು ಪುರಂದರವಿಠಲ ॥ ೩ ॥

## ೨೭೨ ರಾಗ ಕಾಂಭೋಜಿ ಝಂಪೆತಾಳ

ಎಷ್ಟಾದರು ಮುನ್ನ ಕೊಟ್ಟಲ್ಲದಿಲ್ಲ ॥ ಪ ॥ ಪಡೆ । ದಷ್ಟೆ ಅಲ್ಲದೆ ಬೇರೆ ಬಯಸಿದರಿಲ್ಲ ॥ಅ॥ ಯಾರಾರ ಮನೆಗೆಳಿಗೆ ಹೋಗಿ ಬಂದರು ಇಲ್ಲ । ಊರ ನಾಳುವ ದೊರೆಯ ಸೇರಿದರಿಲ್ಲ ॥ ನೀರೊಳಗೆ ತಾ ಮುಳುಗಿ । ಜಪವ ಮಾಡಿದರಿಲ್ಲ। ಹೇರಳ ವಿದ್ಯೆಗಳ ಕಲಿತರಿಲ್ಲ ॥ ೧ ॥ ತನ್ನೊಡನೆ ಪುಟ್ಟಿಹರ ಭಾಗ್ಯವು ತನಗಿಲ್ಲ । ಹೆಣ್ಣಿನ ದೆಸೆಯಿಂದ ಬಾಹೋದಿಲ್ಲ ॥ ಅನ್ಯರನು ನೋಡಿ ತಾ ಕರಗಿ ಕೊರಗಿದರಿಲ್ಲ । ತನ್ನ ಮಕ್ಕಳು ಪಡೆದ ಪುಣ್ಯ ತನಗಿಲ್ಲ ॥೨॥ ಬಿಟ್ಟ ದುಡಿದು ಬಾಯ ಬಿಟ್ಟು ಬೇಡಿದರಿಲ್ಲ । ಕಟ್ಟಾಳು ತಾನಾದರೇನು ಫಲವಿಲ್ಲ ॥ ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ । ಮುಟ್ಟಿ ಪೂಜಿಸಿದ ರುಣಲುಂಟು ಉಡಲುಂಟು ॥೩॥

## ೨೭೩ ರಾಗ ಕಲ್ಯಾಣಿ ಅಟತಾಳ

ಯಾಕೆ ಕಕುಲಾತಿ ಪಡುವೆ ಎಲೆ ಮರುಳೆ ॥ ಪ ॥ ಲೋಕ ಮೂರನು ಆಳ್ವ ಶ್ರೀನಿವಾಸನು ನಮ್ಮ । ಸಾಕಲಾರದೆ ಬಿಟುವನು ಮರುಳೆ ॥ ಅ ॥ ಕಲ್ಲುಪಡೆಯಲ್ಲಿ ಹುಟ್ಟಿರುವ ಮಂಡೂಕಕೆ । ಅಲ್ಲಿ ತಂದಿಡುವರಾರೋ ॥ ಎಲ್ಲವನು ತೊರೆದಿರುವ ಅರಣ್ಯವಾಸಿಯನು । ಅಲ್ಲೆ ಸಲಹದೆ ಬಿಡುವನೇ ಮರುಳೆ ॥ ೧ ॥ ಅಡವಿಯೊಳು ಹುಟ್ಟುವ ಮೃಗಜಾತಿಗಳಿಗೆಲ್ಲ । ಬಿಡದೆ ತಂದಿಡುವರಾರೋ ॥ ಗಿಡದಿಂದ ಗಿಡಗಳಿಗೆ ಹಾರುವ ಪಕ್ಷಿಗೆ। ಪಡಿಯನಳೆ ಯದೆ ಬಿಡುವನೇ ಮರುಳೆ ॥೨॥ ಎಂಭತ್ತುನಾಲ್ಕುಲಕ್ಷ ಜೀವರಾಶಿಗಳನ್ನು। ಇಂಬಾಗಿ ಸಲಹುತಿಹನು ॥ ನಂಬು ಶ್ರೀಪುರಂದರವಿಠ್ಠಲನ ಚರಣವನು । ನಂಬಿದರೆ ಸಲಹದಿಹನೇ ಮರುಳೆ ॥ ೩ ॥

## ೨೭೪ ರಾಗ ನಾದನಾಮಕ್ರಿಯೆ ಅಟತಾಳ

ಲಂಗೋಟಿ ಬಲುವೊಳ್ಳೆದಣ್ಣ । ಒಬ್ಬ । ಹಂಗಿಲ್ಲದೆ ಮಡಿಗೆ ಒದಗುವು ದಣ್ಣ ॥ಪ॥ ಬಡವರಿಗಾಧಾರವಣ್ಣ । ಈ ಲಂಗೋಟಿ । ಬೈರಾಗಿಗಳ ಭಾಗ್ಯ

ವಣ್ಣ || ಕಡುಕಳ್ಳರಿಗೆ ಗಂಡ ಪುಡಿಥೋತ್ರಗಳ ಮಿಂಡ | ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ ||೧|| ಜಿತಮನ ಸನ್ಯಾಸಿಗಳಿಗಿದೆ ಕೌಪೀನ| ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು || ಅತಿಶಯವಿದೆ ಅಂಜನೇಯ ನಾರದರಿಗೆ | ಗತಿಯಿಲ್ಲದವರಿಗೆ ಮಿತವಾಗಿ ಇರುವಂಥ ||೨|| ದುಡ್ಡು ಮುಟ್ಟದಂತೆ ದೊರಕುವ ವಸ್ತುವು | ದೊಡ್ಡ ಅರಣ್ಯದಿ ಭಯವಿಲ್ಲವು || ಹೆಡ್ಡರೆಂಬುವರೇನೊ ಲಂಗೋಟಿ ಜನರನ್ನು | ದೊಡ್ಡವರೆಂದು ವಂದಿಸುವರು ಯತಿಗಳ|| ||೩|| ಮೋಕ್ಷಮಾರ್ಗಕೆ ಕಲ್ಪವೃಕ್ಷವೀ ಲಂಗೋಟಿ | ಭಿಕ್ಷಗಾರರಿಗೆಲ್ಲ ಅನುಕೂಲವು|| ತತ್‍ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ| ರಕ್ಷಣೆಗೆ ಬಹು ರಮ್ಯವಾಗಿರುವಂಥ || ೪ || ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ | ಪೊಡವಿಯೊಳ್ ಯಾಚಕರಿಗೆ ನೆರವು|| ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ | ಒಡೆಯ ಶ್ರೀಪುರಂದರವಿಠಲ ಧರಿಸಿದಂಥ ||೫||

## ೨೭೫ ರಾಗ ಪೂರ್ವಿ ಆದಿತಾಳ

ಕುರುಡ ನಾಯಿ ತಾ ಸಂತೆಗೆ ಬಂತಂತೆ | ಅದು ಏತಕೆ ಬಂತೋ ||ಪ|| ಖಂಡ ಸಕ್ಕರೆ ಹಿತವಿಲ್ಲವಂತೆ | ಖಂಡು ಎಲುಬು ಕಡಿದಿತಂತೆ || ಹೆಂಡಿರ ಮಕ್ಕಳ ನೆಚ್ಚಿತಂತೆ | ಕೊಂಡುಹೋಗುವಾಗ ಯಾರಿಲ್ಲವಂತೆ ||೧|| ಭರದಿ ಅಂಗಡಿ ಹೊಕ್ಕಿತಂತೆ | ತಿರುವಿ ದೊಣ್ಣೆಯಲಿ ಇಕ್ಕಿದರಂತೆ || ಮರೆತರಿನ್ನು ವ್ಯರ್ಥವಂತೆ | ನರಕದೊಳಗೆ ಬಿದ್ದಿತಂತೆ ||೨||; ವೇದವಾದಗಳನೋದಿತಂತೆ ಗಾದೆ ಮಾಡಿ ಬಿಟ್ಟಿತಂತೆ || ಹಾದಿ ತಪ್ಪಿ ನಡೆದು ಯಮನ | ಬಾಧೆಗೆ ತಾ ಗುರಿಯಾಯಿತಂತೆ ||೩|| ನಾನಾ ಜನ್ಮವನೆತ್ತಿತಂತೆ | ಮಾನವನಾಗಿ ಹುಟ್ಟಿತಂತೆ || ಕಾನನ ಕಾನನ ತಿರುಗಿತಂತೆ || ತಾನು ತನ್ನನೆ ಮರೆಯಿತಂತೆ || || ೪ || ಮಂಗನ ಕೈಯ ಮಾಣಿಕ್ಯವಂತೆ | ಹಾಂಗೂ ಹೀಂಗೂ ಕಳದೀತಂತೆ || ರಂಗಪುರಂದರವಿಠಲನ ಮರೆದು | ಭಂಗ ಬಹಳ ಪಟ್ಟಿತಂತೆ ||೫||

## ೨೭೬ ರಾಗ ಕಾಂಭೋಜಿ ಝಂಪೆತಾಳ

ಮಂದಮತಿಯೋ ನಾನು ಮದನಜನಕನು ನೀನು | ಕುಂದುಗಳನೆಣಿಸದೆ ದಯಮಾಡಿ ಸಲಹೊ ||ಪ|| ಪಾಪಕರ್ತನು ನಾನು ಪಾಪನಾಶನ ನೀನು |

ಕೋಪ ಮದ ಮತ್ಸರದಿ ಸುಳಿವೆ ನಾನು ॥ ತಾಪವನು ತರಿದು ನಿರ್ಭಯವ ಮಾಡುವೆ ನೀನು । ರೂಪ ಛಾಯಕೆ ಮರುಳುಗೊಂಬೆನೋ ನಾನು ॥೧॥ ಶರಣರಕ್ಷಕ ನೀನು ಪರಮಪಾತಕಿ ನಾನು । ದುರಿತಪರ್ವತ ಪರಿಹರಿಪೆ ನೀನು ॥ ಮರುಳುಗೊಂಬೆನು ನಾನು ಅರಿತು ರಕ್ಷಿಪೆ ನೀನು । ಗರುವಾಹಂಕಾರಿ ನಾನು ಅಗಮ್ಯ ನೀನು ॥೨॥ ಮಂದಭಾಗ್ಯನು ನಾನು ಇಂದಿರಾಪತಿ ನೀನು । ಹಿಂದುಮುಂದಿನ ಸುದ್ದಿ ಅರಿಯುವವ ನಾನು ॥ ತಂದೆ ಶ್ರೀಪುರಂಪರವಿಠಲರಾಯನೆ । ಎಂದೆಂದು ಭಕ್ತರನು ಸಲಹುವೆಯೊ ನೀನು ॥

## ೨೭೭ ರಾಗ ಕಾಂಭೋಜಿ ಝಂಪೆತಾಳ

ಮಾನಭಂಗವ ಮಾಡಿ ಮತ್ತೆ ಉಪಚಾರಗಳ । ನೇನ ಮಾಡಿದರಲ್ಲಿ ಇರಬಾರದಯ್ಯ ॥ ಪ ॥ ಕುಂದುಗಳನೆತ್ತಿ ಕುಚೋದ್ಯ ಕುಮಂತ್ರಗಳ । ನೊಂದೊಂದು ವರ್ಣಗಳನೆತ್ತಿ ಜರೆದು ॥ ಮುಂದೆ ಭಂಗಿಸಿ ಹಿಂದೆ ಉಂಬಳಿಯ ನೀಡುವುದು । ಮುಂದಲೆಯ ಕೊಯ್ದು ಮುಡಿಗನ್ನವ ಮುಡಿಸಿದಂತೆ॥ ॥ ೧ ॥ ನಗೆಗೀಡು ಮಾಡಿ ನಾಲ್ವರ ಮುಂದೆ ಮೊಗಗೆಡಿಸಿ । ಮಗುಳೆ ಬಾರೆಂದು ಮನ್ನಿಸಿ ಲಾಲಿಸಿ ॥ ಮಿಗಿಲಾದ ವಸ್ತ್ರಗಳ ಭೂಷಣಂಗಳನೀಯೆ। ತೊಗಲ ಮೂಗ್ಹರಿದು ಚಿನ್ನದ ಮೂಗನಿತ್ತಂತೆ ॥ ೨ ॥ ಅರ್ಥ ಹೋದರೆ ಪ್ರಾಣ ಪ್ರಾಣ ಹೋದರೆ ಮಾನ । ವ್ಯರ್ಥವಾಗದ ಹಾಗೆ ಕಾಯಬೇಕು ॥ ಕರ್ತ ಶ್ರೀಪುರಂದರವಿಠಲರಾಯನ । ಚಿತ್ತದಲಿ ನೆನೆನೆನೆದು ಸುಖಿಯಾಗಬೇಕು ॥ ೩ ॥

## ೨೭೮ ರಾಗ ಆರಭಿ ಆದಿತಾಳ

ಲಾಲಿಸಿದಳು ಮಗನ । ಯಶೋದೆ । ಲಾಲಿಸಿದಳು ಮಗನ ॥ ಪ ॥ ಅರಳೆಲೆ ಮಾಗಾಯಿ ಬೆರಳಿಗುಂಗುರವಿಟ್ಟು। ತರಳನ ಮೈಸಿರಿ ತರುಣಿ ನೋಡುತ ಹಿಗ್ಗಿ ॥ ೧ ॥ ಬಾಲಕನೆ ಕೆನೆಹಾಲು ಮೊಸರನೀವೆ । ಲೀಲೆಯಿಂದಲಿ ಎನ್ನ ತೋಳ ಮೇಲ್ ಮಲಗೆಂದು ॥ ೨ ॥ ಮುಗುಳು ನಗೆಯಿಂದ ಮುದ್ದು ತಾ ತಾರೆಂದು । ಜಗದೊಡೆಯನ ಶ್ರೀಪುರಂದರವಿಠಲನ ॥೩॥

## ೨೭೯ ರಾಗ ಶಂಕರಾಭರಣ ಆದಿತಾಳ

ಲಕ್ಷ್ಮೀಕಾಂತ ಬಾರೋ ಶುಭ। ಲಕ್ಷಣವಂತ ಬಾರೋ। ಪಕ್ಷಿವಾಹನ ವೇರಿದವನೆ ಬಾರೋ ಪಾವನಮೂರ್ತಿ ಬಾರೋ॥ಪ॥ ಆದಿಮೂಲ ವಿಗ್ರಹ ವಿನೋದಿ ನೀನೆ ಬಾರೋ। ಸಾಧುಸಜ್ಜನ ಸತ್ಯಯೋನಿ ದಾನಿ ನೀನೆ ಬಾರೋ॥೧॥ ಗಾಡಿಗಾರ ಕೃಷ್ಣ ನಿನ್ನ ಬೇಡಿಕೊಂಬೆ ಬಾರೋ। ರೂಢ ಮಾತನಾಡಿ ಸರ್ವರೂಢಿಗೊಡೆಯ ಬಾರೋ॥೨॥ ನಿನ್ನ ಪಾದಂಗಳ ನಾನು ಬಣ್ಣಿಸಿ ಕರೆವೆ ಬಾರೋ। ಪನ್ನಗಶಯನ ಪುರಂದರವಿಠಲ ಬಾರೋ॥೩॥

## ೨೮೦ ರಾಗ ಕಾಂಭೋಜಿ ಝಂಪೆತಾಳ

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ॥ಪ॥ ವಾಸುದೇವನ ಭಜಿಸಿ ಸುಖಿಯಾಗು ಮನವೆ॥ ಅ ॥ ಮಡದಿ ಮಕ್ಕಳು ಎಂದು ಒಡವೆ ವಸ್ತುಗಳೆಂದು। ಸಡಗರದಿ ತಾ ಕೊಂಡು ಭ್ರಮಿಸಲೇಕೆ॥ ಬಿಡದೆ ಯಮನಾಳುಗಳು ಬಾರೆಂದು ಎಳೆವಾಗ। ಮಡದಿ ಮಕ್ಕಳು ಕಡೆಗೆ ತೊಲಗುವರೊ ಮರುಳೆ॥ ॥೧॥ ನೆಂಟರೂರಿಗೆ ಹೋಗಿ ನಾಲ್ಕು ದಿನವಿದ್ದರೆ। ಎಂಟು ದಿನದಾಯಾಸ ಹೋಗುವಂತೆ॥ ಉಂಟು ಸೌಭಾಗ್ಯವೆಂತೆಂಬ ಧೈರ್ಯವ ಬಿಟ್ಟು ವೈ। ಕುಂಠನ ಭಜಿಸು ಭ್ರಷ್ಟ ಮನವೆ॥೨॥ ಉಂಟು ಆಶ್ರಯವೆಂದು ಬಡವನ ಕರೆತಂದು। ಕೊಟ್ಟು ಮಾಡಿದ ಧರ್ಮ ಫಲ ತನ್ನದು॥ ಇಷ್ಟಮೂರುತಿ ನಮ್ಮ ಪುರಂದರವಿಠಲನ। ನಿಷ್ಠೆಯಿಂದಲಿ ಭಜಿಸು ದುಷ್ಟ ಮನವೆ॥ ೩ ॥

## ೨೮೧ ರಾಗ ಶಂಕರಾಭರಣ ಆದಿತಾಳ

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ। ಮಗಳೆ ಮನ। ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ॥ ಪ ॥ ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ। ಮಗಳೆ। ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ॥ ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ। ಮಗಳೆ। ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ॥ ೧॥ ಕೊಟ್ಟುಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ। ಮಗಳೆ। ಅಟ್ಟು ಉಂಬುವ ಕಾಲದಲ್ಲಿ

ಆಟ ಬೇಡಮ್ಮ || ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ | ಮಗಳೆ| ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ||೨|| ನೆರೆಹೊರೆಯವರಿಗೆ ನ್ಯಾಯ ವನ್ನು ಹೇಳಬೇಡಮ್ಮ | ಮಗಳೆ | ಗರುವ ಕೋಪ ಮತ್ಸರವನ್ನು ಮಾಡ ಬೇಡಮ್ಮ || ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ | ಮಗಳೆ| ಗುರು ಪುರಂದರವಿಠಲನ ಸ್ಮರಣೆ ಮರೆಯಬೇಡಮ್ಮ ||೩||

## ೨೮೨ ರಾಗ ಕಾಂಭೋಜಿ ಝಂಪೆತಾಳ

ದಾಸನೆಂತಾಗುವೆನು ಧರೆಯೊಳಗೆ ನಾನು ||ಪ|| ವಾಸುದೇವನಲ್ಲಿ ಲೇಶ ಭಕುತಿಯು ಕಾಣೆ || ಅ || ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು| ಗೋಟಂಚು ಧೋತರ ಮಡಿಯನುಟ್ಟು|| ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ | ಬೂಟಕತನ ನೋಡಿ ಭ್ರಮಿಸದಿರಿ ಜನರೆ ||೧|| ಅರ್ಥದಲ್ಲೇ ಮನಸು ಆಸಕ್ತವಾಗಿದ್ದು | ವ್ಯರ್ಥವಾಯಿತು ಜನ್ಮ ವಸುಧೆ ಯೊಳಗೆ || ಅರ್ಥಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ | ಸತ್ಯ ಶೌಚಗಳ ರಿಯೆ ಸಜ್ಜನರು ಕೇಳಿ || ೨ || ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ | ಸಂಧ್ಯಾನ ಜಪತಪಗಳೊಂದನರಿಯೆ || ಒಂದು ಸಾಧನ ಕಾಣೆ ಪುರಂದರ ವಿಠಲನ | ದ್ವಂದ್ವಪಾದವ ನಂಬಿ ಅರಿತು ಭಜಿಸದಲೆ || ೩ ||

## ೨೮೩ ರಾಗ ಮೋಹನ ಅಟತಾಳ

ನಿನ್ನ ದಿವ್ಯ ಮೂರುತಿಯ ಕಣ್ಣುತಣಿಯ ನೋಡಿ | ಧನ್ಯನಾದೆನೊ ಧರೆಯೊಳು || ಪ || ಇನ್ನು ಈ ಭವಭಯಕೆ ಅಂಜಲೇತಕೊ | ಚೆನ್ನ ಸಿರಿ ವೇಂಕಟೇಶ | ಶ್ರೀಶ || ಅ || ಏಸು ಜನ್ಮದ ಪುಣ್ಯ ಬಂದೊದಗಿತೋ ಶ್ರೀ ಸ್ವಾಮಿಪುಷ್ಕರಣಿ | ಯೊಳ್ ಸ್ನಾನ ಜಪತಪಮಾಡಿ ವರಹದೇವರ ನೋಡಿ ಶ್ರೀಸ್ವಾಮಿಮಹಾದ್ವಾರಕೆ || ಈ ಶರೀರವನು ಈಡಾಡಿ ಪ್ರದಕ್ಷಿಣೆ ಮಾಡಿ ಲೇಶದಿಂ ಪೊಗಳುತಲಿ| ಆ ಸುವರ್ಣದ ಗರುಡಕಂಭವನೆ ನೋಡಿ ಸಂತೋ ಷದಿಂ ಕೊಂಡಾಡಿದೆ | ಬಿಡದೆ || ೧ || ನೆಟ್ಟನೆರಡನೇ ದ್ವಾರವನೆ ದಾಂಟಿ ಪೋಗುತಲಿ ದಟ್ಟಣೆಯು ಬಹು ಜನದಲಿ| ಘಟ್ಟ ಮನದಲಿ ತಲೆಯ ಚಿಟ್ಟ

ಡುತ ನೆಟ್ಟನೇ ಕಟ್ಟಾಂಜನಕೆ ತಾ ಬರುತಲಿ॥ ಕೃಷ್ಣಾಜಿನದವರ ಪೆಟ್ಟಿಗಳ ಕಾಣುತಲಿ ಕಂಗೆಟ್ಟು ಹರಿಯೆನುತಲಿ। ಬೆಟ್ಟದಧಿಪತಿ ನಿನ್ನ ದೃಷ್ಟಿಂದ ಕಾಣುತಲಿ ಸುಟ್ಟಿತೆನ್ನಯ ದುರಿತವು। ಸರ್ವವು ॥೨॥ ಶಿರದಲ್ಲಿ ರವಿಕೋಟಿ ತೇಜದಿಂದೆಸೆವಂಥ ವರ ಕಿರೀಟವು ಕುಂಡಲ । ಕೊರಳೊಳಿಹ ಸರಿಗೆ ವೈಜಯಂತಿಯಮಾಲೆ ಪರಿಪರಿಯ ಹಾರಗಳನು ॥ ಉರದಿ ಶ್ರೀವತ್ಸವನು ಕರದಿ ಶಂಖಚಕ್ರಗಳು ವರನಾಭಿ ಮಾಣಿಕವನು । ನಿರುಪಮ ಮಣಿಖಚಿತ ಕಟಿಸೂತ್ರ ಪೀತಾಂಬ್ರ ಚರಣದ್ವಯಪಂದುಗೆಯನು ॥ಇನ್ನು ॥೩॥ ಇಕ್ಷು ಚಾಪನಪಿತನೆ ಪಕ್ಷೀಂದ್ರವಾಹನನೆ ಲಕ್ಷ್ಮೀಪತಿ ಕಮಲಾಕ್ಷನೆ। ಅಕ್ಷಯ ಅಜ ಸುರೇಂದ್ರಾದಿವಂದಿತನೆ ಸಾಕ್ಷಾಜ್ಜಗನ್ನಾಥನೆ ॥ ರಾಕ್ಷಸಾಂತಕನೆ ನಿರ ಪೇಕ್ಷ ನಿತ್ಯತೃಪ್ತನೆ ನಿರುಪಮ ನಿಸ್ಸೀಮನೆ। ಕುಕ್ಷಿಯೊಳಗೀರೇಳು ಲೋಕ ವನು ತಾಳ್ದವನೆ ರಕ್ಷಿಸುವುದೆಂದು ದಯದಿ । ಮುದದಿ ॥ ೪ ॥ ಉರಗಗಿರಿ ಅರಸು ನಿಮ್ಮ ಚರಣಗಳ ಕಂಡ ಮೇಲೆ ಉರಗ ಕರಿ ವ್ಯಾಘ್ರ ಸಿಂಹ। ಅರಸು ಚೋರಾಗ್ನಿ ವೃಶ್ಚಿಕ ಮೊದಲಾದ ಪರಿಪರಿಯ ಬಹಳ ಭಯವು ॥ ಪರಮವಿಷಲಂಪಟರೊಳಗೆ ನಾ ಸಿಗದಂತೆ ಕರುಣಿಸುವುದೊಲಿದು ದಯದಿ। ಸ್ಮರಗಧಿಕಲಾವಣ್ಯ ತಂದೆ ಪುರಂದರವಿಠಲ ಶರಣಜನಕರುಣಾರ್ಣವ । ದೇವ ॥ ೫ ॥

## ೨೮೪ ರಾಗ ಕೇದಾರಗೌಳ ತ್ರಿಪುಟತಾಳ

ಕರೆದು ಮುದ್ದಿಸುವ ಗೋಪಿಯ ಭಾಗ್ಯಕೆಣೆಯುಂಟೆ ॥ ಪ ॥ ಗುರು ಕುಲಾಂಬುಧಿಚಂದ್ರ ಕೃಷ್ಣ ಬಾ ಬಾರೆಂದು ॥ ಅ ॥ ಸವ್ಯಹಸ್ತದಿ ಅಪಸವ್ಯ ಕರವ ಪಿಡಿದು । ನವ್ಯಸುಧಾಂಗುಲಿ ಸವಿಯುತಲಿ ॥ ಅವ್ಯಕ್ತಮಧುರೋಕ್ತಿ ಗಳಿಂದಲಾಡುವ । ಭವ್ಯಮೂರುತಿ ಕೃಷ್ಣ ಪರಮಪುರುಷನೆಂದು ॥ ೧ ॥ ಒಂದು ಕುಚವನುಣುತ ಮತ್ತೊಂದು ಕುಚವ ಪಿಡಿದು । ಸಂದಿಲಿ ಮೊಗವ ನಾಲೋಕಿಸುತ ॥ ಚಂದದಿ ಕಿರುನಗೆಯಿಂದ ಬೊಮ್ಮಾಂಡವ। ಅಂದು ಬಾಯೊಳು ತೋರ್ದ ಕೃಷ್ಣ ಬಾ ಬಾರೆಂದು ॥ ೨ ॥ ಆನೆ ಬಂತೊಂದಾನೆ ಯೆನಲು ತೊಡೆಯಲ್ಲಿ। ನಿನೀಟಿಸೆ ಲೋಕಂಗಳು ಬೆರಗಾಗುತ ॥ ಜ್ಞಾನ

ನಿಧಿಯೆ ಗುರುಪುರಂದರವಿಠಲ ೩ |ದೇಸೊ ನಿನ್ನ ಮಹಿಮೆ ನಾನೇನರಿಯೆ ನೆಂದು || ೩ ||

## ೨೮೫ ರಾಗ ಬೇಹಾಗ್ ಅಟತಾಳ

ಈತ ಮುಖ್ಯಪ್ರಾಣನಾಥ || ಪ || ಈತ ಶ್ರೀರಾಮಸೇವಕನೆನಿಸಿದಾತ || ||ಅ|| ಭಾನುವಿನ ತುಡುಕಿದಾತ ಭಾರತಕೆ ಬಂದಾತ | ವಾನರೋತ್ತಮ ಹನುಮ ಹರಿಶರಣನೀತ || ೧ || ವಾರಿಧಿಯ ನೆಗೆದಾತ ವನಚರಾಗ್ರೇಸರ ನೀತ | ವಾರಿಜಾಕ್ಷಿಗೆ ಮುದ್ರಿಕೆ ವಹಿಸಿ ಇತ್ತಾತ || ೨ || ಲಂಕಿಣಿಯ ಗೆಲಿದಾತ ಲಂಕೆಯನು ಉರಿಸಿದಾತ | ಪಂಕಜೋದ್ಭವನ ಪಟ್ಟಭದ್ರನೀತ ||೩|| ವಾನರೋತ್ತಮನೀತ ವಸುಧೆಗೆ ವೆಗ್ಗಳನೀತ | ದಾನವಾಂತಕ ಹನುಮ ದಶಪ್ರಮತಿಯೀತ || ೪ || ಸ್ಮರನಂಬು ಗೆಲಿದಾತ ಶರಣಜನರಿಗೆ ದಾತ | ಸಿರಿಪುರಂದರವಿಠಲಗೆ ಅಚ್ಛಿನ್ನ ಭಕ್ತನೀತ ||೫||

## ೨೮೬ ರಾಗ ಗೌಳ ಝಂಪೆತಾಳ

ಈ ಜೀವವಿದ್ದು ಫಲವೇನು ಚೆಲುವ | ರಾಜೀವಲೋಚನನ ನೆನೆಯದ ಪಾಪಿ ತನುವಿನಲಿ || ಪ || ಅರುಣಉದಯದಲೆದ್ದು ಹರಿಯ ಸ್ಮರಣೆಯ ಮಾಡಿ | ಗುರುಹಿರಿಯರ ಮನದಲ್ಲಿ ನೆನೆದು ನೆನೆದು || ಪರಮ ಸುಖಿಯಾಗಿ ನದಿಯೊಳು ಮಿಂದು ರವಿ | ಗರ್ಘ್ಯವನೆರೆಯದ ಪಾಪಿತನುವಿನಲಿ ||೧|| ಹೊನ್ನಕಲಶದಲಿ ಅಘ್ರ್ಯೋದಕವ ಶ್ರೀಹರಿಗೆ | ಚೆನ್ನಾಗಿ ಅಭಿಷೇಕವನು ಮಾಡಿ || ರನ್ನದುಡಿಗಳ ಉಡಿಸಿ ರತ್ನಗಳ ಅಳವಡಿಸಿ | ಕಣ್ಣಿನಲಿ ನೋಡಲರಿಯದ ಕಪಟತನುವಿನಲಿ || ೨ || ತುಲಸಿದಳಗಳ ಪುಷ್ಪಮಾಲಿಕೆಯ ನವರತ್ನ | ಹೊಳೆವ ಕೌಸ್ತುಭ ಕೊರಳಲ್ಲಿ ಪದಕ || ನಳಿನಾಕ್ಷಗಿಟ್ಟು ಕರ್ಪೂರದಾರತಿಯೆತ್ತಿ | ಕಣ್ಣಿನಲಿ ನೋಡಲರಿಯದ ಕಪಟತನುವಿನಲಿ ||೩|| ಪರಿಪರಿಯ ಭಕ್ಷ್ಯಪಾಯಸ ಶಾಕ ಶಾಲ್ಯನ್ನ | ವರರಸ ಘೃತ ಗುಡ ಕ್ಷೀರ ದಧಿಯ || ಪರಮಪುರುಷಗೆ ತಂದು ನೈವೇದ್ಯವನೆ ಮಾಡಿ | ಹರುಷದಲಿ ಕೈಮುಗಿಯಲರಿಯದ ಕಪಟತನುವಿನಲಿ ||೪|| ನಿತ್ಯನೈಮಿತ್ಯ ಕರ್ಮ

ಗಳನು ಮಾಡಿ ಬಹು । ಅರ್ತಿಯಿಂದ ಅತಿಥಿಗಳನೆಲ್ಲ ಕರೆಸಿ ॥ ವಿತ್ತವಿದ್ದಾಗಲೇ ಹರಿಯ ಪೂಜೆಯ ಮಾಡಿ ಸ। ರ್ವೋತ್ತಮನ ಪ್ರೀತಿಬಡಿಸದ ವ್ಯರ್ಥತನುವಿನಲಿ ॥ ೫ ॥ ಪ್ರತಿದಿನವು ಹರಿನಾಮ ಸಕಲ ವೇದಪುರಾಣ । ಕಥೆಗಳನು ಕೇಳಿ ಮನದಣಿದು ದಣಿದು ॥ ಅತಿಶಯದ ಮಧ್ವಮತವನನುಸರಿಸದೆ ಪರ । ಗತಿಗೆ ಸಾಧನವ ಸಾಧಿಸಲರಿಯದಿಹ ಮೂಢ ಈ ತನುವಿನಲಿ ॥೬॥ ಉರಗಾದ್ರಿಯಲಿ ಚಂದ್ರಪುಷ್ಕರಣಿ ಮೊದಲಾದ । ಪರಿಪರಿ ತೀರ್ಥದಲಿ ಮುಣುಗಿ ಮುಣುಗಿ ॥ ತಿರುವೇಂಗಳಪ್ಪ ಶ್ರೀಪುರಂದರವಿಠಲನ । ಚರಣ ಸೇವೆಯ ಮಾಡಲರಿಯದ ಕಪಟತನುವಿನಲಿ ॥೭॥

### ೨೮೭ ರಾಗ ಮೋಹನ ತ್ರಿಪುಟತಾಳ

ಏನೇನು ಮಾಡಿದರೇನು ಫಲವಯ್ಯಾ ॥ ಪ ॥ ಭಾನುಕೋಟಿತೇಜ ಶ್ರೀನಿವಾಸನ್ನ ಭಜಿಸದೆ ॥ ಅ ॥ ಹಲವು ಓದಿದರೇನು ಕೆಲವು ಕೇಳಿದರೇನು । ಜಲದೊಳಗೆ ಮುಳುಗಿ ಕುಳಿತಿದ್ದರೇನು ॥ ಛಲವಾಗಿ ಮುಸುಕಿಟ್ಟು ಬೆರಳನೆಣಿಸಿದರೇನು । ಚೆಲುವ ದೇವನೊಳು ಎರಕವಿಲ್ಲದ ತನಕ ॥ ೧ ॥ ಅನ್ನ ಜರಿದು ಅರಣ್ಯ ಚರಿಸಿದರೇನು । ಉನ್ನತ ವ್ರತಗಳಾಚರಿಸಿದರೇನು ॥ ಚೆನ್ನೆಗಾತಿಯರ ಸಂಗ ಬಿಟ್ಟು ಇದ್ದರೇನು । ಗಾನಲೋಲನಲ್ಲಿ ಎರಕವಿಲ್ಲದನಕ ॥೨॥ ಬತ್ತಲೆ ತಿರುಗಿ ಅವಧೂತನೆನಿಸಿದರೇನು । ತತ್ತ್ವವಾಕ್ಯಂಗಳ ಪೇಳಿದರೇನು ॥ ಚಿತ್ತಜನಯ್ಯ ಶ್ರೀಪುರಂದರವಿಠಲನ್ನ । ಚಿತ್ತದೊಳಿರಿಸಿ ಒಲಿಸಿಕೊಳ್ಳುವ ತನಕ ॥೩॥

### ೨೮೮ ರಾಗ ಗಮನಕ್ರಿಯೆ ಮಟ್ಟೆತಾಳ

ನೀನೇ ಗತಿಯೆನಗೆ ವನಜನೇತ್ರೆ ॥ಪ॥ ಕೈಲಾಸ ಎಂಬೋದು ಕಣ್ಣಿಲಿ ಕಾಣೆ । ವೈಲುವಾಹನಪಿತ ಎತ್ತ ಪೋದನೊ ಕಾಣೆ ॥ ೧ ॥ ಸತ್ಯಲೋಕವೆಂಬೊದು ಮಿಥ್ಯವಾಗಿತು ಕಾಣೆ । ಎತ್ತ ಪೋದನು ಬ್ರಹ್ಮ ಏನು ಮಾಡಲಿ ಅಮ್ಮ ॥ ೨ ॥ ಸರಸಿಜನಾಭನು ಶರಧಿಯೊಳ್ ಮುಳುಗಿದ । ಪುರಂದರವಿಠಲನ ಕರುಣಕ್ಕೆ ಪಾತ್ರಳೆ ॥ ೩ ॥

### ೨೮೯ ರಾಗ ಮುಖಾರಿ ಝಂಪೆತಾಳ

ಏನು ಮಾಡಿದರೇನು ಹಿಂದಿನ ಕರ್ಮಫಲ । ತಾನು ಮಾಡಿದ ಕರ್ಮ ತನಗಲ್ಲದೆ ॥ ಪ ॥ ಮರಳಿ ಮರಳಿ ನೀರಿನೊಳಗೆ ಪೊಕ್ಕರು ಇಲ್ಲ । ಹೊರೆ ಹೊತ್ತು ತಲೆಪರಟೆಯಾದರಿಲ್ಲ ॥ ಭರದಿಂದ ಭೂಮಿಯನು ತೋಡಿ ನೋಡಿದರಿಲ್ಲ । ಪರರಿಗೆ ಬಾಯ್ದೆರೆದು ಪಲ್ಕಿರಿದರಿಲ್ಲ ॥ ೧ ॥ ಬಲು ದೇಹವನು ಹ್ರಸ್ವಮಾಡಿ ಬೇಡಿದರಿಲ್ಲ । ಕುಲುಗೇಡಿ ತಾನಾಗಿ ತಿರುಗಿದರಿಲ್ಲ ॥ ತಲೆಯ ಜಡೆಗಟ್ಟಿ ಅರಣ್ಯ ಸೇರಿದರಿಲ್ಲ। ಕೊಳಲೂದಿ ತುರುಗಳನು ಕಾಯ್ದರಿಲ್ಲ ॥೨॥ ಧೀರತನವನು ಬಿಟ್ಟು ದಿಗಂಬರಾದರು ಇಲ್ಲ । ಮೀರಿ ರಾವುತನಾಗಿ ಹೋರಿದರಿಲ್ಲ ॥ ಧಾರುಣಿಯೊಳಪ್ರತಿಮ ಪುರಂದರವಿಠಲನೆ । ಆರಿಗಳವಯ್ಯ ವಿಧಿಮೀರಿ ಬಾಳುವರೆ ॥ ೩ ॥

### ೨೯೦ ರಾಗ ಕಾಂಭೋಜಿ ರೂಪಕತಾಳ

ಆವನಾವನು ಕಾಯ್ವ ಅವನಿಯೊಳಗೆ ॥ಪ॥ ಜೀವರಿಗೆ ಧಾತೃ ಶ್ರೀಹರಿಯಲ್ಲದೆ ॥ಅ॥ ಆವ ತಂದೆಯು ಸಲಹಿದನು ಪ್ರಹ್ಲಾದನ। ಆವ ತಾಯಿಯು ಸಲಹಿದಳು ಧ್ರುವನ ॥ ಆವ ಸೋದರರು ಈಡೇರಿಸಿದರು ವಿಭೀಷಣನ । ಜೀವರಿಗೆ ಧಾತೃ ಶ್ರೀಹರಿಯಲ್ಲದೆ ॥೧॥ ಆವ ಬಂಧುಗಳು ಸಲಹಿದರು ಗಜರಾಜನ್ನ । ಆವ ಪತಿಯಾದ ದ್ರೌಪದಿಯ ಕಾಲಕೆ ॥ ಆವಾವ ಸಖನಾದ ಪಾಂಡವರ ಸಮಯಕ್ಕೆ । ಜೀವರಿಗೆ ಧಾತೃ ಶ್ರೀಹರಿಯಲ್ಲದೆ ॥ ೨ ॥ ಆವ ನಾಧಾರ ಅಡವಿಯೊಳಿದ್ದ ಮೃಗಗಳಿಗೆ । ಆವ ಪೋಷಕ ಗರ್ಭದ ಶಿಶುವಿಗೆ॥ ಆವ ಪಾಲಿಪ ಪಶು ಪಕ್ಷಿ ಮುಖ್ಯ ಜೀವರಿಗೆ । ದೇವ ಶ್ರೀಪುರಂದರವಿಠಲನಲ್ಲದೆ ॥

### ೨೯೧ ರಾಗ ನಾದನಾಮಕ್ರಿಯೆ ಛಾಪುತಾಳ

ಇರಬೇಕು ಇಲ್ಲದಿರಬೇಕು ॥ಪ॥ ಹರಿದಾಸರು ಸಂಸಾರದೊಳಗೆ ॥ ಅ ॥ ಮಕ್ಕಳು ಮತಿವಂತವಾದರೆ ಮನೆಯಲ್ಲಿ । ಅಕ್ಕರದಿಂದಲಿ ಕೂಡಿರಬೇಕು॥ ಚಿಕ್ಕವನ ಬುದ್ಧಿ ಭೇರುಂಡವಾದರೆ। ಫಕ್ಕನವನ ಕೂಡ ಹೊರಗಾಗಬೇಕು॥

||೧|| ಕುಲಸತಿಯಾದರೆ ಕೂಡಿರಬೇಕು । ಸುಲಭದಿಂದಲಿ ಸ್ವರ್ಗ ಸೂರಾಡ ಬೇಕು || ಕಲಹಗಂಟಿ ಸತಿ ಕರ್ಕಶೆಯಾದರೆ । ಹಲವು ಪರಿಯಿಂದ ಹೊರ ಗಾಗಬೇಕು ||೨|| ಹೀನನ ಕಂಡರೆ ಹಿಮ್ಮೆಟ್ಟಬೇಕು । ಜ್ಞಾನಿಗಳ ಕಂಡರೆ ಕೈಮುಗಿಯಬೇಕು || ಸ್ವಾಮಿ ಶ್ರೀಪುರಂದರವಿಠ್ಠಲರಾಯನ । ನಾನಾಬಗೆ ಯಿಂದ ಕೊಂಡಾಡಬೇಕು || ೩ ||

## ೨೯೨ ರಾಗ ನಾದನಾಮಕ್ರಿಯೆ ಆದಿತಾಳ

ಜಾಣ ನೀನಹುದೋ । ಗುರು ಮುಖ್ಯ । ಪ್ರಾಣ ನೀನಹುದೊ || ಪ || ಭಾರತಿರಮಣ ನಿನಗೆಣೆ ಕಾಣೆ ಮೂರು ಲೋಕದಲ್ಲಿದ್ದಂಥ । ಸಕಲ ಪ್ರಾಣ ದಲ್ಲಿದ್ದಂಥ ಪಂಚಪ್ರಾಣಗಳಿಗೆ ಪ್ರಾಣನಾಥ || ಅ || ಕೊಟ್ಟ ರಾಮಮುದ್ರಿ ಕೆಯ ಬೆಟ್ಟದಲ್ಲಿ ಸಾಗರ ದಾಟಿ । ಸೀತೆಮುಂದಿಟ್ಟು ಕರಗಳ ಕಟ್ಟಿಕೊಂಡ ವೀರಹನುಮ ||೧|| ಕುಂತಿಸುತ ನೀನಹುದೊ । ಅಸುರರಿಗೆ । ಹಂತಕಾರಿ ನೀನಹುದೊ || ಚಿಂತಿತ ನಮುಚರಿತಸಂಗ । ಚಿಂತಿಸುದ ಸಜ್ಜನರ । ಅಂತ ರಂಗವಾದ ನಮ್ಮ । ಹೊಂತಕಾರಿ ಶೂರ ಭೀಮ ||೨|| ಮುದ್ದು ಮುಖದವ ನೀನಹುದೊ । ಮುಜ್ಜಗವನೆ । ಸದ್ಗುಣವಂದ್ಯ ನೀನಹುದೋ || ಶುದ್ಧ ಮತವನೆ ನೀ । ನುದ್ಧರಿಪೆನೆಂದು ವೀರ । ಬದ್ಧಕಂಕಣ ತೊಟ್ಟ । ಮಧ್ವ ಮುನಿರಾಯ ಬಲು ||೩|| ಇಂದುವದನ ನೀನಹುದೊ । ಗುರುರಾಯ ಆ । ನಂದತೀರ್ಥ ನೀನಹುದೊ || ನೊಂದು ಬಂದ ಜನರು । ವಂದಿಸೆ ನಿಮ್ಮ ಚರಣ ಕಮಲ । ನಂಬಿದಂಥ ಭಕ್ತರನು । ಕುಂದದೆ ಪೊರೆಯುವಿರಂತೆ ||೪|| ಶೂರ ನೀನಹುದೊ । ವಾಯುಕು । ಮಾರ ನೀನಹುದೊ || ಪರಮ ನನ್ನ ನಂಬಿ ಬಲು । ಪರಮ ಮಹಿಮನೆ ನಮ್ಮ । ಪುರಂದರವಿಠಲನ ಸೇವಿ ಸಿದ ಕೀರ್ತಿ ಪಡೆದ || ೫ ||

## ೨೯೩ ರಾಗ ತೋಡಿ ರೂಪಕತಾಳ

ನೆನೆವೆ ನಾನನ್ಯರ ಕಾಣೆನು || ಪ || ಕೊಡುವರೊಳಗೆ ನೀನೇ ಎಂದು || ಬಡವನಾಗಿ ನಾನು ಬಂದು । ಉಡಿಯ ಪಿಡಿದು ಬೇಡಿಕೊಂಬೆ ನಾ ।

ಉಡಿಯ ಪಿಡಿದು ಬೇಡಿಕೊಂಬೆ । ದೃಢದಿ ವರವ ಕೊಡುವ ಧೊರೆಯೆ ||೧|| ರಾಮದೂತನಾಗಿ ಬಂದು । ನಾಮಮುದ್ರಿಕೆ ಜಾನಕಿಗಿತ್ತು । ಭೀಮನಾಗಿ ಕರವ ಮುಗಿವನ || ಭೀಮನಾಗಿ ಕರವ ಮುಗಿದು । ಜ್ಞಾನಪೂರ್ಣ ಪ್ರಾಣ ನೆಸಿಪನ ||೨|| ಈಶ ನಾರಸಿಂಹನಾದ । ವಾಸವಾದಿವಿನುತ ಶೇಷ । ದೋಷ ರಹಿತ ಪುರಂದರನ || ದೋಷರಹಿತ ಪುರಂದರವಿಠಲ । ದಾಸ ಭಾರ ತೀಶ || ೩ ||

## ೨೯೪ ರಾಗ ಶಹನ ಆದಿತಾಳ

ಗೋವಿಂದನ ಧ್ಯಾನ ಬಲು ಶುಭಕರವೊ || ಪ || ಭಾವಿಸಿ ನೋಡಲು ಬಹು ಜನ್ಮಗಳ ಪಾಪಹರವೋ ||ಅ|| ಒಂದಾವರ್ತಿ ನೆನೆಯಲು ಭವಬಂಧ ಖಿಲವೊ । ಹಿಂದಿನ ಸುಕೃತಕ್ಕೆ ಮುಂದಿನ ಸುಕೃತಾನಂದಫಲವೊ || ೧ || ವಿಧವಿಧ ಸಾಧನಕಿಂತ ಇದು ಬಲು ಘನವೊ। ಉದರಂಭರಣಕ್ಕೆ ಉಡುವೊ ವಸನಕ್ಕೆ ಇದು ಸುಸಾಧನವೊ || ೨ || ಶ್ರೀರಾಮ ಪುರಂದರವಿಠಲ ಆರ ಪಾರವೋ । ಸೇರಿದವರಿಗೆ ಈ ಹರಿಧ್ಯಾನ ಕ್ರೂರಗೆ ದೂರವೋ ||೩||

## ೨೯೫ ರಾಗ ಆನಂದಭೈರವಿ ಆದಿತಾಳ

ಜಗದಂತರ್ಯಾಮಿಯೆನ್ನ ಸ್ವಾಮಿ || ಪ || ಅಗಣಿತಗುಣ ನೀನು ನನ್ನ ಗುಣವಲ್ಲವೆಂದು । ಬಗೆವವ ಜಗದೊಳಗೆ ಬ್ರಹ್ಮಹತ್ಯಗಾರ || ೧ || ಜಗತು ಕರ್ತ ನೀನಿರಲು ಅನ್ಯರನ್ನೆ ದೈವವೆಂದು । ಬಗೆವವ ಜಗದೊಳಗೆ ಸ್ವರ್ಣ ಸ್ತೇಯಿ ||೨|| ಜಗದೊಡೆಯ ನೀನಿರಲು ಅನ್ಯದೈವರೊಡೆಯರೆಂದು । ಬಗೆ ವವ ಜಗದೊಳಗೆ ಮದ್ಯಪಾಯಿ ||೩|| ಜಗದ ತಾಯಿ ತಂದೆ ನೀನು ನಿನ್ನ ತಾನೇ ಎಂದುಕೊಂಡು । ಬಗೆವವ ಜಗದೊಳಗೆ ಗುರುತಲ್ಪಗ ||೪|| ಅವರ ತತ್ಸಂಯೋಗಿಗಳು ಪಂಚಮಹಾಪಾತಕರು । ದಾಸರ ಸಂಗದೊಳಿಡು ಪುರಂದರವಿಠಲ || ೫ ||

## ೨೯೬ ರಾಗ ಸೌರಾಷ್ಟ್ರ ಅಟತಾಳ

ತಾಯಿ ತಂದೆಯೆನ್ನ ಗುರು ದೈವ ನೀನೆ । ಕೃಷ್ಣ । ಪಾಹಿ ಪಂಚಾಕ್ಷರ ಪರಮಪುಣ್ಯ ನೀನೆ || ಪ || ಕಂದನು ಮಾಡಿದ ತಪ್ಪು ಕಾಯುವ ನೀನೆ ।

ಕೃಷ್ಣ । ಕಂದರ್ಪಜನಕನೆ ಮೋಕ್ಷದಾತನು ನೀನೆ ||೧|| ಅರುಣ ಕರುಣ ಪಿಡಿದು ಕರ್ಮ ಕಳೆಯಬೇಕೋ । ಮುಂದೆ । ಮರಣಜನನವಿಲ್ಲದ ಪದವಿ ಸೇರಿಸಬೇಕೊ ||೨|| ಎಂದೆಂದಿಗೂ ನಿನ್ನ ದಾಸನಾಗಬೇಕೊ । ಪು । ರಂದರ ವಿಠಲ ಚರಣವನ್ನು ತೋರಬೇಕೊ || ೩ ||

### ೨೯೭ ರಾಗ ಶಂಕರಾಭರಣ ಅಟತಾಳ

ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು। ಕೊಳಲನೂದಿ ಭ್ರಾಜಿಸುವ । ಚೆಲುವ ಕೃಷ್ಣರಾಯನ ನೋಡಿ ||ಪ|| ಹೊಳೆವ ಹೊಂಬಣ್ಣ ದಟ್ಟಿ ಚಲ್ಲಣ ಅಳವಡಿಸಿದ ನೀಲಿಯ ಬಿಗಿದು । ಹಲವು ರನ್ನದ ಉಂಗುರನಿಟ್ಟ ಚೆಲುವ ಬೆರಳ ನಟಿಸುತ || ಲಲಿತ ವಾಮತೋಳಿನ ಮೇಲೆ ಹೊಳೆವ ವಾರೆ ದೃಷ್ಟಿಯಿಸೆಯೆ । ಬಲದ ಪಾದ ಎಡಕೆ ಚಾಚಿರೆ ಜಲಜದಂದದಿ ಹೊಳೆಯಲು ನೋಡಿ ||೧|| ಗುಲಗಂಜಿ ಸರ ಕಲ್ಲಿಯ ಚಿಕ್ಕ ಗಜಗಿನ ಚೀಲ ಕಳೆ ಗೋಲಾಮುಚಿ| ಘಲುಕೆಂಬಾ ಪೆಂಡೆ ಘಮ್ಮಘಮ್ಮಿಸುವ ಮಲಯಜಾಮಿತ ಲೇಪಿತ|| ಮಲ್ಲಿಗೆ ಮಾಲತಿ ಬಳ್ಳಿಯ ದಳಿಲು ಹಲವು ಸರಗಳೊಲಿವುತಿರಲು| ತಳಿತ ಕಲ್ಪವೃಕ್ಷದ ನೆಳಲೊಳು ಗೆಳೆಯ ಗೋವರಿಂದಾಡಲು ||೨|| ಮಾರವಿ ದೇಶಿ ಗುರ್ಜರಿ ಭೈರವಿ ಗೌಳಿ ನಾಟಿ ಸಾವೇರಿ ಆಹೇರಿ । ಪೂರ್ವಿ ಕಾಂಭೋಜಿ ಪಾಡಿ ದೇಶಾಕ್ಷಿ ಶಂಕರಾಭರಣ ಮಾಳವ|| ವರಾಳಿ ಕಲ್ಯಾಣಿ ತೋಡಿ ಮುಖಾರಿಯರಳಿ ವಸಂತ ಬೌಳಿಧನ್ಯಾಸಿ । ಸೌರಾಷ್ಟ್ರ ಗುಂಡಕ್ರಿಯ ರಾಮಕ್ರಿಯ ಮೇಘ ಕುರಂಜಿಯು ಪಾಡಲು ನೋಡಿ||೩|| ಹರುಷದಿಂದ ವನದಿ ಸುಸ್ವರವ ಪುರದ ಸತಿಯರೆಲ್ಲರು ಕೇಳಿ । ಮರೆದು ಮನೆಯ ಮಕ್ಕಳ ಜರೆಮ ನೆರೆದು ಹರಿಯ ಒಲಿಸುತ || ಹರಿಣ ಕರಿಯು ಕೇಸರಿ ವೃಂದ ತುರಗ ಮಹಿಷ ಉರಗ ಮೂಷಕ । ಹರಿಯ ಕೊಳಲ ರವಕೆ ಮೋಹಿಸಿ ಮರೆದಿರೆ ಜಾತಿವೈರವ । ೪ || ಕರಗಿ ಕಲ್ಲು ನೀರಾಗಿ ಹರಿಯೆ ತೆರೆಗಳಿಂದುಕ್ಕಿ ಹರಿಯೆ ಯಮುನೆ। ತುರು ಖಗ ಬರ್ಹಿ ಸ್ತ್ರೀಯರು ಚಿತ್ರದಿ ಬರೆದ ಪ್ರತಿಮೆಯಂತಿರೆ || ಸುರರು ನಭದಿ ನೋಡಿ ಕುಸುಮಗರೆಯೆ ಭೇರಿ ದುಂದುಭಿ ಮೊರೆಯೆ । ಪುರಂದರವಿಠ್ಠಲ ಗೋಕುಲದಿ ವೇಣುನಾದ ಮಾಡಲು ನೋಡಿ ||೫||

## ೨೯೮ ರಾಗ ನಾಟಿ

ಎಲ್ಲಿ ಹರಿಕಥಾಪ್ರಸಂಗವೋ। ಅಲ್ಲಿ ಗಂಗಾ ಯಮುನೆ ಗೋದಾ ಸರಸ್ವತಿ ಸಿಂಧು ॥ ಎಲ್ಲ ತೀರ್ಥವು ಬಂದು ಅಣಿಯಾಗಿ ನಿಲ್ಲುವುವು । ವಲ್ಲಭ ಶ್ರೀ ಪುರಂದರವಿಠಲ ಮೆಚ್ಚುವನು॥ ಜಯ ಜಯಾ ಹರಿಯೆಂಬುವುದೆ ಸುದಿನವು। ಜಯ ಹರಿ ಹರಿಯೆಂಬುವುದೆ ತಾರಾಬಲವು । ಜಯ ಹರಿಯೆಂಬುವುದೆ ಚಂದ್ರಬಲವು । ಜಯ ಹರಿಯೆಂಬುವುದೆ ವಿದ್ಯಾಬಲವು ॥ ಜಯ ಹರಿ ಯೆಂಬುವುದೆ ದೈವಬಲವು । ಜಯ ಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ ॥

## ೨೯೯ ರಾಗ ಪಂತುವರಾಳಿ ಛಾಪುತಾಳ

ಏನೇನು ದಾನವ ಮಾಡಲಿ । ಹರಿ ಧ್ಯಾನಕ್ಕೆ ಸಮನಾದ ದಾನಂಗ ಳುಂಟೆ ॥ಪ॥ ಶತಕೋಟಿ ಕನ್ಯಾಪ್ರದಾನವ ಮಾಡಲಿ । ಅತಿಶಯದ ಉದಕ ದಾನವ ಮಾಡಲಿ ॥ ಮತಿಶುದ್ಧವಾಗಿ ಭೂದಾನವ ಮಾಡಲಿ । ಕೃತಿರಮ ಣನ ಧ್ಯಾನಕೆ ಸರಿಯುಂಟೆ ॥ ೧ ॥ ದಿನಕೊಂದು ಸಾವಿರ ಗೋದಾನ ಮಾಡಲಿ । ಅನುದಿನ ಅನ್ನದಾನವ ಮಾಡಲಿ ॥ ಘನವಾಗಿ ಸುವರ್ಣ ದಾನವ ಮಾಡಲಿ । ವನಜನಾಭನ ಧ್ಯಾನಕೆ ಸರಿಯುಂಟೆ ॥೨॥ ಸಾದರದಿ ತರ್ಕ ವ್ಯಾಕರಣ ಪೇಳಲಿ । ವೇದ ಗೀತ ಭಾಷ್ಯವನೋದಲಿ ॥ ಸಾಧಿಸಿ ಸ್ನಾನ ಜಪಂಗಳ ಮಾಡಲಿ । ಮಾಧವನ ಧ್ಯಾನಕೆ ಸರಿಯುಂಟೆ ॥ ೩ ॥ ಉತ್ತಮವಾದ ವಸ್ತ್ರ ದಾನವ ಮಾಡಲಿ । ಮುತ್ತು ಮಾಣಿಕ್ಯ ದಾನವ ಮಾಡಲಿ ॥ ಅತ್ಯಂತ ವಿದ್ಯಾ ಪ್ರದಾನವ ಮಾಡಲಿ । ಚಿತ್ತಜಪಿತನ ಧ್ಯಾನಕೆ ಸರಿಯುಂಟೆ ॥೪॥ ನಾನಾ ತೀರ್ಥಗಳಲಿ ಸ್ನಾನವ ಮಾಡಲಿ । ಕಾನನ ದೊಳಗೆ ತಪವ ಮಾಡಲಿ ॥ ಜ್ಞಾನದಿಂದ ಶಾಸ್ತ್ರಾರ್ಥ ಮಾಡಲಿ ನಿನ್ನ । ಧ್ಯಾನಕೆ ಸರಿಯುಂಟೆ ಪುರಂದರವಿಠಲ ॥ ೫ ॥

## ೩೦೦ ರಾಗ ಯದುಕುಲಕಾಂಭೋಜಿ ಆದಿತಾಳ

ಮರುಳಾಟವೇಕೋ ಮನುಜ ಕೂಗಾಟವೇಕೋ । ಸರ್ವ ದುರ್ಗು ಣಂಗಳನ್ನು ಶರೀರದಿ ಬಚ್ಚಿಟ್ಟುಕೊಂಡು ॥ಪ॥ ಮೃತ್ತಿಕೆಶೌಚ ಮಾಡದವಗೆ

ಮತ್ತೆ ಸ್ನಾನ ಮಂತ್ರವೇಕೆ । ಹೊತ್ತು ಕಟ್ಟಾದವಗೆ ಅಗ್ನಿಹೋತ್ರವೇತಕೆ॥ ತೊತ್ತುಒಡಕನಿಗೆ ಪರತತ್ತ್ವದ ವಿಚಾರವೇಕೆ । ಕರ್ತೃ ಕೃಷ್ಣನ ನೆನೆಯದವನ ಉತ್ತಮಗುಣವೇತಕೆ ॥೧॥ ಮೂಲಮಂತ್ರವಿಲ್ಲದವಗೆ ಮೇಲೆ ದೇವತಾರ್ಚನೆಯೇಕೆ । ಶಾಲಗ್ರಾಮಾಭಿಷೇಕವಿಲ್ಲದ ತೀರ್ಥವೇತಕೆ॥ ಸೂಳೆಗಾರಗೆ ತುಳಸಿಮಾಲೆಯ ಶೃಂಗಾರವೇತಕೆ। ಮಾಲೋಲನ್ನ ನೆನೆಯದವನ ನಾಲಿಗೆ ಯೇತಕೆ ॥೨॥ ಹಸಿವು ತೃಷೆಯ ಸಹಿಸದವಗೆ ಹುಸಿಯಾದ ವೈರಾಗ್ಯವೇಕೆ । ವಿಷಯ ಮೆಚ್ಚಿದವಗೆ ಪರದ ಕುಶಲವೇತಕೆ ॥ ಪುಸಿಯಾದ ಜಪ ಮಾಡುವವಗೆ ಮುಸುಕಿನ ಡಂಭವದೇಕೆ। ಬಿಸಜನಾಭನಿಗರ್ಪಿಸದ ಅಶನವೇತಕೆ ॥೩॥ ಊರ್ಧ್ವಪುಂಡ್ರ ಹಚ್ಚದವನ ಮುಖವ ತಿದ್ದಿ ನೋಡ್ವುದೇಕೆ। ಶುದ್ಧ ಸಾತ್ತ್ವಿಕಗೆ ಪರರ ಬುದ್ಧಿಯೇತಕೆ ॥ ಕದ್ದು ಹೊಟ್ಟೆ ಪೊರೆಯುವವಗೆ ಶುದ್ಧಶೀಲ ವೃತ್ತಿಯೇಕೆ । ಮಧ್ವಮತವ ಹೊಂದದವನ ಪದ್ಧತಿಯೇತಕೆ ॥೪॥ ಕಂಡ ನಾರಿಗಿಚ್ಛೈಸುವ ಲಂಡಗೆ ಪುರಾಣವೇಕೆ । ಭಂಡು ಮಾತಿನ ಕವಿಯ ಬಹು ಪಾಂಡಿತ್ಯವೇತಕೆ ॥ ಪುಂಡರೀಕಾಕ್ಷ ನಮ್ಮ ಶ್ರೀ ಪುರಂದರವಿಠಲನ್ನ । ಕಂಡು ಕಂಡು ಭಜಿಸದವಗೆ ಉದ್ದಂಡವೇತಕೆ ॥ ೫ ॥

## ೩೦೧ ರಾಗ ಕಾಂಭೋಜಿ ಝಂಪೆತಾಳ

ಮುತ್ತೈದಾಗಿರಬೇಕು ಮುದದಿಂದಲಿ । ಹತ್ತುನೂರು ನಾಮದೊಡೆಯ ಹರಿನಾಮ ಪತಿಯೆಂದು ॥ ಪ ॥ ಗುರುಮಧ್ವಶಾಸ್ತ್ರವನು ಓದುವುದೆ ಮಾಂಗಲ್ಯ । ವೈರಾಗ್ಯವೆಂಬ ಒಪ್ಪುವ ಮೂಗುತಿ ॥ ತಾರತಮ್ಯಜ್ಞಾನ ತಾಯಿತ್ತು ಮುತ್ತು ಸರ । ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ॥ ೧ ॥ ಹರಿಕಥೆ ಕೇಳುವುದು ಕಿವಿಗೆ ಮುತ್ತಿನ ಓಲೆ । ನಿರತ ಸತ್ಕರ್ಮವು ನಿಜಕಾಂತಿಯು॥ ಹರಿ ದಾಸರ ಪಾದರಜ ಹೆರಳು ಭಂಗಾರ । ಗುರುಭಕುತಿ ಎಂಬಂಥ ಗಂಧ ಕುಂಕುಮ ಧರಿಸಿ ॥೨॥ ಪೊಡವಿಯೊಳು ಪರಹಿತದ ಪಟ್ಟಾವಳಿಯ ನುಟ್ಟು । ಕೊಡುವ ದಾನಗಳೆಂಬೊ ಕುಬಸ ತೊಟ್ಟು ॥ ಬಿಡದೆ ಎನ್ನೊಡೆಯ ಶ್ರೀಪುರಂದರವಿಠಲನ । ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು ॥ ೩ ॥

## ೩೦೨ ರಾಗ ನಾದನಾಮಕ್ರಿಯೆ ಅಟತಾಳ

ಸದರವಲ್ಲವೋ ನಿಜಭಕುತಿ । ಸತ್ಯ । ಸದಮಲ ಗುರು ಕರುಣಾನಂದ ಮೂರುತಿ ॥ಪ॥ ಅಡಿಯಲಂಬರ ಮಾಡೋ ತನಕ । ಅಗ್ನಿ । ಕಡಲುಂಡು ಮಲಿನ ಕೊನೆ ನೀಗೋತನಕ ॥ ಒಡಲಿಬ್ಬರೊಂದಾಗೋ ತನಕ । ಆ । ಹಡೆಯದಂಥ ಹೆಣ್ಣು ಪ್ರಸವಾಗೋ ತನಕ ॥೧॥ ನಾಡಿ ಹಲವು ಕೂಡೋ ತನಕ । ಬ್ರಹ್ಮ । ನಾಡಿ ಪೊಕ್ಕು ನಲಿದಾಡುವ ತನಕ ॥ ಕಾಡುವ ಕಪಿ ಸಾಯೋ ತನಕ । ಸುಟ್ಟು ಕಾಡಿನೊಳು ರಸ ತೊಟ್ಟಿಡೋ ತನಕ ॥ ೨ ॥ ಆದಿಕುಂಭವ ಕಾಂಬೋ ತನಕ । ಅಲ್ಲಿ । ಸಾಧಿಸಿ ಅಮೃತ ಸವಿದುಂಬೋ ತನಕ ॥ ಬಾಧೆ ಸಹಿಸಿಕೊಂಬೋ ತನಕ । ಆದಿ । ಪುರಂದರವಿಠಲನ ಸ್ಮರಿಸೋ ತನಕ ॥ ೩ ॥

## ೩೦೩ ರಾಗ ಪಂತುವರಾಳಿ ಆದಿತಾಳ

ಮಾಡು ಸಿಕ್ಕದಲ್ಲಾ । ಮಾಡಿನ । ಗೂಡು ಸಿಕ್ಕದಲ್ಲಾ ॥ ಜೋಡು ಹೆಂಡಿರಂಜಿ । ಓಡಿಹೋಗುವಾಗ । ಗೋಡೆ ಬಿದ್ದು ಬಯಲಾಯಿತಲ್ಲಾ ॥ಪ॥ ಎಚ್ಚರಗೊಳಲಿಲ್ಲಾ । ಮನವೇ ಹುಚ್ಚನಾದೆನಲ್ಲಾ ॥ ಅಚ್ಚಿನೊಳಗೆ ಮೆಚ್ಚು । ಮೆಚ್ಚಿನೊಳಗೆ ಅಚ್ಚು । ಕಿಚ್ಚಿದ್ದು ಹೋಯಿತಲ್ಲಾ ॥ ಮಾಡು ॥೧॥ ಮುಪ್ಪು ಬಂದಿತಲ್ಲಾ । ಪಾಯಸ । ತಪ್ಪದೆ ಉಣಲಿಲ್ಲಾ ॥ ತುಪ್ಪದ ಬಿಂದಿಗೆ । ತಿಪ್ಪೆ ಮೇಲೆ । ಥೊಪ್ಪನೆ ಬಿತ್ತಲ್ಲಾ ॥ ಮಾಡು ॥೨॥ ಯೋಗವು ಬಂತಲ್ಲಾ । ಬದುಕು ವಿ । ಭಾಗವಾಯಿತಲ್ಲಾ ॥ ಭೋಗಿಶಯನ ಶ್ರೀ । ಪುರಂದರವಿಠಲನ । ಆಗ ನೆನೆಯಲಿಲ್ಲಾ ॥ ಮಾಡು ॥ ೩ ॥

## ೩೦೪ ರಾಗ ಮಧ್ಯಮಾವತಿ ತ್ರಿಪುಟತಾಳ

ಎಂತಹುದೋ ನಿನ್ನ ಭಕುತಿ । ಸಂತತ ನಿನ್ನ ದಾಸರ ಸಂಗಸುಖವೆನಗೆ । ॥ಪ॥ ವ್ರಣನಾಶಿಪ ಕುರುಡ ನೊಣ ಮೊಸರ ಕಂಡಂತೆ । ಧನಿಕರ ಮನೆಗೆ ಕ್ಷಣಕ್ಷಣಕೆ ಹೋಗಿ ॥ ತನು ಬಾಡಿ ತುಟಿಯೊಣಗಿ ಅಣಕ ನುಡಿ ಕೇಳುವ

ಕೈ । ಪಣ ಮನಕ್ಕೆಂತಹುದು ನಿನ್ನಯ ಭಕುತಿ ॥೧॥ ಇಡೆಯಾಡಿ ಮುಖ ಬಾಡಿ ನುಡಿಯಡಗಿ ಬಡವನೆಂ। ದೊಡಲ ತೋರಿಸಿದೆನೋ ಕಡು ದೈನ್ಯದಿ॥ ಒಡೆಯ ನೀನಹುದೆಂದು ಮಡದಿಮಕ್ಕಳಿಗೆ ಹೆಸ । ರಿಡುವೆ ಅಡಗಿರುವೆ ಅವರಡಿಗೆ ಎರಗುವವನ ಮನಕೆಂತಹುದು ನಿನ್ನ ಭಕುತಿ ॥೨॥ ಹೋಗಿಬಾರೈ ಎಂದಾಚಿಗೆಳೆದರೂ ತಲೆ । ಬಾಗಿ ನಿಂತೂ ಅಲ್ಲಿ ಮೌನವಾಗಿ ॥ ಓಗರಕೆ ಮನೆ ಮನೆಯ ತಪ್ಪದೆ ತಿರುಗುವ । ಜೋಗಿಯ ಕೈಯ ಕಟ್ಟೊಡೆದ ಕೋಡಗದ ಮನಕೆಂತಹುದು ನಿನ್ನ ಭಕುತಿ ॥೩॥ ಅನ್ನವನೆ ತೋರಿ ಚಿಟಕಿರಿಯೆ ಬಾಲವ ಬೀಸಿ। ಕುನ್ನಿ ಸುಳಿದಾಡಿ ಕಾಲ್ಗೆರಗುವ ತೆರದಿ ॥ ಹೆಣ್ಣಿನಾಸೆಗೆ ಬಾಯಿಬಿಡುವಾ ಸ್ತ್ರೈಣವಾಡಿದರೆ ಘನ್ನನಯ್ಯ ಮನ್ನಿಸೆಲೊ ಚಿನ್ನ ಬಹು । ಕುನ್ನಿ ಮನಕೆಂತಹುದು ನಿನ್ನಯ ಭಕುತಿ ॥೪॥ ವಟುವಾಗಿ ಬಲಿಯ ದಾನವ ಬೇಡಹೋದೆ ಆ ನಿ। ಕಟ ಕಷ್ಟಗಳನು ನೀನೆ ಬಲ್ಲೆ ॥ ಮುಟ್ಟದಡೆ ಪರಿಶುದ್ಧ ಫಣಿವರದ ಪುರಂದರ। ವಿಠಲ ನಿನ್ನ ದಾಸರ ಸಂಗ ಸುಖ ಎನಗೆ। ಎಂತಹುದೊ ನಿನ್ನಯ ಭಕುತಿ ॥೫॥

## ೩೦೫ ರಾಗ ಪೂರ್ವಿ ಅಟತಾಳ

ಸ್ನಾನವ ಮಾಡಿರೋ। ಜ್ಞಾನತೀರ್ಥದಲಿ॥ ನಾನು ನೀನೆಂಬಹಂಕಾರವ ಬಿಟ್ಟು ॥ ಪ ॥ ತಂದೆತಾಯಿಗಳ ಸೇವೆ ಒಂದು ಸ್ನಾನ । ಬಂಧನದವರ ಬಿಡಿಸಲೊಂದು ಸ್ನಾನ ॥ ಮುಂದಣ ಮಾರ್ಗ ತಿಳಿದಡೊಂದು ಸ್ನಾನ । ಇಂದಿರೇಶನ ಧ್ಯಾನವೆ ಗಂಗಾಸ್ನಾನ ॥ ೧ ॥ ಪರಸತಿಯ ಬಯಸದಿದ್ದರೆ ಒಂದು ಸ್ನಾನ । ಪರರ ನಿಂದಿಸದಿರುವುದು ಒಂದು ಸ್ನಾನ ॥ ಪರರೊಡವೆ ಯುಪಹರಿಸದಿರೆ ಒಂದು ಸ್ನಾನ। ಪರತತ್ವ ತಿಳಿದುಕೊಂಡರೆ ಗಾಂಗಾಸ್ನಾನ ॥ ೨ ॥ ತನ್ನೊಳು ತಾನೇ ತಿಳಿದರೊಂದು ಸ್ನಾನ ॥ ಅನ್ಯಾಯ ನುಡಿಯದಿದ್ದರೆ ಒಂದು ಸ್ನಾನ॥ ಅನ್ಯಾಯ ಮಾಡದಿರಲು ಒಂದು ಸ್ನಾನ। ಚೆನ್ನಾಗಿ ಹರಿಯ ನೆನೆಯೆ ಗಂಗಾಸ್ನಾನ ॥ ೩ ॥ ಅತ್ತೆಮಾವರ ಸೇವೆಯು ಒಂದು ಸ್ನಾನ । ಭರ್ತನ ಮಾತ ಕೇಳುವುದು ಒಂದು ಸ್ನಾನ ॥ ಕ್ಷೇತ್ರಪಾತ್ರರ ಸಹವಾಸ ಒಂದು ಸ್ನಾನ। ಪಾರ್ಥಸಾರಥಿಧ್ಯಾನವೆ ಗಂಗಾಸ್ನಾನ ॥ ೪ ॥

ವೇದ ಶಾಸ್ತ್ರವನೋದುವುದೊಂದು ಸ್ನಾನ । ಭೇದಾಭೇದವ ತಿಳಿದರೊಂದು ಸ್ನಾನ ॥ ಸಾಧು ಸಜ್ಜನರ ಸಂಗ ಒಂದು ಸ್ನಾನ । ಪುರಂದರವಿಠಲನ ಧ್ಯಾನವೆ ಗಂಗಾ ಸ್ನಾನ ॥

### ೩೦೬ ರಾಗ ಶಂಕರಾಭರಣ ಝಂಪುತಾಳ

ಸಕಲವೆಲ್ಲವು ಹರಿಸೇವೆಯೆನ್ನಿ । ರುಕುಮಿಣೀಪತಿಯಲ್ಲದನ್ಯವಿಲ್ಲವೆನ್ನಿ॥ ॥ ಪ ॥ ನುಡಿವುದೆಲ್ಲವು ನಾರಾಯಣನ ಕೀರ್ತನೆಯೆನ್ನಿ ॥ ನಡೆವುದೆಲ್ಲವು ದೇವರ ಯಾತ್ರೆಯೆನ್ನಿ ॥ ಕೊಡುವ ದಾನವು ಕಾಮಜನಕಗರ್ಪಿತವೆನ್ನಿ । ಎಡೆಯ ಅನ್ನವು ಹರಿಯ ಪ್ರಸಾದವೆನ್ನಿ ॥ ೧ ॥ ಹೊಸವಸ್ತ್ರ ಉಡುವಲ್ಲಿ ಹರಿಯ ಬೆಳ್ಪುಡೆಯೆನ್ನಿ । ಕುಸುಮಪರಿಮಳವು ಶ್ರೀಕೃಷ್ಣಗೆನ್ನಿ ॥ ಎಸೆವ ಆಭರಣಗಳು ಯಶೋದೆನಂದನಗೆನ್ನಿ । ಶಶಿಮುಖಿಯರೊಡನಾಟ ಸೊಬಗ ಗೋವಳಗೆನ್ನಿ ॥ ೨ ॥ ಆಟಪಾಟಗಳೆಲ್ಲ ಅಂತರ್ಯಾಮಿಗೆ ಎನ್ನಿ । ಕೂಟ ನೋಟಗಳೆಲ್ಲ ಕಂಜನಾಭಗೆ ಎನ್ನಿ ॥ ನೀಟಾದ ವಸ್ತುಗಳು ಕೈಟಭಾಂತಕಗೆನ್ನಿ । ಕೋಟಲೆ ಸಂಸಾರ ನಾಟಕಧರಗೆಯೆನ್ನಿ ॥ ೩ ॥ ನಿದ್ರೆ ಜಾಗರವು ಸಮುದ್ರಶಯನಗೆನ್ನಿ। ಭದ್ರನಿಧಿ ಗಜರಾಜವರದಗೆನ್ನಿ॥ ರೌದ್ರ ದಾರಿದ್ರ್ಯವು ರಾಘವನಡಿಗೆನ್ನಿ । ಶ್ರೀ । ಮುದ್ರೆಗಳ ಧಾರಣವು ಹರಿಯ ದಾಸರಿಗೆನ್ನಿ ॥ ॥ ೪ ॥ ಅಣು ರೇಣು ತೃಣಕಾಷ್ಠ ಪರಿಪೂರ್ಣನಹುದೆನ್ನಿ । ಎಣಿಸಲಾಗದನಂತಮಹಿಮನೆನ್ನಿ ॥ ಸೆಣಸುವ ದೈತ್ಯರ ಗಂಡ ಪ್ರಚಂಡನೆನ್ನಿ । ಫಣಿಶಾಯಿ ಪುರಂದರವಿಠಲನೇ ಪರದೈವವೆನ್ನಿ ॥೫॥

### ೩೦೭ ರಾಗ ಸಾವೇರಿ ತ್ರಿಪುಟತಾಳ

ಎಂಥಾ ಪುಣ್ಯವೆ ಗೋಪಿ । ಎಂಥಾ ಭಾಗ್ಯವೆ ಯಶೋದೆ । ಇಂಥಾ ಮಗನ ಕಾಣೆನೆ ॥ ಪ ॥ ಚಿಂತಿಸಿದರು ದೊರಕ ಚೆಲುವ ರಾಜಗೋಪಾಲ । ಭ್ರಾಂತಿ ಮಾತುಗಳಲ್ಲವೆ । ಬಹು ನಿಜವೆ ॥ಅ॥ ಸರಸಿಜನಾಭನ ಸುಮ್ಮನೆ ಕಂಡರೆ। ದುರಿತವೆಲ್ಲವು ಪೋಪುದೆ। ಸರಸದಿಂದಲಿ ಒಮ್ಮೆ ಸವಿಮಾತನಾಡಿದರೆ। ಹರುಷ ಕೈಗೊಡುವುದೆ। ಯಶೋದೆ ॥ ೧ ॥ ಊರೊಳಗೆ ಇಲ್ಲಿ ನೆರೆ

ಹೊರೆಯರಂಜಿಕೆ। ದೂರು ತುಂಬಿತಲ್ಲವೆ॥ ಅರಣ್ಯದಲಿ ನಾವು ಆಡಿದಾಟದ ಸುಖ। ಆರಿಗಾದರು ಉಂಟೇನೆ। ಒಂದೇನೆ ॥೨॥ ನಿನ್ನ ಮಗನ ಕರೆಯೆ ಎನ್ನ ಪ್ರಾಣದ ದೊರೆಯೆ। ಘನ್ನನು ಪರಬ್ರಹ್ಮನೆ ॥ ಚೆನ್ನ ಶ್ರೀಪುರಂದರ ವಿಠ್ಠಲರಾಯನ। ನಿನ್ನಾಣೆ ಬಿಡಲಾರೆನೆ। ಕೇಳೆ ಯಶೋದೆ ॥೩॥

### ೩೦೮ ರಾಗ ಆನಂದಭೈರವಿ ಆದಿತಾಳ

ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ। ದಿವ್ಯ ಷಡುರಸಾನ್ನವ ನಿಟ್ಟೆನೊ ॥ಪ॥ ಘಮಘಮಿಸುವ ಶಾಲ್ಯನ್ನ ಪಂಚಭಕ್ಷ್ಯ। ಅಮೃತ ಕೂಡಿದ ದಿವ್ಯ ಪರಮಾನ್ಯವೊ ॥ ರಾಮಾದೇವಿಯರು ಸ್ವಹಸ್ತದಿ ಮಾಡಿದ ಪಾಕ। ಭೂಮಿ ಮೊದಲಾದ ದೇವ್ಯರು ಸಹಿತೌತಣ ॥೧॥ ಅರುವತ್ತು ಶಾಕ ಲವಣ ಶಾಕ ಮೊದಲಾದ। ಸರಸ ಮೊಸರು ಬುತ್ತಿ ಚಿತ್ರಾನ್ನವೋ ॥ ಪರಮ ಮಂಗಳ ಅಪ್ಪವು ಅತಿರಸ। ಹರುಷದಿಂದಲಿಯಿಟ್ಟ ಹೊಸತುಪ್ಪವೊ ॥೨॥ ಒಡೆಯಂಬೊಡೆ ದಧಿವಡೆಯು ತಿಂಥಿಣಿ। ಒಡೆಯ ಎಡೆಗೆ ಒಡನೆ ಬಡಿಸಿದೆ॥ ದೃಢವಾದ ಪದಾರ್ಥವನೆಲ್ಲ ಇಡಿಸಿದೆ। ಒಡೆಯ ಶ್ರೀಪುರಂದರವಿಠಲನೆ ಉಣ್ಣೊ ॥೩॥

### ೩೦೯ ರಾಗ ಮೋಹನ ಅಟತಾಳ

ನಿಲ್ಲಬೇಕಯ್ಯ ಕೃಷ್ಣಯ್ಯ ನೀ ॥ ಪ ॥ ನಿಲ್ಲಬೇಕಯ್ಯ ಮಲ್ಲಮರ್ದನ ಸಿರಿ ವಲ್ಲಭ ಎನ್ನ ಹೃದಯದಲ್ಲಿ ಸಂತತ ನೀ ॥ಅ॥ ಸುಪ್ಪಾಣಿ ಮುತ್ತಿಟ್ಟು ನೋಡುವೆ। ಸದಾ। ಚಪ್ಪಾಳೆ ತಟ್ಟಿ ನಾ ಪಾಡುವೆ ॥ ಅಪ್ಪಾ ಶ್ರೀಕೃಷ್ಣನೇ ಎತ್ತಿ ಮುದ್ದಿಸಿಕೊಂಬೆ। ಸರ್ಪಶಯನ ಕೃಪೆ ಮಾಡೆಂದು ಬೇಡುವೆ ॥೧॥ ಚಂದದ ಹಾಸಿಗೆ ಹಾಸುವೆ। ಪುನುಗು। ಗಂಧ ಕಸ್ತೂರಿಯ ಪೂಸುವೆ ॥ ಅಂದದಿ ಮುತ್ತಿನ ಹಾರ ಹಾಕುವೆ। ಆ। ನಂದದಿಂದಲಿ ನಿನ್ನ ಎತ್ತಿ ಮುದ್ದಿಸಿ ಕೊಂಬೆ ॥ ೨ ॥ ನೀಲದ ಕಿರೀಟ ನಿನಗಿಡುವೆ। ಬಲು। ಬಾಲಲೀಲೆಗಳನು ಪಾಡುವೆ ॥ ಮಾಲೋಲ ಪುರಂದರವಿಠಲರಾಯನೆ। ನಿಲು ಎನ್ನ ಮನದಲ್ಲಿ ಒಂದೇ ಗಳಿಗೆ ॥೩॥

### ೩೧೦ ರಾಗ ನಾಟಿ ತ್ರಿಪುಟತಾಳ

ಮಹದಾದಿದೇವ ನಮೋ ॥ ಪ ॥ ಮಹದಾದಿದೇವ ನಮೋ ॥ ಮಹಾಮಹಿಮನೆ ನಮೋ । ಪ್ರಹ್ಲಾದವರದ ಅಹೋಬಲ ನಾರಸಿಂಹ ॥ ಅ ॥ ಧರಣಿಗುಬ್ಬಸವಾಗೆ ತಾರಾಪಥವು ನಡುಗೆ । ಸುರರು ಕಂಗೆಟ್ಟೋಡೆ ನಭವ ಬಿಟ್ಟು ॥ ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕಿ । ಉರಿಯನುಗುಳುತ ಉದ್ಭವಿಸಿದೆ ನರಸಿಂಹ ॥ ೧ ॥ ಸಿಡಿಲಂತೆ ಘರ್ಜಿಸುತ ಕುಡಿಯು ನಾಲಿಗೆ ಚಾಚಿ । ಅಡಿಗಡಿಗೆ ಲಂಘಿಸುತ ಕಡುಕೋಪದಿಂದ ॥ ಮುಡಿಪಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ । ಕಡು ಉದರ ಬಗಿದೆ ಕಡುಗಲಿ ನಾರಸಿಂಹ ॥೨॥ ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ । ಸುರರು ಅಂಬರದಿ ಪೂಮಳೆಯ ಕರೆಯೆ ॥ ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತರನು । ಕರುಣಿಸಿದೆ ಪುರಂದರವಿಠಲ ನರಸಿಂಹ ॥೩॥

### ೩೧೧ ರಾಗ ಮೋಹನ ಆದಿತಾಳ

ಮೆಲ್ಲಮೆಲ್ಲನೆ ಬಂದನೆ । ಗೋಪಮ್ಮ ಕೇಳೆ । ಮೆಲ್ಲಮೆಲ್ಲನೆ ಬಂದನೆ ॥ ॥ ಪ ॥ ಮೆಲ್ಲಮೆಲ್ಲನೆ ಬಂದು । ಗಲ್ಲಕೆ ಮುದ್ದು ಕೊಟ್ಟು । ನಿಲ್ಲದೆ ಓಡಿ ಪೋದ । ಕಳ್ಳಗೆ ಬುದ್ಧಿ ಪೇಳೆ ॥ಅ॥ ಹಾಲ ಮಾರಲು ಪೋದರೆ । ನಿನ್ನಯ ಕಂದ । ಕಾಲಿಗಡ್ಡವ ಕಟ್ಟಿದ ॥ ಹಾಲ ಸುಂಕವ ಬೇಡಿ ಕೋಲನ್ನೆ ಅಡ್ಡ ಕಟ್ಟಿ । ಶಲ್ಲೆಯ ಸೆಳಕೊಂಡು ಹೇಳದೋಡಿದ ಕೃಷ್ಣ ॥ ೧ ॥ ಮೊಸರ ಮಾರಲು ಪೋದರೆ । ನಿನ್ನಯ ಕಂದ । ಹೆಸರೇನೆಂದೆಲೆ ಕೇಳಿದ ॥ ಹಸನಾದ ಹೆಣ್ಣ ಮೇಲೆ ಕುಸುಮವ ತಂದಿಕ್ಕಿ । ಶಶಿಮುಖಿಯರಿಗೆಲ್ಲ ಬಸಿರು ಮಾಡಿದ ನೀತ ॥೨॥ ಹೋಗಿರೆ ರಂಗಯ್ಯನ । ಮೇಲೆ ನೀವು । ದೂರೇನು ಕೊಂಡು ಬಂದಿರೆ ॥ ಯೋಗೀಶ ಪುರಂದರವಿಟ್ಠಲರಾಯನ । ತೂಗಿ ಪಾಡಿರೆ ಬೇಗ ನಾಗವೇಣಿಯರೆಲ್ಲ ॥ ೩ ॥

### ೩೧೨ ರಾಗ ಸಾರಂಗ ಅಟತಾಳ

ನಾನೇನು ಮಾಡಿದೆನೋ । ಕೃಷ್ಣಯ್ಯ । ನೀನೆನ್ನ ಸಲಹಬೇಕು ॥ಪ॥ ಕರಿರಾಜ ಕರೆಸಿದನೆ । ದ್ರೌಪದಿದೇವಿ । ಬರೆದೋಲೆ ಕಳಿಸಿದಳೆ ॥ ಹರುಷ

ದಿಂದಲಿ ಋಷಿಪತ್ನಿಯ ಶಾಪವ | ಪರಿಹರಿಸಿದೆಯಲ್ಲೋ ಹೇ ಸ್ವಾಮಿ ||೧|| ರಕ್ಕಸತನುಜನಲ್ಲಿ | ಪ್ರಹ್ಲಾದ | ಚಿಕ್ಕ ಪ್ರಾಯದ ಧ್ರುವನು || ಸಿಕ್ಕಿದ ಪಾಪಮಾಡಿದ ಅಜಾಮಿಳ ನಿ | ನ್ನಕ್ಕರೆ ಮಗನೆ ಪೇಳೊ ಹೇ ಸ್ವಾಮಿ ||೨|| ಒಪ್ಪಿಡಿ ಅವಲಕ್ಕಿಯ | ಕೃಷ್ಣ ಯ ನಿನ | ಗೊಪ್ಪಿಸಿದವಗೊಲಿದೆ || ಒಪ್ಪಿನು ನಿನಗೆ ಶ್ರೀಪುರಂದರವಿಠಲವ | ರಪ್ಪಂತೆ ಕಾಯಬೇಕೊ ಹೇ ಸ್ವಾಮಿ ||೩||

## ೩೧೩ ರಾಗ ಪಂತುವರಾಳಿ ಆದಿತಾಳ

ಆದದ್ದೆಲ್ಲ ಒಳಿತೇ ಆಯಿತು ||ಪ|| ನಮ್ಮ ಶ್ರೀಧರನ್ನ ಸೇವೆಗೆ | ಸಾಧನ ಸಂಪತ್ತಾಯಿತು || ಅ || ದಂಡಿಗೆ ಬೆತ್ತ ಹಿಡಿಯುವದಕ್ಕೆ | ಮಂಡೆ ಮಾಚಿ ನಾಚುತಿದ್ದೆ || ಹೆಂಡತಿ ಸಂತತಿ ಸಾವಿರವಾಗಲು | ದಂಡಿಗೆ ಬೆತ್ತ ಹಿಡಿಸಿದ ಳಯ್ಯ ||೧|| ಗೋಪಾಲಬುಟ್ಟಿ ಹಿಡಿಯುವದಕ್ಕೆ| ಭೂಪತಿಯಂತೆ ಗರ್ವಿಸು ತಿದ್ದೆ|| ಆ ಪತ್ನಿಕುಲ ಸಾವಿರವಾಗಲು| ಗೋಪಾಲಬುಟ್ಟಿ ಹಿಡಿಸಿದಳಯ್ಯ|| ||೨|| ತುಳಸಿಮಾಲೆಯ ಹಾಕುವುದಕ್ಕೆ | ಅರಸನಾಗಿ ನಾಚುತಿದ್ದೆ || ಸರಸಿ ಜಾಕ್ಷ ಪುರಂದರವಿಠಲನು | ತುಳಸಿಮಾಲೆ ಹಾಕಿಸಿದನು || ೩ ||

## ೩೧೪ ರಾಗ ಶಂಕರಾಭರಣ ತ್ರಿಪುಟತಾಳ

ನಿನ್ನ ಭಕುತಿಯನ್ನು ಬೀರೊ| ದೇವ| ಎನ್ನ ಮನ್ನಿಸಿ ಸಲಹುವರಾರೊ|| ||ಪ|| ಸನ್ನುತ ಸನ್ಮಾರ್ಗ ತೋರೊ | ಪ್ರ | ಸನ್ನ ರಕ್ಷಕ ಬೇಗ ಬಾರೊ || ||ಅ|| ಪನ್ನಗಶಯನ ಲಕ್ಷ್ಮೀಶ | ವೇದ | ಸನ್ನುತಪಾದ ಸರ್ವೇಶ || ಇನ್ನು ಬಿಡಿಸೋ ಮೋಹಪಾಶ | ಆ| ಪನ್ನರಕ್ಷಕ ಶ್ರೀನಿವಾಸ ||೧|| ನಾರದ ಗಾನ ವಿಲೋಲ | ಸ್ವಾಮಿ | ಭೂರಿ ಭಕ್ತರ ಪರಿಪಾಲ || ಭೂರಮಣ ಕರುಣಾಲ ವಾಲ | ನವ | ನೀರದಶ್ಯಾಮ ಗೋಪಾಲ ||೨|| ಕರಿರಾಜವರದಪ್ರಮೇಯ| ಎನ್ನ | ಅರಿತು ಪಾಲಿಸೊ ಯೋಗಿಧ್ಯೇಯ || ಸುರಮುನಿಹೃದಯನಿಕಾಯ| ಗುರು | ಪುರಂದರವಿಠ್ಠಲರೇಯ ||೩||

## ೩೧೫ ರಾಗ ಪಂತುವರಾಳಿ ಅಟತಾಳ

ಎನ್ನ ಮನದ ಡೊಂಕ ತಿದ್ದಿಸೊ| ಶ್ರೀನಿವಾಸ| ಎನ್ನ ಮನದ ಡೊಂಕ ತಿದ್ದಿಸೊ ||ಪ|| ಎನ್ನ ಮನದ ಡೊಂಕ ತಿದ್ದಿಸಿ | ನಿನ್ನ ಸೇವಕನಾದ ಮೇಲೆ|

ಇನ್ನು ಸಂಶಯವೇಕೆ ಕೃಷ್ಣ । ನಿನ್ನ ಚರಣದಲ್ಲಿ ಸೇರಿಸೊ ॥ಅ॥ ಉದಯ ವಾದರೆ ಊಟದ ಚಿಂತೆ । ಆದರ ಮೇಲೆ ಭೋಗದ ಚಿಂತೆ । ಹದಿನಾಲ್ಕು ಲೋಕವಾಳಬೇಕೆಂಬ ಚಿಂತೆ॥ ಇದು ಪುಣ್ಯ ಇದು ಪಾಪವೆಂದು । ಹೃದಯ ದಲಿ ಭಯವಿಲ್ಲದೆ । ಮದಮೋಹಿತನಾದೆ ನಿನ್ನ । ಪದವ ನಂಬದೆ ದೀನ ದಯಾಳೋ ॥೧॥ ಸಿರಿಮನೆಯಭಾಗ್ಯ ನೋಡಿ । ಸಹಿಸಲಾರದೆ ಅಸೂಯ ನಾಗಿ । ಹರಿಸ್ಮರಣೆಗೆ ವಿಮುಖನಾದೆ । ನರರ ಸ್ತುತಿಯ ಮಾಡಿದೆ ॥ ಪರರ ಸತಿಗೆ ಪರರ ಅನ್ನಕ್ಕೆ । ತಿರುಗಿ ತಿರುಗಿ ಚಪಲನಾದೆ । ಗುರುಹಿರಿಯರ ದೂಷಿಸಿ । ಮರುಳಾದೆ ದೀನಶರಣ್ಯ ॥ ೨ ॥ ಅಗಣಿತ ಸುಖ ಬಂದರೆ ನಾ । ಅಗಣಿತ ದುಃಖಕ್ಹರಿಯೆಂಬುವೆ । ಜಗದೊಳು ಲಾಭವು ಬಂದರೆ । ಧನಿಕ ನಾನೆಂಬೆ ॥ ಮಿಗೆ ಹಾನಿಗೆ ಹರದೂಷಿಸಿ । ನೆಗೆದು ಪತಂಗ ಕಿಚ್ಚಿಲಿ ಬೀಳ್ವ । ಬಗೆಯಾದೆನು ಪುರಂದರವಿಠಲ । ಖಗರಾಜಸುವಾಹನ ॥೩॥

## ೩೧೬ ರಾಗ ಯದುಕುಲಕಾಂಭೋಜಿ ಝಂಪೆತಾಳ

ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ॥ಪ॥ ಅವರು ನರರೆಂದು ಬಗೆವವರೆ ನರಕವಾಸಿಗಳು ॥ಅ॥ ಪದುಮಲನ ನೆನೆಯುವ ಹೃದಯ ಕಾಶೀ ಪುರವು । ಮಧುವೈರಿ ನೆನೆವ ಮನ ಮಣಿಕರ್ಣಿಕೆ॥ ಪದುಮನಾಭನ ಪಾಡ್ವ ವದನವೇ ವೈಕುಂಠ । ಪದುಮಲನ ಬಣ್ಣಿಸುವ ಜಿಹ್ವೆ ಶ್ರೀಮುಷ್ಣ ॥ ೧ ॥ ನರಹರಿಯನೀಕ್ಷಿಸುವ ನಯನ ದ್ವಾರಾವತಿಯು । ಸಿರಿಧರಗೆ ಶರಣೆಂಬ ಶಿರವೆ ಬದರಿ॥ ಮುರಹರನ ಕಥೆಯ ಕೇಳುವ ಕಿವಿಯು ಕೇದಾರ । ಹರಿಯ ನಿರ್ಮಾಲ್ಯ ಘ್ರಾಣಿಪ ಮೂಗು ಮಧುರೆ ॥ ೨ ॥ ಲಕ್ಷ ಪ್ರದಕ್ಷಿಣೆ ಮಾಳ್ಪ ಚರಣ ಮಾಯಾವತಿಯು । ಲಕ್ಷ್ಮೀಪತಿಯ ಪೂಜಿಸುವ ಕರವೆ ಕಂಚಿ ॥ ಶಿಕ್ಷಿಸುವುದು ಸುಕೃತ ದುಷ್ಕೃತ ಆಲಿಸಿ ಕೇಳೊ । ಪಕ್ಷಿವಾಹನ ಪುರಂದರ ವಿಠಲನು ಕೊಡುವ ಮುಕುತಿ ॥೩॥

## ೩೧೭ ರಾಗ ಮುಖಾರಿ ಅಟತಾಳ

ಮಕ್ಕಳ ಮಾಣಿಕವೆ ಮನೋಹರನಿಧಿಯೆ । ವೈರಿ । ರಕ್ಕಸ ಶಕಟನ ತುಳಿ ದುದೀ ಪಾದವೆ ॥ ಪ ॥ ಬಲಿಯ ದಾನವ ಬೇಡಿ ನೆಲನ ಈರಡಿ ಮಾಡಿ ।

ಜಲಧಿಯ ಪಡೆಪದ್ದೀ ಪಾದವೆ ಕೃಷ್ಣ || ಹಲವು ಕಾಲಗಳಿಂದ ಶಿಲೆ ಶಾಪ ಪಡೆದಿರಲು | ಫಲಕಾಲಕ್ಕೊದಗಿದ್ದುದೀ ಪಾದವೆ ಕೃಷ್ಣ ||೧|| ಕಡುಕೋಪ ದಿಂದ ಕಾಳಿಂಗನ ಮಡುವ ಕಲಕಿ | ಹೆಡೆಯನ್ನು ತುಳಿದದ್ದೀ ಪಾದವೆ ಕೃಷ್ಣ|| ಸಡಗರದಿ ಕೌರವನ ಸಿಂಹಾಸನವನು | ಹೊಡೆದುಗುಚಿ ಕೆಡಹಿದ್ದೀ ಪಾದವೆ ಕೃಷ್ಣ || ೨ || ಶೃಂಗಾರದಿಂದಾರು ಹೆಂಗಳ ಸಹಿತ ಶ್ರೀ | ಅಂಗನೆ ಯೊತ್ತುವುದೀ ಪಾದವೆ ಕೃಷ್ಣ || ಸಂಗಸುಖದಿ ಶ್ರೀಪುರಂದರವಿಠಲನೆ | ಅಂಗ ದೊಳಡಗಿದ್ದುದೀ ಪಾದವೆ ಕೃಷ್ಣ || ೩ ||

## ೩೧೮ ರಾಗ ನಾದನಾಮಕ್ರಿಯೆ ಆದಿತಾಳ

ಹೊಲತಿ ಹೊಲೆಯ ಇವರವರಲ್ಲ ||ಪ|| ಹೊಲಗೇರಿಲಿ ಹೊಲೆಯ ಹೊಲತಿಲ್ಲ || ಅ || ಸತಿವಶನಾಗಿ ಜನನಿಜನಕರಿಗೆ | ಅತಿ ನಿಷ್ಠುರ ನುಡಿವವ ಹೊಲೆಯ || ಸುತರ ಪಡೆದು ವಾರ್ಧಿಕಮದವೇರಿ | ಪತಿದ್ವೇಷ ಮಾಡುವವಳೆ ಹೊಲತಿ ||೧|| ಗುರುವಿದ್ಯಾ ಕಲಿತು ಸುಖದಲ್ಲಿ ಜೀವಿಸಿ | ಹಿರಿಯರ ಬಳಲಿಸುವವ ಹೊಲೆಯ || ಪುರುಷರಿಗೊಲಿದು ಸ್ವಪುರುಷನ ಸರ್ವದಾ | ವಿರಸ ಮಾಡುವವಳೆ ಹೊಲತಿ ||೨|| ಒಡೆಯನನ್ನವನುಂಡು ಅವನ ಕೂಡ| ಬಡಿದಾಡಿ ರೋಷ ತಾಳ್ವನೆ ಹೊಲೆಯ || ಬಡತನ ಬಂದರೆ ಅಡಿಗಡಿಗೊಮ್ಮೆ | ಹೊಡೆದಾಡಿ ಪತಿಯ ಬೈವಳೆ ಹೊಲತಿ ||೩|| ನೂರೊಂದು ಕುಲ ಕುಂಭೀ ಪಾಕಕಟ್ಟುವ ಪರ | ನಾರೀಲಿ ವೀರ್ಯವಿಟ್ಟವ ಹೊಲೆಯ || ಯಾರೊಳು ಕಲಹ ಅಪಸ್ಮಾರಿ ದುರ್ವಾದಿ | ಕರಾಳ ಕುಮತಿ ಇಹಳೇ ಹೊಲತಿ ||೪|| ದುರ್ಬಲಜನರ ಕಂಡು ಮರುಗದೆ | ನಿರ್ಭೀತಿಲಿ ಇರುವವ ಹೊಲೆಯ || ಅರ್ಭಕತನದಲಿ ಮದನ ಚೇಷ್ಟೆಯಲಿ | ದುರ್ಬುದ್ಧಿ ಮಾಡುವವಳೆ ಶುದ್ಧ ಹೊಲತಿ ||೫|| ಹರಿಪಾದತೀರ್ಥವ ಹರಿನಿರ್ಮಾಲ್ಯವ | ಹರಿ ಪ್ರಸಾದವರಿಯದವ ಹೊಲೆಯ|| ಪರಧರ್ಮಕೆ ಅನುಕೂಲವಾಗದೆ ಸಾಧು| ಪರರ ಜರೆದು ಮೆರೆವವಳೆ ಹೊಲತಿ || ೬ || ಅಜನ ಪಿತ ನಾರಾಯಣನ ಪಾದವ | ಭಜನೆ ಮಾಡದವನತಿ ಹೊಲೆಯ || ನಿಜವಾದ ಪುರಂದರವಿಠ್ಠಲ ರಾಯನ | ತ್ಯಜಿಸಿ ಬಾಳ್ವಳೆ ಅತ್ಯಂತ ಹೊಲತಿ ||೭||

## ೩೧೯ ರಾಗ ಮುಖಾರಿ ಮಟ್ಟೆತಾಳ

ಕಂಡೆ ಕಂಡೆ ಸ್ವಾಮಿಯ । ಬೇಡಿಕೊಂಡೆ ॥ಪ॥ ಕಂಡೆ ತಿರುಪತಿ ವೆಂಕಟೇಶನ। ಕಾರಣಾತ್ಮಕ ಸಾರ್ವಭೌಮನ॥ ಕಾಮಿತಾರ್ಥಗಳೀವ ದೇವನ । ಕರುಣಾನಿಧಿ ಎಂದೆನಿಸಿ ಮೆರೆವನ ॥ ಅ ॥ ಕೋಟಿಸೂರ್ಯಪ್ರಕಾಶವೆನಿಪ ಕಿರೀಟವನು ಮಸ್ತಕದಿ ಕಂಡೆನು ನೋಟಕಾಶ್ಚರ್ಯವಾದ ನಗೆಮುಖ ನೊಸಲಿನಲಿ ತಿರುಮಣಿಯ ಕಂಡೆನು ॥ ಸಾಟಿಯಿಲ್ಲವೆ ಚತುರ್ ಹಸ್ತದಿ ಶಂಖ ಚಕ್ರಗದಾಬ್ಜ ಕಂಡೆನು । ಬೂಟಕವ ಮಾತಲ್ಲ ಕೇಳಿರೊ ಭೂರಿ ದೈವರ ಗಂಡನಂಘ್ರಿಯ ॥ ೧ ॥ ತಪ್ಪುಕಾಣಿಕೆ ಕಪ್ಪವನು ಸಮಸ್ತ ದ್ವೀಪಗಳಿಂದ ತರಿಸುವ। ಉಪ್ಪು ಓಗರಗಳನೆ ಮಾರಿಸಿ ಉಚಿತದಿಂದಲಿ ಹಣವ ಗಳಿಸುವ॥ ಇಪ್ಪತ್ತು ದುಡ್ಡಿಗೆ ಸೇರು ತೀರ್ಥ ಒಪ್ಪದಲಿ ಕ್ರಯ ಮಾಡಿ ಕೊಡಿಸುವ । ಸರ್ಪಶಯನನ ಸಾರ್ವಭೌಮನ ಅಪ್ಪ ವೆಂಕಟರಮಣನಂಘ್ರಿಯ ॥೨॥ ಉರದಿ ಶ್ರೀದೇವಿಯಳ ಕಂಡೆನು ಉನ್ನತದ ಕೌಸ್ತುಭವ ಕಂಡೆನು । ಗರುಡ ಕಿನ್ನರ ನಾರದಾದಿ ಗಂಧರ್ವರ ಎಡಬಲದಲ್ಲಿ ಕಂಡೆನು॥ ತರತರದಿ ಭಕ್ತರಿಗೆ ವರಗಳ ಕರೆದು ಕೊಡುವುದ ನಿರತ ಕಂಡೆನು । ಶರಧಿಶಯನನ ಶೇಷಗಿರಿಯ ವರದ ಪುರಂದರವಿಠಲನಂಘ್ರಿಯ ॥ ೩ ॥

## ೩೨೧ ರಾಗ ಮಧ್ಯಮಾವತಿ ಆದಿತಾಳ

ಆರ ಹಾರೈಸಿದರೇನುಂಟು । ಬರೆ । ನೀರ ಕಡೆವರಲ್ಲೇನುಂಟು ॥ ಪ ॥ ಅಂತರವರಿಯದ ಅಧಮನ ಬಾಗಿಲ । ನಿಂತು ಕಾಯ್ದರಲ್ಲೇನುಂಟು ॥ ಇಂತೆರವಲ್ಲಿಯು ಬಳಲಿಸಿ ತಾ ಯಮ। ನಂತೆ ಕೊಲುವನಲ್ಲೇನುಂಟು ॥೧॥ ಕೊಟ್ಟುದ ಕೊಂಡುದ ಹೇಳನ ಮಾಡೊ ಕ । ನಿಷ್ಠನ ಸೇರಿದರೇನುಂಟು ॥ ಬಿಟ್ಟಿಯ ಮಾಡಿಸಿ ಬೆದರಿಸಿ ಬಿಡುವನ । ಪಟ್ಟಣ ಸೇರಿದರೇನುಂಟು ॥೨॥ ಪಿಸುಣನ ಕುದುರೆಯ ಮುಂದೋಡಲು ಬರೆ। ಬಿಸಿಲ್ದಣ್ಣಲ್ಲದಲ್ಲೇನುಂಟು॥ ವಸುಧೆಯೊಳಗೆ ಸಿರಿಪುರಂದರವಿಠಲನೆಂ । ದುಸಿರಲು ಮುಕುತಿಯ ಫಲವುಂಟು ॥ ೩ ॥

### ೩೨೧ ರಾಗ ಕಾಂಭೋಜಿ ಅಟತಾಳ

ಕೊಳಲನೂದುತ್ತಾ ಬಂದ । ನಮ್ಮ ಗೋಪಿಯ ಕಂದ। ಕೊಳಲನೂದುವುದು ಬಲು ಚಂದ ॥ಪ॥ ಆ ವಸುದೇವನ ಕಂದ ಇವ ನೋಡೆ । ದೇವಕಿ ಬಸಿರೊಳು ಬಂದ ॥ ಮಾವ ಕಂಸನ ಕೊಂದ। ಭಾವಜನಯ್ಯ ಮುಕುಂದ॥ ॥೧॥ ಮುತ್ತಿನಾಭರಣವ ತೊಟ್ಟು । ಹಸ್ತದಿ ಕೊಳಲ ಕೊಟ್ಟು ॥ ಕಸ್ತೂರಿ ತಿಲಕನಿಟ್ಟು। ತುತ್ತುರು ತುರುರೆಂಬ ನಾದವ ಪಿಡಿಯೆ॥೨॥ ಹಿಂದೆ ಗೋವುಗಳ ಹಿಂಡು । ಮುಂದೆ ಗೋಪಾಲದಂಡು ॥ ಹಿಂದಕ್ಕೆ ದೈತ್ಯರ ಕೊಂದ ಪು । ರಂದರವಿಠಲ ಚಂದ ॥ ೩ ॥

### ೩೨೨ ರಾಗ ಧನ್ಯಾಸಿ ಝಂಪೆತಾಳ

ಎನಗೊಬ್ಬ ದೊರೆಯು ದೊರಕಿದನು ॥ ಪ ॥ ವನಜಸಂಭವಜನಕ ಹನುಮನಂತರ್ಯಾಮಿ ॥ಅ॥ ಮಾತಾಪಿತನಾದ ಭ್ರಾತೃಬಾಂಧವನಾದ। ಪ್ರೀತಿಯಿಂದಲಿ ತಾನೆ ನಾಥನಾದ॥ ಖ್ಯಾತನು ತಾನಾದ ದಾತನು ತಾನಾದ ಭೂತೇಶವಂದ್ಯ ವಿಭೂತಿಪ್ರಿಯನಾದ ॥೧॥ ಅಜರಾಮರಣನಾದ ಅಪ್ರಾಕೃತನಾದ। ವಿಜಯಗೊಲಿದು ನಿಜ ಸೂತನಾದ॥ ಭುಜಗಶಯನನಾದ ತ್ರಿಜಗವಂದಿತನಾದ। ಅಜಮಿಳನ ಅಂತ್ಯಕತ್ಯಂತ ಸುಹೃದನಾದ ॥ ೨ ॥ ಶಂಖಚಕ್ರಾಂಕಿತದ ಸಂಕರುಷಣನಾದ। ಬಿಂಕದಿಂ ಬಿರುದುಗಳ ಪೊತ್ತವನಾದ॥ ಪಂಕಜನಯನ ಮೀನಾಂಕಜನಕನಾದ। ಓಂಕಾರಮೂರುತಿ ಪುರಂದರ ವಿಠಲನಾದ ॥ ೩ ॥

### ೩೨೩ ರಾಗ ಪಂತುವರಾಳಿ ಆದಿತಾಳ

ಹರಿಯ ದಾಸರಿಗಿನ್ನು ಸರಿಯುಂಟೆ । ನರ । ಹರಿಯ ನಂಬಿದವರಿಗೆ ಕೇಡುಂಟೆ ॥ಪ॥ ಮಾರಿಯಾ ಕೈಯಲ್ಲಿ ನೀರು ಹೊರಿಸುವರು। ಮಸಣಿಯಾ ಕೈಯ ಕಸಬಳಿಸುವರು ॥ ಘೋರ ಮೃತ್ಯುವಿನ ಕೈ ಭತ್ತ ಕುಟ್ಟಿಸುವರು । ಜವನ ಕೈಲಿ ಜಂಗುಲಿ ಕಾಯಿಸುವರು ॥ ೧ ॥ ಬೊಮ್ಮಬಿರ ಬೇತಾಳ ಜಟ್ಟಿಂಗಳಿಲ್ಲ । ಕರ್ಮದ ಕಡಲೊಳು ಮುಳುಗಿರಲು ॥ ಒಮ್ಮೆಗಾ

ಹರಿದಾಸರ ಪಾಪವು ಸೋಕಲು। ಕರ್ಪೂರ ಕಡಲಿಂದ ಕಡೆಹಾಯುವರು ||೨|| ಜಕಣಿಯು ಜಲದೇವರು ಮೊದಲಾದ। ಧಿಕ್ಕಾರಿ ದೈವಗಳ ಪೂಜಿಸರವರು || ಲೋಕ ನಾಯಕ ಶ್ರೀಪುರಂದರವಿಠಲನ್ನ । ಸಾಕಾರ ಪಡುವ ಪರಮ ಭಾಗವತರು ||

## ೩೨೪ ರಾಗ ನಾದನಾಮಕ್ರಿಯೆ ಅಟತಾಳ

ಜನರ ನಡತೆ ಕೇಳಿರಯ್ಯ||ಪ|| ಇಂಥ ಜನರ ನೋಡಿ ನೀವು ಏನನೆಂಬಿರಯ್ಯ ||ಅ|| ತಾಯಿಗನ್ನವನಿಕ್ಕರಯ್ಯ । ಬಲು । ಮಾಯ ಮಾತಿಗೆ ಮರುಳಾಗುವರಯ್ಯ || ನ್ಯಾಯವೆಂಬುದು ಇಲ್ಲವಯ್ಯ । ಅ । ನ್ಯಾಯವೇ ಗತಿಯೆಂದು ಸಾಧಿಪರಯ್ಯ ||೧|| ಉತ್ತಮ ಸ್ತ್ರೀಯಳ ಬಿಟ್ಟು । ತನ್ನ । ವೃತ್ತಿಗಳೆಲ್ಲ ಸೂಳೆಗೆ ಕೊಟ್ಟು || ಮತ್ತರೊಳಗೆ ಕೂಡಿ ಕೆಟ್ಟು । ಇಹ । ಉತ್ತಮರೆಂಬರೀ ಜಗದೊಳು ಮುಟ್ಟು || ೨ || ಗಂಡನ್ನ ತಾ ಬಿಡುತಿಹಳು । ಪರ । ಮಿಂಡನ್ನ ಕೂಡಿ ಲೋಲಾಡುತಿಹಳು || ಮುಂಡೇರು ಹೆಚ್ಚು ಜಗದೊಳು । ಭೂ । ಮಂಡಲದೊಳಗಿಂಥ ನಡತೆಲ್ಲ ಬಹಳ ||೩|| ಹೊನ್ನುಳ್ಳ ಹೊಲೆಯರುತ್ತಮರು। ಅವರ। ಬಣ್ಣಿಸಿ ಬಾರೆಂದು ಮನೆಗೆ ಕರೆವರು || ಕನಕಾಂಬರವನು ಕೊಡುವರು । ಅವರಿಗೆ। ಬಿನ್ನಣದಲ್ಲಿ ಬಹು ಉಪಚರಿಸುವರು ||೪|| ಬಡವನ್ನ ಬಾರೆನ್ನರಯ್ಯ । ಏನು। ನಡೆಯಿದ್ದರು ಪ್ರಯೋಜನವಿಲ್ಲವಯ್ಯ|| ಕಡುಮೂರ್ಖರಿಗೆ ಕಾಲವಯ್ಯ । ಎ। ನ್ನೊಡೆಯ ಪುರಂದರವಿಠಲ ಕೇಳಯ್ಯ || ೫ ||

## ೩೨೫ ರಾಗ ಆರಭಿ ಅಟತಾಳ

ಹರಿಯೆಂಬ ನಾಮಾಮೃತದ ಸುರುಚಿಯ । ಪರಮಭಕ್ತರಿಗಲ್ಲದೆ || ಅರಿಯದ ಕಡು ಮೂರ್ಖಜನರಿಗೆ ಪೇಳಲು । ಹರುಷವಾಗಬಲ್ಲುದೆ || ಪ || ಅಂದುಗೆ ಕಿರಿಗೆಜ್ಜೆ ಇಟ್ಟರೆ ಕೋಡಗ । ಕಂದನಾಗಬಲ್ಲುದೆ || ಹಂದಿಗೆ ತುಪ್ಪ ಸಕ್ಕರೆ ಉಣಿಸಲು ಗ । ಜೇಂದ್ರನಾಗಬಲ್ಲುದೆ|| ಚಂದಿರನ ಷೋಡಶ ಕಳೆಗಳೆಲ್ಲ ತೋರಲು । ಅಂಧ ನೋಡಬಲ್ಲನೆ || ಇಂದಿರೇಶನ ಸವಿನಾಮದ

ರುಚಿಗಳ। ಮಂದಜ್ಞಾನಿ ಬಲ್ಲನೆ ॥೧॥ ಉರಗಗೆ ಕ್ಷೀರವ ಕುಡಿಸಲು ಅದರ। ಗರಳ ಪೋಗಲು ಬಲ್ಲುದೆ ॥ ಭರದಿಂದ ಶ್ವಾನನ ಬಾಲವ ತಿದ್ದಲು । ಸರಲ ವಾಗಬಲ್ಲುದೆ ॥ ಭರದಿಂದ ನೀಲಿಯ ಕರದಲಿ ತೊಳೆಯಲು । ಕರಿದ್ಧ ಪೋಗಬಲ್ಲುವೆ । ಪರಿಪರಿ ಬಂಗಾರ ಇಟ್ಟರೆ ದಾಸಿಯು । ಅರಸಿಯಾಗ ಬಲ್ಲಳೆ ॥ ೨ ॥ ನೋಡಕ್ಕೆ ಮಯೂರ ಕುಣಿವಂತೆ ಕುಕ್ಕುಟ । ನೋಡಿ ಕುಣಿಯಬಲ್ಲುದೆ॥ ಗೋಡೆಗೆ ಇದಿರಾಗಿ ನಾಟ್ಯವನಾಡಲು। ನೋಡಿ ಸುಖಿಸ ಬಲ್ಲುದೆ ॥ ಹಾಡಿದ ಕುಶಲವ ಬಧಿರನು ಕೇಳಿ । ಹರುಷ ಪಡಲು ಬಲ್ಲನೆ । ರೂಢಿಗೊಡೆಯ ನಮ್ಮ ಪುರಂದರವಿಠಲನ್ನ । ಮೂಢ ಜ್ಞಾನಿ ಬಲ್ಲನೆ ॥೩॥

### ೩೨೬ ರಾಗ ಕಾಂಭೋಜಿ ಝಂಪೆತಾಳ

ಕೃಷ್ಣನಾಮವ ನೆನೆದು ಧನ್ಯನಾಗೋ ॥ ಪ ॥ ನೆಲೆಯಿಲ್ಲ ಸಂಸಾರ ವಿಳಿದಂತೆ ಬಾವಿಯೊಳು । ಸಿಲುಕಿ ಸಿಲುಕಿ ಭ್ರಮಿತನಾದೆ ॥ ಫಣೆಯಲ್ಲಿ ಬರೆದ ಕಲ್ಪಣವದು । ನರಹರಿಯ ಸ್ಮರಣೆಯೊಳಗಿರು ಕಂಡ್ಯ ಮನವೆ ॥೧॥ ದಾರ ಪುತ್ರರಿಗೆ ನೀ ಹಂಬಲಿಸಿ ಚಿಂತಿಸಿ । ಮಾಯ ಪ್ರಪಂಚದೊಳು ಸಿಲುಕಿ ಸಿಲುಕಿ॥ ಏನು ಎಂತೆಂಬುವ ಜ್ಞಾನವನು ತಿಳಿಯದೆ। ಶ್ರೀರಾಮರ ಸ್ಮರಣೆಯೊಳಗಿರು ಕಂಡ್ಯ ಮನವೆ ॥೨॥ ಪುತ್ರಪೌತ್ರರ ನೆಚ್ಚಿ ಕೆಡಲುಬೇಡ। ಮಿತ್ರ ಬಂಧುಗಳೆಂಬ ಹಂಬಲವು ಬೇಡ ॥ ಫಣಿಯಲ್ಲಿ ಬರೆದ ಕಲ್ಪಣವದು ತಪ್ಪದು । ಅಚ್ಯುತನ ಸ್ಮರಣೆಯೊಳಗಿರು ಕಂಡ್ಯ ಮನವೆ॥೩॥ ಒಂದೊಂದು ಎಡೆಗಳಿಗೆ ಚಂದವಾಗಿ ತೋರುತಿದೆ । ಮುಂದೆ ಬಡಿಸಿದ ಎಡೆ ತೀರಿಸುತ್ತ॥ ಪುಂಡರೀಕಾಕ್ಷಸಿರಿ ಪುರಂದರವಿಠಲನ್ನ। ತಂಡತಂಡದಿ ನೆನೆದು ಸುಖಿಯಾಗು ಮನವೆ ॥ ೪ ॥

### ೩೨೭ ರಾಗ ಮುಖಾರಿ ಆದಿತಾಳ

ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ । ಕುಣಿದಾಡೆ ಎನ್ನ ನಾಲಿಗೆ ಮೇಲೆ ॥ಪ॥ ಸಲಿಲಜೋದ್ಭವನ ವದನನಿಲಯಳೆ । ಇಳೆಯೊಳ ಪ್ರತಿಮ ಗುಣಗಣಾಂಬುಧಿ ತಾಯೆ ॥ ಅ ॥ ಘಲು ಘಲು ಘಲು ಗೆಜ್ಜೆಯ

ನಾದ। ಥಳಿಥಳಿಸಿ ನಿಮ್ಮ ಹೊಳೆವ ಬೆರಳುಂಗುರ ಕಿಣಿಕಿಣಿ ನಾದ। ಎಳೆಯ ಮಾವಿನ ತಳಿರ ಪೋಲುವ ದಿವ್ಯ ಪಾದ ॥ ಜಿಲ್ವ ಪೆಂಡೆಯ ಭೇದ। ನಲಿವ ಯುಗಳ ಜಂಘೆ। ಜಲಗುಳಿಯಂತೆ ಜಾನು। ಥಳಥಳಿಸುವ ತೊಡೆ ಒಲಿವ ಸುಗುಣೆಯೆ ॥ ೧ ॥ ದಿನಕರಕೋಟಿತೇಜದಿ ಹೊಳೆವ। ಅನುಪಮವಾದ। ಕನಕವಸನದಿಂದ ಎಸೆವ। ಘನವಾದ ಜಘನ ಗಗನದಂದದಿ ಸುಂದರಿ ಕಟಿಯಲಿ ಮೆರೆವ। ಮಣಿದಾಮ ವಿಭವ ॥ ತನು ಜಠರವು ಜಾಹ್ನವಿ ಸುಳಿನಾಭಿಯು ಘನ। ಸ್ತನಯುಗಂ ಚಂದನಲೇಪಿತಳೆ ॥೨॥ ದುಂಡು ಮುತ್ತಿನ ಕೊರಳ ಹಾರ। ಮಿಣಿಮಿಣಿಸುವ ಉ। ದ್ದಂಡ ಮನೋಹರ ಹೊನ್ನಿನ ಸರ। ಕರಿರಾಜಪೋತನ। ಸೊಂಡಿಲಿನಂತೆ ಭುಜದ ಭಾರ। ನಡೆವ ಒಯ್ಯಾರ ॥ ಮಂಡಿತವಾದ। ಕಂಕಣ ತೋಳಬಳೆಗಳು। ದುಂಡು ಹವಳಕೈಕಟ್ಟುಳ್ಳವಳೆ ॥೩॥ ನಸುನಗುಮುಖವು ನಾಸಾಭರಣ। ಎಸೆವ ಕಪೋಲ। ಹೊಸ ಕುಂಡಲ ಚಳತೊಂಬುಳ್ಳ ಶ್ರವಣ। ಬಿಸಜದಳದಂತೆ। ಲಸಿತಾಕರ್ಣಾಂತವಾದ ನಯನ। ತಿಲಕದ ಹಸನ ॥ ಶಶಿಸೂರ್ಯರ ಆಭರಣಸುಶೋಭಿತೆ। ಕುಸುಮ ಮುಡಿದ ಮೂರ್ಧಜವುಳ್ಳವಳೆ ॥ ೪ ॥ ಶೃಂಗಾರವಾದ ಜಡೆ ಬಂಗಾರ। ಹೊಂಗ್ಯಾದಿಗೆ ಮುಡಿದ। ಬಂಗಾರದ ಹೆರಳಿನ ರಾಕಟೆ ವರ। ಭೃಂಗದ ಸ್ವರ ಹಿಂಗದೆ ಭಕ್ತರ ಸಲಹುವ ಭಾರ। ಕಂಗಳ ಮನೋಹರ ॥ ರಂಗ ಪುರಂದರವಿಠಲರಾಯನ। ಮಂಗಳ ಮೂರ್ತಿಯ ತೋರೆ ಶುಭಾಂಗಿ ॥ ೫ ॥

### ೩೨೪ ರಾಗ ಕಾಪಿ ಏಕತಾಳ

ಮಲವ ತೊಳೆಯಬಲ್ಲರಲ್ಲದೆ ಮನವ ತೊಳೆಯಬಲ್ಲರೆ ॥ ಪ ॥ ಹಲವು ತೀರ್ಥಂಗಳಲಿ ಮುಳುಗಿ ಹಲುಬಿದರೆ ಫಲವೇನು ॥ ಅ ॥ ಭೋಗವಿಷಯ ಫಲವನುಂಡು ರಾಗ ಲೋಭದಿಂದ ಮತ್ತ। ನಾಗಿ ಮೆರೆಯುತಿರೆ ಅವನ ಭಾಗ್ಯವಂತನೆಂಬರೆ ॥ ಯೋಗಿಯಂತೆ ಜನರು ಮೆಚ್ಚೋ ಹಾಗೆ ಹೋಗಿ ನೀರಿನಲ್ಲಿ। ಕಾಗೆಯಂತೆ ಮುಳುಗೆ ಮಾಘಸ್ನಾನ ಫಲವು ಬಾಹೊದೆ ॥೧॥ ಪರರ ಕೇಡ ಬಯಸಿ ಗುರುಹಿರಿಯರನ್ನು ನಿಂದಿಸುತ್ತ। ಪರಮ ಸೌಖ್ಯ

ವೆಂದು ಪರಸ್ತ್ರೀಯರನ್ನು ಬಯಸುತ || ಪರಮನಿಷ್ಠ ಮೌನಿಯಂತೆ ಧರೆಯ ಮೇಲೆ ಡಂಭ ತೋರಿ | ಹರಿವ ನೀರಿನ ತೀರದಿ ಕುಳಿತರೇನು ಬಕಧ್ಯಾನದಿ ||೨|| ಕಾಸು ವೀಸಕಾಗಿ ಹರಿಯ ದಾಸನೆಂದು ತಿರುಗಿ ತಿರುಗಿ | ದೇಶ ದೇಶಗಳಲಿ ತೊಳಲಿ ಕಾಶಿಯಾತ್ರೆ ಪೋಗಲು|| ಆಸೆಪಾಶ ಬಿಡದೆ ಮನಸ ಹೇಸಿ ವಿಷಯ ಬಯಸುವಂಥ | ವೇಷಧಾರಿಗಳಿಗೆ ಕಾಶೀಯಾತ್ರೆ ಫಲವು ಬಾಹೊದೆ || ೩ || ತಂದೆ ತಾಯಿ ತಿರಿದು ತಿನಲು ಒಂದು ದಿನ ಕೇಳಲಿಲ್ಲ | ಮಂದಗಮನೆರೊಡನೆ ಆನಂದದಿಂದಲಿರುವರು|| ತಂದೆ ಸತ್ತ ಮೇಲೆ ನೂರು ಮಂದಿ ವಿಪ್ರರಿಗುಣಿಸಿ ತಮ್ಮ | ತಂದೆ ತೃಪ್ತನಾದನೆಂಬರು|ಮಂದಮತಿಯ ಜನಗಳು || ೪ || ಏನು ಓದಲೇನು ಫಲ ಏನು ಕೇಳಲೇನು ಫಲ | ಜ್ಞಾನದಿಂದ ಅಚ್ಯುತನ ಧ್ಯಾನವಿಲ್ಲದವರಿಗೆ || ಮೌನ ನೇಮ ನಿಷ್ಠೆ ಏಕೆ ಹೀನ ಚಿತ್ತನಾದ ಮೇಲೆ | ಶ್ರೀನಿವಾಸ ಪುರಂದರವಿಠಲನು ಮೆಚ್ಚುವನೆ ಮರುಳೆ || ೫ ||

### ೩೨೯ ರಾಗ ಸೌರಾಷ್ಟ್ರ ಅಟತಾಳ

ರಾಮ ರಾಮೆನ್ನಿರೋ ನರಜನ್ಮ ಸ್ಥಿರವಲ್ಲ | ರಾಮ ರಾಮ || ಇಂಥ || ಕೋಮಲಾಂಗನ ನಾಮ ಆ ವೇಳೆಗೊದಗದು | ರಾಮ ರಾಮ ||ಪ|| ಯಾರಿಗೆ ಯಾರಿಲ್ಲ ತನಗೆ ತಾನಲ್ಲದೆ | ರಾಮ ರಾಮ|| ತನ್ನ || ನಾರಿಯು ಮೊದಲಾದವರು ಸರಿಬಾರರು | ರಾಮ ರಾಮ || ೧ || ಓರಂತೆ ಸಾಕಿದ ಸುತರು ತನ್ನವರಲ್ಲ| ರಾಮ ರಾಮ| ತನ್ನ|| ಧಾರಿಣಿ ಪಶು ಧಾನ್ಯ ಧನವು ಹಿಂದುಳಿವುವೊ | ರಾಮ ರಾಮ || ೨ || ಕೆಟ್ಟ ಸಂಸಾರದಿ ಎಷ್ಟುಕ್ಕು ಸುಖವಿಲ್ಲ | ರಾಮ ರಾಮ|| ಈ || ಸೃಷ್ಟಿಯೊಳ್ ಪುರಂದರವಿಠಲನ ಮರೆಯದೆ| ರಾಮ ರಾಮ || ೩ ||

### ೩೩೦ ರಾಗ ಸಾವೇರಿ ಛಾಪುತಾಳ

ಪುಟ್ಟಿಸಬೇಡೆಲೊ ದೇವ | ಎಂದೆಂದಿಗೂ ಇಂಥ || ಪ || ಭ್ರಷ್ಟನಾಗಿ ತಿರುಗವ | ಪಾಪಿ ಜೀವನವ ||ಅ|| ನರರ ಸ್ತುತಿಸಿ, ನಾಲಿಗೆ ಬರಿದು ಮಾಡಿಉ | ದರಪೋಷಣೆಗಾಗಿ ಇರುವರೆನ್ನದೆ || ಧರೆಯೊಳು ಲಜ್ಜೆನಾಚಿಕೆಗಳ

ನೀಡಾಡಿ। ಪರರ ಪೀಡಿಸಿ ತಿಂಬ ಪಾಪಿ ಜೀವನವ ॥೧॥ ಎಂಟು ಗೇಣು ಶರೀರ ಒಂದು ಗೇಣು ಮಾಡಿಕೊಂಡು। ವಂಚಿಸುತ ಮೆಲ್ಲಮೆಲ್ಲನೆ ಪೋಗಿ॥ ಗಂಟಲ ಸೆರೆಗಳುಬ್ಬಿ ಕೇಳುವ ಸಂಕಟ ವೈ। ಕುಂಠಪತಿ ನೀನೆ ಬಲ್ಲೆ ಕಪಟ ನಾಟಕನೆ ॥ ೨ ॥ ಲೆಕ್ಕದಲ್ಲಿ ನೀ ಮೊದಲು ಮಾಡಿದ್ದಲ್ಲದೆ ಒಮ್ಮೆ। ನಕ್ಕು ವೆಗ್ಗಳವಾಗಿ ಕೊಡುವರುಂಟೆ ॥ ಕಕ್ಕುಲತೆ ಪಟ್ಟರಿಲ್ಲ ಕರುಣಾಳು ನಿನ್ನ ಮರೆ। ಹೊಕ್ಕೆನು ಸಲಹೊ ಶ್ರೀಪುರಂದರವಿಠಲ ॥೩॥

## ೩೩೧ ರಾಗ ಮೋಹನ ಅಟತಾಳ

ಆಚಾರವಿಲ್ಲದ ನಾಲಿಗೆ। ನಿನ್ನ। ನೀಚಬುದ್ಧಿಯ ಬಿಡು ನಾಲಿಗೆ ॥ಪ॥ ವಿಚಾರವಿಲ್ಲದೆ ಪರರ ದೂಷಿಪುದಕ್ಕೆ । ಚಾಚಿಕೊಂಡಿರುವಂಥ ನಾಲಿಗೆ ॥ ॥ಅ॥ ಪ್ರಾತಃಕಾಲದೊಳೆದ್ದು ನಾಲಿಗೆ। ಸಿರಿ। ಪತಿಯೆನ್ನಬಾರದೆ ನಾಲಿಗೆ॥ ಪತಿತಪಾವನ ನಮ್ಮ ರತಿಪತಿಜನಕನ। ಸತತವು ನುಡಿ ಕಂಡ್ಯ ನಾಲಿಗೆ ॥ ॥ ೧ ॥ ಚಾಡಿ ಹೇಳಲು ಬೇಡ ನಾಲಿಗೆ। ನಿನ್ನ। ಬೇಡಿಕೊಂಬುವೆನು ನಾಲಿಗೆ ॥ ರೂಢಿಗೊಡೆಯ ಶ್ರೀರಾಮನ ನಾಮವ। ಪಾಡುತಲಿರು ಕಂಡ್ಯ ನಾಲಿಗೆ ॥೨॥ ಹರಿಯ ಸ್ಮರಣೆಮಾಡು ನಾಲಿಗೆ। ನರ। ಹರಿಯ ಭಜಿಸು ಕಂಡ್ಯ ನಾಲಿಗೆ ॥ ವರದ ಪುರಂದರವಿಠಲರಾಯನ। ಚರಣಕಮಲ ನೆನೆ ನಾಲಿಗೆ ॥೩॥

## ೩೩೨ ರಾಗ ಆನಂದಭೈರವಿ ಅಟತಾಳ

ಸುಮ್ಮನೆ ಬರುವುದೆ ಮುಕ್ತಿ ॥ಪ॥ ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ ॥ ಅ ॥ ಮನದಲಿ ದೃಢವಿರಬೇಕು । ಪಾಪಿ। ಜನರ ಸಂಸರ್ಗವ ನೀಗಲುಬೇಕು ॥ ಅನುಮಾನವನು ಬಿಡಬೇಕು। ತನ್ನ। ತನುಮನಧನವ ನೊಪ್ಪಿಸಿ ಕೊಡಬೇಕು॥೧॥ ಕಾಮಕ್ರೋಧವ ಬಿಡಬೇಕು। ಪರ। ಕಾಮಿನಿಯರ ಹಂಬಲ ಬಿಡಬೇಕು ॥ ಹೇಮದಾಸೆಯ ಸುಡಬೇಕು। ಹರಿ। ನಾಮ ಸಂಕೀರ್ತನೆಯನು ಮಾಡಬೇಕು ॥೨॥ ಸಂದಣಿಗಳ ಬಿಡಬೇಕು। ದೇಹ। ಬಂಧುಬಾಂಧವರ ಸ್ನೇಹವ ಬಿಡಬೇಕು ॥ ನಿಂದಿಸಿದರೆ ಹಿಗ್ಗಬೇಕು।

ಕೋಪ । ಬಂದಾಗ ಸೈರಣೆ ಬಿಡದಿರಬೇಕು ॥ ೩ ॥ ಹರಿಯೇ ಗುರುವೆನ್ನಬೇಕು । ಶ್ರೀ । ಹರಿಯೆ ಪರದೈವವೆಂದೆನ್ನಬೇಕು ॥ ಪರವಸ್ತು ಒಲ್ಲಿನಬೇಕು । ದೇಹ । ಸ್ಥಿರವಲ್ಲವೆಂದೆಂದು ತಿಳಿಯಲುಬೇಕು ॥ ೪ ॥ ವ್ಯಾಪಾರವನು ಬಿಡಬೇಕು । ನಮ್ಮ । ಶ್ರೀಪತಿ ಪುರಂದರವಿಠಲೆನ್ನಬೇಕು ॥ ಪಾಪರಹಿತನಾಗಬೇಕು । ಜ್ಞಾನ । ದೀಪದ ಬೆಳಕಿಲಿ ಓಡಾಡಬೇಕು ॥ ೫ ॥

## ೩೩೩ ರಾಗ ಸೌರಾಷ್ಟ್ರ ಅಟತಾಳ

ಎಚ್ಚರಿಕೆ ಎಚ್ಚರಿಕೆ ಮನವೆ । ಅಚ್ಯುತನ ಪಾದಾರವಿಂದದಲ್ಲಿ ॥ ಪ ॥ ಬಲ್ಲಿದ ನೀನೆಂದು ಬಡವರ ಬಾಯ । ಬಡಿಯದಿರೆಚ್ಚರಿಕೆ ॥ ಎಳ್ಳಷ್ಟು ತಪ್ಪಿದರೆ ಯಮನಾಳು ನರಕಕ್ಕೆ । ಎಳೆದೊಯ್ವರೆಚ್ಚರಿಕೆ ॥ ೧ ॥ ಮಾಡು ದಾನಧರ್ಮಪರರಿಗುಪಕಾರ । ಮರೆಯದಿರೆಚ್ಚರಿಕೆ ॥ ಇದು । ನೋಡಿ ನಡೆಸುವ ನಿಪುಣರ ನೋಡು । ನಟನೆ ಬೇಡೆಚ್ಚರಿಕೆ ॥ ೨ ॥ ಬಾಳುವಾಗ ಸಿರಿ ಬರುವಾಗ ತಂದೆ ಕೇಳು । ಬೆಡಗು ಬೇಡೆಚ್ಚರಿಕೆ ॥ ಈ । ಹಾಳ್ಬದುಕಿಗಾಗಿ ಹಗರಣ ಬೇಡ ನೀ । ತಿಳಿದು ನೋಡೆಚ್ಚರಿಕೆ ॥ ೩ ॥ ಹೆಣ್ಣು ಮಣ್ಣು ಹೊನ್ನು ತನ್ನನೆ ವಂಚಿಸಿ । ಹೋಹುದಿನ್ನೆಚ್ಚರಿಕೆ ॥ ಅನ್ಯವೆಣಿಸದಿರು ನಂಬಿದ ಠಾವಿಗೆ । ಕೆಡುವೆ ನೀನೆಚ್ಚರಿಕೆ ॥೪॥ ಚೆನ್ನಾಗಿ ನಾ ಬಾಳಿ ಬದುಕಿದೆನೆಂದೆಂಬ । ಶ್ರೇಷ್ಠ ಬೇಡೆಚ್ಚರಿಕೆ ॥ ನೀ । ಮುನ್ನ ಮಾಡಿದ ಪುಣ್ಯದಿಂದಲೆ ಬಂದಿತು । ಮುಂದಿನ್ನು ಎಚ್ಚರಿಕೆ ॥೫॥ ಕಾಲನ ದೂತರು ಯಾವಾಗ ಕರೆವರೊ । ಕಾಣಲಾರದೆಚ್ಚರಿಕೆ ॥ ಶ್ರೀಲೋಲ ಪುರಂದರ ವಿಠಲರಾಯನ । ಮರೆಯದಿರೆಚ್ಚರಿಕೆ ॥ ೬ ॥

## ೩೩೪ ರಾಗ ಕಾಂಭೋಜಿ ಝಂಪೆತಾಳ

ಎಂತು ನೋಡಿದರು ಚಿಂತೆ । ಈ ಒಡಲು ನಿ । ಶ್ಚಿಂತರಾಗಿಹರ ಒಬ್ಬರನು ಕಾಣೆ ॥ಪ॥ ಬ್ರಹ್ಮನಿಗೆ ಶಿರ ಹೋಗಿ ಬಾಡಿ ಬಳಲುವ ಚಿಂತೆ। ಮುನ್ನ ಮಾರುತಿಗೆ ಕಪಿಯಾದ ಚಿಂತೆ ॥ ಮನ್ಮಥಗೆ ತನು ಸುಟ್ಟು ಬೂದಿಯಾಗಿಹ ಚಿಂತೆ । ಕಣ್ಣು ಮೂರುಳ್ಳವಗೆ ತಿರಿದುಂಬ ಚಿಂತೆ ॥ ೧ ॥ ಕಾಮಧೇನುವಿಗೆ

ಕರೆದೊಯ್ವರೆಂಬ ಚಿಂತೆ । ಕಾಮಿನಿಯರಿಗೆ ಒಡವೆಗಳಚಿಂತೆ ॥ ಸ್ವಾಮಿ ಯಾಳುವ ದೊರೆಗೆ ಪರದೊರೆಗಳ ಚಿಂತೆ । ಪಾಮರ ನರಗೆ ಬರೆಹ ಬರದಿರುವ ಚಿಂತೆ॥೨॥ ಧರ್ಮಾತ್ಮರೆಲ್ಲರಿಗೆ ದೀನಜನರಾ ಚಿಂತೆ। ಕರ್ಮಾತ್ಮರೆಲ್ಲರಿಗೆ ಕೆಡುವ ಚಿಂತೆ॥ ವರ್ಮ ಬೆಳೆಸುವರಿಗೆ ವೈರಿ ಕೊಲ್ಲುವ ಚಿಂತೆ। ಬರ್ಮಣಗೆ ಸತತ ವ್ಯಾಖ್ಯಾನ್ನ ಚಿಂತೆ ॥ ೩ ॥ ಭಕ್ತರಿಗೆ ಗುರುವಿನೊಳು ಮುಕ್ತಿ ಬೇಡುವ ಚಿಂತೆ। ಮುಕ್ತರಿಗೆ ಪರಮಾತ್ಮ ದೊರೆವ ಚಿಂತೆ ॥ ಯುಕ್ತಿ ಬಲ್ಲವಗೆ ವಿವೇಕವಾಡುವ ಚಿಂತೆ ವಿ । ರಕ್ತನಾದಗೆ ಕಾಮ ಸುಡುವ ಚಿಂತೆ ॥ ೪ ॥ ಕ್ಷುದ್ರ ರಕ್ಕಸರಿಗೆಲ್ಲರನು ತಿನ್ನುವ ಚಿಂತೆ। ನಿದ್ರೆ ಬಾರದವನಿಗೆ ರಾತ್ರಿ ಚಿಂತೆ॥ ಕದ್ದು ತರಲ್ಹೋದವಗೆ ಕೋಳಿ ಕೂಗುವ ಚಿಂತೆ। ಮುದ್ದು ಪುರಂದರವಿಠಲನೊಬ್ಬನಿಗೆ ನಿಶ್ಚಿಂತೆ ॥ ೫ ॥

## ೩೩೫ ರಾಗ ನಾದನಾಮಕ್ರಿಯೆ ಆದಿತಾಳ

ಕೂಸಿನ ಕಂಡೀರ್ಯಾ । ಗುರು ಮುಖ್ಯಪ್ರಾಣನ ಕಂಡೀರ್ಯಾ ॥ಪ॥ ಬಾಲನ ಕಂಡೀರ್ಯಾ । ಬಲವಂತನ ಕಂಡೀರ್ಯಾ ॥ಅ॥ ಅಂಜನೆಯುದರದಿ ಪುಟ್ಟಿತು ಕೂಸು। ರಾಮನ ಚರಣಕೆ ಎರಗಿತು ಕೂಸು ॥ ಸೀತೆಗೆ ಉಂಗುರ ಕೊಟ್ಟಿತು ಕೂಸು । ಲಂಕಾಪುರವನೆ ಸುಟ್ಟಿತು ಕೂಸು ॥೧॥ ಭಂಡಿ ಅನ್ನವನುಂಡಿತು ಕೂಸು । ಬಕನ ಪ್ರಾಣವ ಕೊಂಡಿತು ಕೂಸು ॥ ವಿಷದ ಲಡ್ಡುಗೆ ಮೆದ್ದಿತು ಕೂಸು । ಮಡದಿಗೆ ಪುಷ್ಪವ ಕೊಟ್ಟಿತು ಕೂಸು ॥ ೨ ॥ ಮಾಯಾವಾದಿಗಳ ಗೆದ್ದಿತು ಕೂಸು । ದ್ವೈತಮತವನುದ್ಧರಿಸಿತು ಕೂಸು॥ ಮಧ್ವರಾಯರೆಂಬ ಪೆಸರಿನ ಕೂಸು । ಪುರಂದರವಿಠಲನ ಪ್ರೇಮದ ಕೂಸು ॥ ೩॥

## ೩೩೬ ರಾಗ ತೋಡಿ ಆದಿತಾಳ

ಸೇವಕತನದ ರುಚಿ ಏನಬಲ್ಲೆಯೋ ॥ ಪ ॥ ದೇವ ಹನುಮರಾಯ್ರ ವೈರಾಗ್ಯ ಭಾಗ್ಯ ಬೇಡಿ ॥ ಅ ॥ ಉದಧಿಯ ಲಂಘಿಸಿ ಸೀತೆಯ ಕಂಡು ಬಂದಾಗ। ಮದುವೆಯ ಮಾಡೆನ್ನ ಬಾರದಿತ್ತೆ ॥ ರಾಮ॥ ಪವದಿ ಪಾಷಾಣ

ಪೆಣ್ಣ ಮಾಡಿದವನಿಗೆ । ಇದು ಏನು ಆಶ್ಚರ್ಯವೊ ನೀ ಬಯಸಲೊಲ್ಲದೆ॥೧॥ಕ್ಷಣದೊಳು ಸಂಜೀವನಗಿರಿ ತಂದಾಗ। ಹಣ ಹೊನ್ನು ಬೇಡಲು ಕೊಡದಿಹನೆ ॥ ರಾಮ ॥ ವನಜಾಕ್ಷಿ ಸಿರಿದೇವಿ ಅರಸು ಉದಾರನಿಗೆ । ಘನವಾಗಿಹುದು ಏನು ನೀ ಬಯಸಲೊಲ್ಲದೆ ॥ ೨ ॥ ಸಾರ್ವಭೌಮನು ತಾನೆ ಮೆಚ್ಚಿ ಬಂದಾಗಲೆ । ಊರ್ವಿಯ ಬೇಡಲು ಕೊಡದಿಹನೆ ॥ ರಾಮ ॥ ಸರ್ವವ ತೊರೆದು ಶ್ರೀಪುರಂದರವಿಠಲನ್ನ । ನಿರ್ವ್ಯಾಜಭಕುತಿ ಬೇಡಿ ಕೊಂಡ್ಯಲ್ಲದೆ ॥ ೩ ॥

### ೩೩೭ ರಾಗ ಪಂತುವರಾಳಿ ಏಕತಾಳ

ಎಂಥಾ ಬಲವಂತನೋ । ಕುಂತಿಯ ಸಂಜಾತನೋ ॥ ಪ ॥ ಭಾರತಿಗೆ ಕಾಂತನೋ । ಸತ್ಯ ಶ್ರೀಮಂತನೋ ॥ಅ॥ ರಾಮಚಂದ್ರನ ಪ್ರಾಣನೋ । ಅಸುರಹೃದಯಬಾಣನೋ ॥ ಖಳರ ಗಂಟಲಗಾಣನೋ । ಜಗದೊಳಗೆ ಪ್ರವೀಣನೋ ॥೧॥ ಕುಂತಿಯ ಕಂದನೋ ಸೌ। ಗಂಧಿಕವ ತಂದನೋ॥ ಕುರುಕ್ಷೇತ್ರಕೆ ಬಂದನೋ । ಕೌರವರ ಕೊಂದನೋ ॥೨॥ ಭಂಡಿ ಅನ್ನವನುಂಡನೋ । ಬಕನ ಪ್ರಾಣವ ಕೊಂಡನೋ ॥ ದ್ರೌಪದಿಗೆ ಗಂಡನೋ। ಭೀಮನು ಪ್ರಚಂಡನೋ ॥ ೩ ॥ ವೈಷ್ಣವಾಗ್ರಗಣ್ಯನೋ । ಸಂಚಿತಾಗ್ರ ಪುಣ್ಯನೋ ॥ ದೇವವರೇಣ್ಯನೋ । ದೇವಶರಣ್ಯನೋ ॥೪॥ ಮಧ್ವಶಾಸ್ತ್ರ ರಚಿಸಿದನೋ । ಸದ್ವೈಷ್ಣವರ ಸಲಹಿದನೋ ॥ ಉಡುಪಿಲಿ ಕೃಷ್ಣನ ನಿಲಿಸಿದನೋ । ಪುರಂದರವಿಠಲನ ದಾಸನೋ ॥ ೫ ॥

### ೩೩೮ ರಾಗ ಕಲ್ಯಾಣಿ ಅಟತಾಳ

ಗುರುರಾಯರ ನಂಬಿರೊ। ಮಾರುತಿಯೆಂಬ। ಗುರುರಾಯರ ನಂಬಿರೊ॥ ॥ ಪ ॥ ಗುರುರಾಯರ ನಂಬಿ ಬಿಡದೆ ಯಾವಾಗಲು । ದುರಿತವ ಕಳೆದು ಸದ್ಗತಿಯ ಪಡೆದರೆಲ್ಲ ॥ಅ॥ ಶರಧಿಯ ಮನೋವೇಗದಿ । ಲಂಘಿಸಿ ಮಹೀ। ತನುಜೆಶೋಕವ ತರಿದು ॥ ವನವ ಬೇರೊಡನೆ ಕಿತ್ತಾಡಿ ಆರ್ಭಟಿಸಿದ । ದನುಜರ ಬಡೆದು ಲಂಕೆಯ ತನ್ನ ಸಖಗಿತ್ತ ॥ ಗುರು ॥೧॥ ಕೌರವ ಬಕ ಹಿಡಿಂಬ । ಕೀಚಕರೆಂಬ । ದುರುಳಸಂತತಿ ನೆಗ್ಗೊತ್ತಿ ॥ ಘೋರ ಪಾತಕಿ

ದುರ್ವಾಸನನ ರಕುತವ! ಹೀರಿ ಮುಪದಿ ಮುರವೈರಿಯ ಭಜಿಸಿದ॥ ಗುರು॥ ॥೨॥ ಜೀವೇಶರೊಂದೆಂಬ । ದುರ್ವಾದಿಯ । ಭಾವಶಾಸ್ತ್ರವ ಮುರಿದು ॥ ಕೋವಿದರಿಗಿ ಸದ್ಭಾಷ್ಯವ ತೋರಿದ । ದೇವ ಪುರಂದರವಿಠಲಸೇವಕರಾದ॥ ಗುರು ॥೩॥

## ೩೩೯ ರಾಗ ಪೂರ್ವಿ ಅಟತಾಳ

ಇಕ್ಕಲಾರೆ ಕೈ ಎಂಜಲು । ಚಿಕ್ಕ । ಮಕ್ಕಳು ಅಳುತಾರೆ ಹೋಗೋ ದಾಸಯ್ಯ ॥ಪ॥ ಮನೆಯ ಸಾರಿಸುತೇನೆ ಮಡಕೆ ತೊಳೆಯುತೇನೆ । ಮನೆ ಯೊಳಗಾರಿಲ್ಲ ಹೋಗೋ ದಾಸಯ್ಯ ॥ ತನಯರು ಅಳುತಾರೆ ನಿನದೇನು ಕಾಟವು । ಕ್ಷಣ ಹೊತ್ತು ನಿಲ್ಲದೆ ಹೋಗೋ ದಾಸಯ್ಯ ॥೧॥ ಅಟ್ಟದ ಮೇಲಣ ಅಕ್ಕಿ ತೆಗೆಯಬೇಕು । ಹೊಟ್ಟೆ ನೋಯುತಲಿದೆ ಹೋಗೋ ದಾಸಯ್ಯ ॥ ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ । ನಿಷ್ಠುರ ಮಾಡದೆ ಹೋಗೋ ದಾಸಯ್ಯ॥೨॥ ವೀಸದ ಕಾಸಿಗೆ ಪವಸವ ನಾ ತಂದೆ । ಕೂಸಿಗೆ ಸಾಲದು ಹೋಗೋ ದಾಸಯ್ಯ ॥ ಆಸೆಕಾರ ನೀನು ದೋಷಕಾರಿ ನಾನು। ಶೇಷಾಚಲವಾಸ ಪುರಂದರವಿಠಲ ॥೩॥

## ೩೪೦ ರಾಗ ಪೂರ್ವಿ ಝಂಪೆತಾಳ

ನೀನೆ ಗತಿ ನೀನೆ ಮತಿ ನೀನೆ ಸ್ವಾಮಿ! ನೀನಲ್ಲದನ್ಯತ್ರ ದೈವಗಳ ನಾನರಿಯೆ ॥ಪ॥ ನಿನ್ನ ಪಾದಾರವಿಂದದ ಸೇವೆಯ ಮಾಡಿ । ನಿನ್ನ ಧ್ಯಾನದಲಿರುವ ಹಾಗೆ ಮಾಡು ॥ ನಿನ್ನ ದಾಸರ ಸಂಗದಿಂದ ದೂರಿಡದೆನ್ನ। ಸನ್ಮಾರ್ಗದಿರಿಸೋ ಜಗದೀಶ ಅಘನಾಶ ॥೧॥ ಕಮಲನಾಭಿಯಲಿ ಬೊಮ್ಮನ ಪುಟ್ಟಿಸಿದೆ ಹರಿಯೆ । ಕಮಲಸಖಕೋಟಿಪ್ರಕಾರ ಈಶ ॥ ಕಮಲಕರತಳದೆ ಅಭಯವನಿತ್ತು ಭಕುತರಿಗೆ । ಕಮಲಾಕ್ಷನೆನಿಸಿದೆಯೋ ಕಮಲಾರಮಣ ॥೨॥ ಶಿಶು ಪಾಲದಂತವಕ್ತ್ರರ ಶಿರವ ಛೇದಿಸಿದೆ । ಪಶುಪತಿಯ ಆಭರಣವೈರಿವಾಹನನೆ ॥ ಅಸುರಕುಲ ಸಂಹರಿಸಿ ಭಕ್ತಜನರನು ಪೊರೆದೆ । ವಸುಧೇಶ ಪುರಂದರವಿಠಲರಾಯ ॥೩॥

## ೩೪೨ ರಾಗ ಕಾಂಭೋಜಿ ರೂಪಕತಾಳ

ಕನಕದಾಸನ ಮೇಲೆ ದಯವಮಾಡಲು ವ್ಯಾಸ । ಮುನಿ ಮಠದವರೆಲ್ಲ ದೂರಿಕೊಂಬುವರೊ ॥ ಪ ॥ ತೀರ್ಥವನು ಕೊಡುವಾಗ ಕನಕಣ್ಣ ಕರೆ ಯೆನಲು । ಧೂರ್ತರಾಗಿದ್ದ ವಿದ್ವಾಂಸರೆಲ್ಲ ॥ ಸಾರ್ಥಕವಾಯಿತು ಇವರ ಸಂನ್ಯಾಸಿತನವೆಲ್ಲ । ಪೂತ್ಕಾರಗಲೆಂತೆನಲು ಯತಿಯು ನಗುತಿದ್ದನು ॥೧॥ ಮರುದಿನ ಅವರವರ ಪರೀಕ್ಷಿಸಬೇಕೆಂದು । ಕರೆದು ವಿದ್ವಾಂಸರಾ ಕನಕ ಸಹಿತ ॥ಕರದಲ್ಲಿ ಕದಳಿಯ ಫಲಗಳನೆ ಕೊಟ್ಟು ಯಾ । ರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥೨॥ ಊರ ಹೊರಗೆ ಹೋಗಿ ಬೇರೆ ಬೇರೆ ಕುಳಿತು । ತೋರದಲೆ ಎಲ್ಲರೂ ಮೆದ್ದು ಬರಲು ॥ ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ । ಕನಕ ಕದಳೀಫಲವ ತಂದು ಮುಂದಿಟ್ಟ ॥೩॥ ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ । ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ ॥ ತಿಂಬುವುದು ಹೇಗೆನುತ ವ್ಯಾಸರಾಯರ ಕೇಳೆ । ಸಂಭ್ರಮದಲವರೆಲ್ಲ ಕುಳಿತು ಕೇಳಿದರು॥೪॥ ಮಾಣಿಕವು ಕೋಡಗದ ಕೈಯಲ್ಲಿ ಇದ್ದಂತೆ। ಕೋಣ ನಿದಿರಿಗೆ ಕಿನ್ನರಿಯ ಮೀಟಿದಂತೆ॥ ವೇಣುಧ್ವನಿ ಬಧಿರನ ಬಳಿ ಮಾಡಿದಂತೆ ಕಣ್ಣು । ಕಾಣದವನಿಗೆ ಕನ್ನಡಿಯ ತೋರಿದಂತೆ ॥ ೫ ॥ ನೋಡಿದರೆ ಈ ಕನಕ ನಾಡುವ ಮಾತುಗಳ । ಮೂಢಜನರರಿಯಬಲ್ಲರೆ ಮಹಿಮೆಯ ॥ ನಾಡಾಡಿಯಂತೆಯೇ ಮಾಡಿಬಿಟ್ಟರು । ಇವಗೆ । ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥ ೬ ॥ ಕರದಲ್ಲ ಮೂರ್ತಿಯನು ಪಿಡಿದು ಕೇಳುತ್ತಿರಲು । ಅರ್ಥಿಯದಜ್ಞಾನದಲಿ ಪೇಳುತಿರಲು ॥ ತ್ವರದಿ ಕನಕನು ಬಂದು ವಾಸು ದೇವನ ರೂಪ । ಪರಬೊಮ್ಮ ಪುರಂದರವಿಠಲನೆಂದು ಪೇಳಿದನು ॥ ೭ ॥

## ೩೪೩ ರಾಗ ಕಲ್ಯಾಣಿ ಅಟತಾಳ

ಒಂದೇ ನಾಮವು ಸಾಲದೆ । ಶ್ರೀ ಹರಿಯೆಂಬ । ಒಂದೇ ನಾಮವು ಸಾಲದೆ ॥ಪ॥ ಒಂದೇ ನಾಮವು ಭವಬಂಧನ ಬಿಡಿಸುವು । ದೆಂದು ವೇದಂ ಗಳಾನಂದದಿ ಸ್ತುತಿಸುವ ॥ಅ॥ ಉಭಯ ರಾಯರು ಸೇರಿ ಮುದದಿ ಲೆತ್ತವ ನಾಡಿ। ಸಭೆಯೊಳು ಧರ್ಮಜ ಸತಿಯ ಸೋಲೆ॥ ನಭಕೆ ಕೈಯೆತ್ತಿ ದ್ರೌಪದಿ

ಕೃಷ್ಣಾ ಎನಲು । ಇಭರಾಜಗಮನೆಗಕ್ಷಯವಸ್ತ್ರವನಿತ್ತ ॥ ೧ ॥ ಹಿಂದೊಬ್ಬ ಋಷಿಪುತ್ರನಂದು ದಾಸಿಯ ಕೂಡೆ । ಸಂದೇಹವಿಲ್ಲದೆ ಹಲವು ಕಾಲ ॥ ದಂಮಗದೊಳು ಸಿಲುಕಿ ನಿಂದಂತ್ಯ ಕಾಲದಿ । ಕಂದ ನಾರಗನೆಂದು ಕರೆಯಾ ಲಭಯವಿತ್ತ ॥೨॥ ಕಾಶಿಯ ಪುರದೊಳಗೆ ಈಶ ಭಕುತಿಯಿಂದ । ಸಾಸಿರ ನಾಮದ ರಾಮನೆಂಬ ॥ ಶ್ರೀಶನ ನಾಮವ ಉಪದೇಶ ಸತಿಗಿತ್ತ । ವಾಸುದೇವ ಶ್ರೀಪುರಂದರವಿಠಲನ್ನ ॥ ೩ ॥

## ೩೪೪ ರಾಗ ಭೈರವಿ ಅಟತಾಳ

ಕಂಡೆ ಕಂಡೆ । ರಾಜರ । ಕಂಡೆ ಕಂಡೆ ॥ ಪ ॥ ಕಂಡೆ ಕಂಡೆನು ಕರುಣಾನಿಧಿಯನು । ಕರಗಳಂಜಲಿ ಮಾಡಿ ಮುಗಿವೆನು ॥ ಲಂಡ ಮಾಯಿಗಳ ಗುಂಡಿ ಒಡೆಯಲು । ದ್ದಂಡ ಮಾರುತಿಪದಕೆ ಬರುವನ॥ಅ॥ ಪಂಚವೃಂದಾವನದಿ ಮೆರೆಯುವ । ಪಂಚಬಾಣನ ಪಿತನ ಸ್ಮರಿಸುವ ॥ ಪಂಚನಂದನ ಮುಂದೆ ಆಗುತ । ಮಿಂಚಿನಂದದಿ ಪೊಳೆವ ಮಹಿಮನ ॥೧॥ ಪಂಚಪಾತಕ ಕಳೆವ ದೇವನ । ಪಂಕಜಾರಿನಿಭೇಂದುವಕ್ತ್ರನ ॥ಅ॥ ತಂತಕವಿಲ್ಲದೆ ಭಜಿಪ ಸುಜನರ । ಶಂಕೆ ಬಿಡಿಸುವ ಶಂಕರೇಶನ ॥ ೨ ॥ ಭಜಿಸುವ್ಹೋರಿಗೆ ಭಾಗ್ಯ ಕೊಡುವನ । ಋಜುಗಣೇಶಸುರೇಂದ್ರವಂದಿತ ॥ ನಿಜ ಪುರಂದರವಿಠ್ಠಲೇಶನ । ಭಜನೆ ಮಾಡುವ ಭಾವಿ ಮರುತನ ॥೩॥

## ೩೪೫ ರಾಗ ಕಾಂಭೋಜಿ ಝಂಪೆತಾಳ

ತುರು ಕರು ಕರೆದರೆ ಉಣಬಹುದಣ್ಣ । ತುರು ಕರು ಕರೆದರೆ ಅತಿ ಪುಣ್ಯವಯ್ಯ॥ಪ॥ ತುರು ಕರಿಂದ ಮುಟ್ಟುಮುಡಿ ಬಿಟ್ಟು ಹೋಗೋದು । ತುರು ಕರಿಂದ ಎಂಜಲು ಹೋಗೋದು ॥ ತುರು ಕರ ಕೂದಲು ತುದುಬಿಗೆ ಸುತ್ತಿದರೆ । ಎಣಿಕೆಯಿಲ್ಲದ ಮುತ್ತೈದೆಯರಣ್ಣ ॥ ೧ ॥ ತುರು ಕರಿಂದ ಸ್ವರ್ಗ ಸಾಧನವಾಗೋದು । ತುರು ಕರಿಂದ ನರಕ ದೂರವಯ್ಯ ॥ ತುರು ಕರು ಬಂದರೆ ಸರಕ್ಕನೆ ಏಳಬೇಕು । ತುರು ಕರು ಪೂಜಿಸೆ ಹರಿ ಒಲಿವ ॥ ೨ ॥ ತುರು ಕರ ನೀರ ಎರಕೊಂಡ ನಮ್ಮ ದೇವ। ಎರಕೊಂಡ ನೀರೆಲ್ಲ ಸನಕಾದಿ

ಗಳಿಗೆ || ಬೆರಕೆ ಮಾಡಿದ ಹರಿದಾಸರಿಗೆಲ್ಲ | ಎರವು ಮಾಡಿದ ನಮ್ಮ ಪುರಂದರವಿಠಲ ||೩||

## ೩೪೬ ರಾಗ ಶ್ರೀರಾಗ ರೂಪಕತಾಳ

ದಾರ ಮಗನಮ್ಮ | ರಂಗಯ್ಯ || ದಾರ ಮಗನಮ್ಮ | ದಾರಿಯ ನೋಡುತ್ತ | ದಾರು ಈತನು ದಾರು ತಿಳಿಯದು || ಪ || ಅರವಿಂದಾನನೆ ಕೇಳ್ | ಅರಮೊರೆಯಾದರೆ | ಅರಿಯದಂದದಿ ಬಂದು ಅ | ಧರ ಮುದ್ದಾಡಿಪ || ದಾರ || ೧ || ಕಾಂತೆ ಕೇಳ್ ಏ | ಕಾಂತದಿ ಮಲಗಿದೇ | ಕಾಂತನಾಗಿ ಏ | ಕಾಂತಕ್ಕೆ ಕರೆತಾರೆ || ದಾರ || ೨ || ನಾರಿ ಕೇಳೆ ಅಕ್ಕ | ಸಾರವನೆ ಹೊಕ್ಕು | ಸೇರಿದೆ ನಿನ್ನಯ | ಸೀರೆಯ ಸೆಳೆದೊಯ್ದ || ದಾರ ||೩|| ಸರಸಿಜಾಕ್ಷಿ ಕೇಳ್ | ರಾತ್ರೆವೇಳ್ಯದಿ | ಸರಸರನೆ ಬಂದು | ಸರಸವಾಡಿ ಪೋದ || ದಾರ || ೪ || ಗಾಡಿಗಾರ ಪುರಂದರವಿಠಲ | ಗಾಢಾಲಿಂಗನ ಮಾಡಿ | ತಾನೋಡಿ ಪೋದ || ದಾರ ||೫||

## ೩೪೭ ರಾಗ ಪೂರ್ವಿ ಅಟತಾಳ

ಏನು ಗತಿಯೋ ಎನಗೆ | ಎಲೈ ಹರಿ || ಪ || ನಾ ನಿನ್ನ ನೆನೆಯದೆ ಮೋಸಹೋದೆನಲ್ಲೊ || ಅ || ಅಂಕದಲಾಡುವ ಶಿಶುವಿನ ಮುದ್ದಾದ | ಇಂಪಿನ ನುಡಿಗಳ ಕೇಳುತಲಿ| ಕಿಂಕಿಣಿಧ್ವನಿಯಿಂದ ಕಿವಿಗೊಟ್ಟು ಕೇಳುವ| ಮಂಕಾದ ಹರಿಣನಂತಾದೆನಲ್ಲೊ ಹರಿ || ೧ || ತೊಡೆ ಕುಚ ಗುಹ್ಯ ಸೌಂದರ್ಯ ಕೊಂಡಾಡುತ| ಮಡದಿಯ ಅಂಗಸಂಗವ ಮಾಡುತ|| ಒಡಲ ಕಿಚ್ಚಿಗೆ ಪೋಗಿ ಬಡಿಗಲ್ಲು ಕೆಡಹಿಕೊಂ| ಡಡಗಿದ ಮೂಷಕನಂತಾದೆನಲ್ಲೊ ಹರಿ ||೨|| ಪರವನಿತೆಯರ ಲಾವಣ್ಯ ಲೋಚನದಿ ಗೋ| ಚರಿಸಲು ಅವಳ ಕೂಟಕೆ ಬೆರೆತು || ಉರಿವ ಕಿಚ್ಚನು ಹಿತವೆಂದು ಬಂದದರೊಳು | ಎರಗಿದ ಪತಂಗದಂತಾದೆನಲ್ಲೊ ಹರಿ ||೩|| ಸಲೆ ನಿಜವೃತ್ತಿಯ ಜರೆದು ಪರಾನ್ನವ| ನಲಿದುಂಡು ಹೊಟ್ಟೆಯ ಹೊರೆಯುತಲಿ || ಬಲೆಯ ತುದಿಯಲ್ಲಿದ್ದ ಮಾಂಸಕೆ ಮೋಹದಿ| ಸಿಲುಕಿದ ಮೀನಿನಂತಾದೆನಲ್ಲೊ ಹರಿ||೪|| ಲಂಪಟ

ನಾಗಿ ನಾರಿಯರ ಮುಖಾಬ್ಜದ । ಇಂಪನು ಕಣ್ಣಿಂದ ನಾ ನೋಡುತ ॥ ಸಂಪಿಗೆ ಅರಳಿನ ಮೇಲಿರಗಿದುಪಂಥ । ಸಂಪಾಳಿ ಅಳಿಗಳಂತಾದೆನಲ್ಲೊ ಹರಿ ॥೫॥ ಇಂತು ಪಂಚೇಂದ್ರಿಯಂಗಳು ಒಳಹೊರಗೆ। ಸಂತತ ಎನ್ನನು ಎಳೆಯುತಿರೆ ॥ ಸಂತೈಸಲಾಗದೆ ಸ್ಮರನವರೊಶವಾದ। ಕಾಂತೆಯಪರ ಸನಾದೆನಲ್ಲೊ ಹರಿ ॥ ೬ ॥ ಮಂದನು ನಾನು ಮದನನ ಗೆಲಿದು ಪಂಚ । ಇಂದ್ರಿಯಂಗಳ ನಾನು ಜಯಿಸಲಾರೆ ॥ ತಂದೆ ಪುರಂದರವಿಠಲ ನೀನೊಲಿ ದಡೆ । ಹಿಂದಿನಾ ಭವಬಂಧ ಜಾರವಲ್ಲೋ ಹರಿ ॥೭॥

## ೩೪೮ ರಾಗ ರೇಗುಪ್ತಿ ಆದಿತಾಳ

ಬುತ್ತಿಯು ಕಟ್ಟೋ ಮನುಜ। ಬುತ್ತಿಯು ಕಟ್ಟೋ ॥ ಬುತ್ತಿಯನ್ನು ಕಟ್ಟಿದರೆ । ಎತ್ತಲಾದರು ಉಣಬಹುದು ॥ ಪ ॥ ಧರ್ಮವೆಂಬ ಮಡಿಕೆ ಯಲ್ಲಿ। ನಿರ್ಮಲಮನ ಗಂಗೆ ತುಂಬಿ ॥ ಸುಮ್ಮಾನದುರಿಯ ಹಚ್ಚಿ। ಒಮ್ಮಾನಕ್ಕನ್ನ ಬಾಗಿ ॥ ೧ ॥ ಅರಿವು ಎಂಬ ಅರಿವೆ ಹಾಸಿ। ಹರಿವಿಹಾಲ ಮೊಸರ ತಳಿದು ॥ ಪರಮ ವೈರಾಗ್ಯದಿಂದಲೆ ಶ್ರೀ । ಹರಿಗೆ ಅರ್ಪಿತವೆಂದು॥ ಕರ್ತು ಪುರಂದರವಿಠಲನ। ತತ್ತ್ವವೆಂಬ ಬುತ್ತಿಯನ್ನು॥ ಹತ್ತಿರ ತಂದಿಟ್ಟು ಕೊಂಡು ॥ ನಿತ್ಯ ಉಂಡು ತೃಪ್ತಿಪಡಿರೊ ॥೩॥

## ೩೪೯ ರಾಗ ಸೌರಾಷ್ಟ್ರ ಅಟತಾಳ

ಸಕಲ ದುರಿತಗಳ ಪರಿಹಾರ ಮಾಡಿದ್ಯೊ ವೇಂಕಟೇಶ ॥ ಪ ॥ ಭಕುತಿ ಗೊಲಿದು ಬಂದು ಭಕ್ತರ ಕಾಯ್ದಿಯೊ ವೇಂಕಟೇಶ ॥ ಅ ॥ ಮತ್ಸ್ಯಾವ ತಾರದಿ ನಾಲ್ಕು ವೇದವ ತಂದ್ಯೊ ವೇಂಕಟೇಶ । ಪೃಥ್ವೀಧರವ ಪೊತ್ತು ಭೃತ್ಯರ ನೀ ಕಾಯ್ದ್ಯೊ ವೇಂಕಟೇಶ ॥೧॥ ಧರೆಯನೊಯ್ದನ ಕೋರೆದಾಡೆ ಯಿಂದಲಿ ಕೊಂದ್ಯೊ ವೇಂಕಟೇಶ । ತರಳಗೊಲಿದು ನೀ ಕಂಭದಿಂದಲಿ ಬಂದ್ಯೊ ವೇಂಕಟೇಶ॥೨॥ ಭೂಮಿದಾನವ ನೀಡಿದವನ ಬಾಗಿಲ ಕಾಯ್ದ್ಯೊ ಶ್ರೀ ವೇಂಕಟೇಶ। ಭೂಮಿಪಾಲರನಳಿದು ಭಾರ್ಗವನೆನಿಸಿದ್ಯೊ ವೇಂಕಟೇಶ ॥೩॥ ದಶಶಿರನನು ಕುಟ್ಟಿ ಶಶಿಮುಖಿಯಳ ತಂದ್ಯೊ ವೇಂಕಟೇಶ । ಅಸು

ರೆಯ ಸಂಹರಿಸಿ ಕಂಸನ ಮಡುಹಿದ್ಯೊ ವೇಂಕಟೇಶ ॥ ೪ ॥ ಅಧೆಮ ಜನರಿಗೆ ಬೋಧಿಸಿ ಬತ್ತಲೆ ನಿಂತ್ಯೊ ವೇಂಕಟೇಶ। ಕುದುರೆಯೇರಿ ಕಲ್ಕಿರೂಪವ ತಾಳ್ದ್ಯೊ ವೇಂಕಟೇಶ ॥೫॥ ಹರಿದಾಸರ ಮೇಲೆ ಒಲಿದು ಬೇಗದಿ ಬಂದ್ಯೊ ವೇಂಕಟೇಶ । ವರದ ಪುರಂದರವಿಠಲ ನಮೋ ನಮೋ ವೇಂಕಟೇಶ ॥ ೬ ॥

## ೩೫೦ ರಾಗ ಶಂಕರಾಭರಣ ಅಟತಾಳ

ರಕ್ಷಿಸು ಲೋಕನಾಯಕನೆ। ನೀ ರಕ್ಷಿಸು ॥ ಪ ॥ ಎಷ್ಟೆಷ್ಟು ಜನ್ಮವ ಕಳೆದೆನೊ।ಇ ನ್ನೆಷ್ಟೆಷ್ಟು ಜನ್ಮವ ಕಳೆವೆನೊ ॥ ಕಷ್ಟವ ಪಡಲಾರೆ ಕೃಷ್ಣ ಕೃಪೆಯಿಟ್ಟು। ಇಷ್ಟವ ಪಾಲಿಸೊ ಇಭರಾಜವರದನೆ ॥ ೧ ॥ ಬಾಲತನದಿ ಬಹು ಬೆಂದೆನೊ। ನಾನಾ। ಲೀಲೆಯಿಂದಲಿ ಕಾಲ ಕಳೆದೆನೊ ॥ ಲೋಲಲೋಚನ ಎನ್ನ ಮೊರೆ ಕೇಳುತ ಬೇಗ। ಜಾಲವ ಮಾಡದೆ ಪಾಲಿಸೊ ನರಹರಿ ॥ ೨ ॥ ಮುದುಕನಾಗಿ ಚಿಂತೆಪಡುವೆನು । ನಾ । ಕದಡು ದುಃಖ ಪಡಲಾರೆನೊ ॥ ಉದಧಿಶಯನ ಶ್ರೀಪುರಂದರವಿಟ್ಠಲ । ಮುದದಿಂದ ರಕ್ಷಿಸೊ ಖಗರಾಜಗಮನ ॥ ೩ ॥

## ೩೫೧ ರಾಗ ಪೂರ್ವಿ ಅಟತಾಳ

ಮರೆಯದಿರೆಲೆ ಮನವಿಲ್ಲಿ। ಯಮ। ಪುರಿಗೆ ಒಯ್ದು ಬಾಧಿಸುತ್ತಿಹರಲ್ಲಿ॥ ॥ಪ॥ ಪರನಾರಿಯರ ಸಂಗವಿಲ್ಲಿ। ಉಕ್ಕು। ಎರದು ಸತಿಯರು ತಕ್ಕೈಸುವರಲ್ಲಿ॥ ಗುರುಹಿರಿಯರ ನಿಂದೆಯಿಲ್ಲಿ। ಬಾಯೊ। ಳೆರೆದು ಸೀಸವ ಕಾಸಿ ಹೊಯಿಸುವರಲ್ಲಿ ॥೧॥ ಉಂಡ ಮನೆಯ ಕೊಂಬುದಿಲ್ಲಿ। ಎದೆ। ಗುಂಡಿಗೆಯನು ಸೀಳಿ ಕೊಲುತಿಹರಲ್ಲಿ ॥ ಗಂಡನ ದಣಿಸುವುದಿಲ್ಲಿ। ಯಮ। ಕುಂಡದೊಳಗೆ ಹಾಕಿ ಕುದಿಸುವರಲ್ಲಿ ॥ ೨॥ ಚಾಡಿಗಳ್ಹೇಳುವುದಿಲ್ಲಿ। ನುಡಿ। ದಾಡುವ ನಾಲಿಗೆ ಕೀಳುವರಲ್ಲಿ ॥ ಬೇಡಿದರಿಗೆ ಧರ್ಮಕ್ಕಿಲ್ಲಿ। ಇದ್ದು। ನೀಡದಿರಲು ನರಕಕೆ ನೂಕ್ವರಲ್ಲಿ ॥ ೩ ॥ ಪುಸಿ ತಕ್ಕುತವುಳಿಗಳಿಲ್ಲಿ। ಕಟ್ಟಿ। ಎಸೆದು ಕೊಲ್ಲುವರೊ ನಿನ್ನವರು ಕೇಳಲ್ಲಿ ॥ ಅಶತ ಪ್ರಭೇದಗಳಿಲ್ಲಿ। ಮಾಡೆ।

ಬಿಸಿಯ ಕೆಂಡವ ತಂದು ತಿನಿಸುವರಲ್ಲಿ ॥ ೪ ॥ ಸಿರಿಮುಡಿಯೊಳಗಿಹುದಿಲ್ಲಿ । ಸೊಕ್ಕು ಮುರಿದು ನಿನ್ನ ಹಲ್ಲ ಕಳಚುವರಲ್ಲಿ ॥ ಪುರಂದರವಿಠಲನ ಇಲ್ಲಿ । ಬೆರೆಯೆ । ಸ್ಥಿರವಾದ ಮುಕ್ತಿ ಪಡಕೊಂಬುವರಲ್ಲಿ ॥ ೫ ॥

### ೩೫೨ ರಾಗ ಕೇದಾರಗೌಳ ಅಟತಾಳ

ಏನು ಬಂದ್ಯೋ ಜೀವವೇ ವ್ಯರ್ಥವಾಗಿ । ಜ್ಞಾನದಿಂದಲಿ ತಿಳಿದು ಪರ ಗತಿಯನು ಕೂಡು ॥ಪ॥ ದಾನವ ಮಾಡಲಿಲ್ಲ ಧರ್ಮವ ಮಾಡಲಿಲ್ಲ । ದೀನ ನುಡಿಗಳಿಲ್ಲ ದಾಕ್ಷಿಣ್ಯವಿಲ್ಲ ॥ ಜ್ಞಾನಿ ದಾಸಜನರಾ ಸಂಗದೊಳಿರಲಿಲ್ಲ । ಮನ ನಿರ್ಮಲದಿ ಕ್ಷಣವು ಇರಲಿಲ್ಲ ॥ ೧ ॥ ಸತಿಪುರುಷರಾಗಿ ಸಂತೋಷ ದಿಂದಿರಲಿಲ್ಲ । ಯತಿಯಾಗಿ ತೀರ್ಥಯಾತ್ರೆಯ ಮಾಡಲಿಲ್ಲ ॥ ಶ್ರುತಿಪುರಾಣ ಗಳನ್ನು ಕಿವಿಗೊಟ್ಟು ಕೇಳಲಿಲ್ಲ । ಮೃತಿಕಾಲ ಬಂದು ದಿನ ವ್ಯರ್ಥ ಹೋಯ್ತಲ್ಲ ॥ ೨ ॥ ಉಂಡುಟ್ಟು ಸುಖವಿಲ್ಲ ಕಾಯ ಪರಿಣಾಮವಿಲ್ಲ । ಕೊಂಡು ಕೊಟ್ಟು ಪರಸೇವೆ ಬಿಡಲಿಲ್ಲ ॥ ದಂಮಗ ಸಂಸಾರ ಮಾಯಾ ಪಾಶಕೊಳಗಾದೆ । ತಂದೆ ಶ್ರೀಪುರಂದರವಿಠಲನ ನೆನೆ ಕಂಡ್ಯ ।೩॥

### ೩೫೩ ರಾಗ ಪಂತುವರಾಳಿ ಅಟತಾಳ

ಕೂಸು ಕಂಡೆವಮ್ಮ । ಅಮ್ಮ ನಿಮ್ಮ । ಕೂಸು ಕಂಡೆವಮ್ಮ ॥ ಪ ॥ ಕಾಸಿಗೆ ವೀಸವ ಬಡ್ಡಿ ಗಳಿಸಿಕೊಂಡು । ಶೇಷಗಿರಿಯಮೇಲೆ ವಾಸವಾಗಿ ದ್ದನೆ ॥೧॥ ವಂಚಿಸಿ ಬಲಿಯೊಳ್ ಪ್ರಪಂಚವೆಲ್ಲ ಸೆಳೆದು । ಕಂಚಿಪಟ್ಟಣದಿ ಬಲ್ ಮಿಂಚಾಗಿದ್ದನೆ ॥ ೨ ॥ ಗುಡ್ಡ ಬೆರಳೊಳೆತ್ತಿ ದೊಡ್ಡ ಗೋವ್ಗಳ ಕಾಯ್ದು । ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ ॥೩॥ ದುಡುಕು ಮಾಡಿ ಹಾಲು ಮಡಕೆಗಳ ಒಡೆದು । ಹಡಗನೇರಿ ಬಂದು ಉಡುಪಿಲಿ ಇದ್ದನೆ॥೪॥ ಮಂಗಳ ರೇಖೆ ಪಾದಂಗಳುಳ್ಳ ನಿಮ್ಮ । ರಂಗ ಪುರಂದರವಿಠಲ ಶ್ರೀಕೃಷ್ಣನೆ ॥೫॥

### ೩೫೪ ರಾಗ ಪೂರ್ವಿ ಆದಿತಾಳ

ನೆಚ್ಚನಯ್ಯ ಹರಿ ಮೆಚ್ಚನಯ್ಯ ॥ ಪ ॥ ಉತ್ತಮನೆಂದೆನಿಸಿಕೊಂಡು ಅರುಣೋದಯದ ಕಾಲದಲ್ಲಿ । ನಿತ್ಯ ಕಾಗೆಯ ಹಾಗೆ ನೀರೊಳಗೆ ಮುಳು

ಗುವವನಿಗೆ||೧|| ತೊಗಲಿನ ದೇಹಕೆ ಗೋಪಿ ಗಂಧ ತೇದುಕೊಂಡು | ರೋಗ ಬಂದೆಮ್ಮೆಯ ಹಾಗೆ ಬರೆದುಕೊಂಬ ಮನುಜನಿಗೆ || ೨ || ಮರುಳುತನವು ಮಾತಿನಲ್ಲಿ ಹೃದಯದಲ್ಲಿ ವಿಷದ ಗುಟಿಕೆ | ಮರದ ಮೇಲಣ ಓತಿಯಂತೆ ನಮಿಸುವಂಥ ಮರುಳನಿಗೆ || ೩ || ಹಣವಿಗೆ ಹಾರೈಸಿಕೊಂಡು ತಿರುಪತಿ ಗ್ಹೋಹರ ಕಂಡು | ಹಣ ಕಾಸು ಕೊಂಡು ಬಂದು ಸ್ವಾಮಿಯ ನೋಡು ವವಗೆ ||೪|| ಬಾಯ ಬೀಗದಲ್ಲಿ ಹೊಯ್ದು ಹಾಲು ತುಪ್ಪಗಳನು ಸವಿದು | ಮೈಯ ಹುಳುತ ನಾಯಿಯಂತೆ ಬೀದಿ ಬೀದಿ ತಿರುಗುವವಗೆ ||೫|| ತಾನು ತನ್ನ ಮನೆಯ ಒಳಗೆ ದಾನಧರ್ಮಗಳನು ಕೊಡದೆ | ನೀನು ದಾನ ಮಾಡು ಎಂದು ಅನ್ಯರಿಗೆ ಹೇಳುವವಗೆ || ೬ || ಏಕೋಭಾವ ಏಕೋಭಕ್ತಿ ಏಕೋಯುಕ್ತಿ ಏಕೋಮುಕ್ತಿ | ಬೇಕಾಗಿ ಪುರಂದರವಿಠಲನ್ನ ಭಜಿಸ ದವಗೆ || ೭ ||

### ೩೫೫ ರಾಗ ಸೌರಾಷ್ಟ್ರ ಅಟತಾಳ

ನಿನ್ನ ಮಗನು ಮುದ್ದು ನಿನಗಾದರೆ ಗೋಪಿ ಯಾರಿಗೇನೆ | ಅಮ್ಮ | ಎನ್ನ ಕೂಡೆ ತಾ ಸರಸವಾಡುತಾನೆ ಸಾರು ನೀನೆ ||ಪ|| ಹೆಚ್ಚಿನ ಸತಿಯರ ಕಚ್ಚೆಯ ಬಿಚ್ಚುವ ಹುಚ್ಚನೇನೆ | ಅಮ್ಮ | ಇಚ್ಛೆಯರಿತು ನಮ್ಮ ಗಲ್ಲವ ಕಚ್ಚುವ ನಲ್ಲನೇನೆ || ೧ || ಚೆಂಡೆಂದು ಹೆಂಗಳ ಕುಚಗಳ ಪಿಡಿವರೆ ಗಂಡ ನೇನೆ ಅಮ್ಮ | ಕಂಡಲ್ಲಿ ಉದ್ದಂಡತನವ ಮಾಡುತಾನೆ ಪುಂಡನೇನೆ || ೨ || ಹೊಸ ಕೂಟವರಿತು ಹಾಸಿಗೆಯನು ಹಾಕುವ ಶಿಶುವು ಏನೆ | ಅಮ್ಮ | ಅಸಹಾಯ ಶೂರ ಶ್ರೀಪುರಂದರವಿಠ್ಠಲರಾಯ ಕಾಣೆ || ೩ ||

### ೩೫೬ ರಾಗ ಶಂಕರಾಭರಣ ಅಟತಾಳ

ಮನವೆನ್ನ ಮಾತ ಕೇಳದು ಮಂದ ಜ್ಞಾನದಿ | ತನುವಿನಾಸೆಯ ಬಿಡ ಲೊಲ್ಲದು || ಪ || ದೇಹಸಂಬಂಧಿಗಳಾದವರ್ಯವರು | ಮೋಹಪಾಶದಿ ಕಟ್ಟಿ ಬಿಗಿದಿಹರೈ || ದೇಹವನಿತ್ಯವೆಂಬುವ ಗುರುತರಿಯದೆ | ಮಾಯ ಪ್ರಪಂಚ ವೆಂಬುದು ಬದ್ಧವಾಗಿದೆ ||೧|| ಸಾಧು ಸಜ್ಜನರ ಸಂಗವ ಮಾಡಿ ಪರಗತಿ | ಗಾಧಾರವನು ಮಾಡಲೊಲ್ಲದಯ್ಯ || ಕ್ರೋಧ ಕುಹಕ ದುಷ್ಟರೊಡನಾಡಿ

ಕಾಲನ । ಬಾಧೆಗೆ ಗುರಿಯ ಮಾಡುತಲಿದೆ ಹರಿಯೆ॥೨॥ ಮದಗಜ ವೈರಿಯ ಮರೆತು ಮುಂದುಗಾಣದೆ। ಕಮವಿನ್ನೊಳಗೆ ಬಿದ್ದಂತಾಯಿತಯ್ಯ॥ ಹೃದಯ ಕಮಲವಲ್ಲಿ ನಿಂತು ರಕ್ಷಿಸೊ ಎನ್ನ । ಪದುಮಾಕ್ಷವರದ ಶ್ರೀಪುರಂದರ ವಿಠಲ ॥

## ೩೫೭ ರಾಗ ಸೌರಾಷ್ಟ್ರ ಅಟತಾಳ

ಹತ್ತಿಗಿಡದ ಕೊನೆ ಹಗೆಯಾಗಿ ಬಡಿದ ಮೇ । ಲಿನ್ನೇನಿನ್ನೇನು ॥ ಸ ॥ ಮಸ್ತರು ಹಗೆಯಾಗಿ ಸಾಧಿಸಿದ ಮೇ । ಲಿನ್ನೇನಿನ್ನೇನು॥ಪ॥ ಗಂಡುಮಕ್ಕ ಳೆಂಬೋರು ಪುಂಡರಾದ ಮೇ । ಲಿನ್ನೇನಿನ್ನೇನು ॥ ಭಂಡು ಸಂಸಾರವು ಬಯಲಿಗೆ ಬಿದ್ದ ಮೇ । ಲಿನ್ನೇನಿನ್ನೇನು ॥ ೧ ॥ ನಗುವರ ಮುಂದಿಷ್ಟು ತಗಲಿ ಬಿದ್ದ ಮೇ । ಲಿನ್ನೇನಿನ್ನೇನು ॥ ನಗುವರಿಗೆ ನಾಲ್ಕು ನಾಲಿಗೆಯಾದ ಮೇ । ಲಿನ್ನೇ ನಿನ್ನೇನು ॥ ೨ ॥ ಮಾಡಿದ ಗಣಪತಿ ಮಂಗನಾದ ಮೇ । ಲಿನ್ನೇನಿನ್ನೇನು॥ ನೀಡಿದ ಮಕ್ಕಳು ಬಿಡದೆ ಕಚ್ಚಿದ ಮೇ । ಲಿನ್ನೇನಿನ್ನೇನು ॥೩॥ ಬಾವಿ ತೋಡಿದರೆ ಬೇತಾಳ ಹೊರಟ ಮೇ। ಲಿನ್ನೇನಿನ್ನೇನು ॥ ಕಾವ ಬೇಲಿ ಎದ್ದು ಹೊಲವ ಮೆದ್ದ ಮೇ । ಲಿನ್ನೇನಿನ್ನೇನು ॥ ೪ ॥ ಹಾರೈಸಿ ದೆಲ್ಲವು ಹಳವಂಡವಾದ ಮೇ। ಲಿನ್ನೇನಿನ್ನೇನು ॥ ಆಲೈಸಿ ಕೇಳಯ್ಯ ಪುರಂದರವಿಠ್ಠಲ । ಇನ್ನೇನಿನ್ನೇನು ॥೫॥

## ೩೫೮ ರಾಗ ಮುಖ್ಯವಾವತಿ ಅಟತಾಳ

ರಾಮ ರಾಮೆನ್ನಿರೊ । ಇಂಥಾ । ಸ್ವಾಮಿಯ ನಾಮವ ಮರೆಯ ದಿರೊ ॥ ಪ ॥ ತುಂಬಿದ ಪಟ್ಟಣಕೊಂಭತ್ತು ಬಾಗಿಲು । ಸಂಭ್ರಮದರಸು ಗಳೈದು ಮಂದಿ ॥ ಡಂಭಕತನದಿಂದ ಕಾಯುವ ಜೀವವ । ನಂಬಿ ನೆಚ್ಚಿ ನೀವು ಕೆಡಬೇಡಿರೊ ॥ ೧ ॥ ನೆಲೆ ಇಲ್ಲದ ಕಾಯ ಎಲುವಿನ ಹಂದರ । ಬಲಿದು ಸುತ್ತಿದ ಚರ್ಮದ ಹೊದಿಕೆ ॥ ಮಲಮೂತ್ರಂಗಳು ಕೀವು ಕ್ರಿಮಿ ಗಳುಳ್ಳ । ಹೊಲಸು ತೊಗಲ ಮೆಚ್ಚಿ ಕೆಡಬೇಡಿರೊ ॥೨॥ ಹರ ಬ್ರಹ್ಮ ಸುರ ರಿಗೆ ವಂದ್ಯನು ಆಗಿಪ್ಪ । ಹರಿ ಸರ್ವೋತ್ತಮನೆಂದೆನ್ನಿರೊ ॥ ಪುರಂದರ ವಿಠಲನ ಚರಣವ ಭಜಿಸಿರೊ । ದುರಿತಭಯಗಳಿಂದ ದೂರಾಗಿರೊ ॥೩॥

## ೩೫೯ ರಾಗ ಕಾಂಭೋಜಿ ಅಟತಾಳ

ಎಂದೆಂದು ನಿನ್ನ ಪಾದವೆ ಗತಿಯೆನಗೆ ಗೋ । ವಿಂದ ಬಾರಯ್ಯ ಎನ್ನ ಹೃದಯಮಂದಿರಕೆ ॥ಪ॥ ಮೊದಲಿಂದ ಬರಬಾರದೆ ನಾ ಬಂದೆ। ಇದರಿಂದ ಗೆದ್ದು ಪೋಗುವುದು ಕಾಣೆ ಮುಂದೆ ॥ ತುದಿ ಮೊದಲಿಲ್ಲದೆ ಪರರಿಂದ ನೊಂದೆ । ಪದುಮನಾಭನೆ ತಪ್ಪು ಕ್ಷಮೆ ಮಾಡೊ ತಂದೆ ॥ ೧ ॥ ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು । ಪುಣ್ಯಪಾಪವನು ನಾ ತಿಳಿಯದೆ ಇದ್ದು॥ ಅನ್ಯಾಯವಾಯಿತು ಇದಕೇನು ಮದ್ದು। ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು ॥ ೨ ॥ ಹಿಂದೆ ನಾ ಮಾಡಿದ ಪಾಪವ ಕಳೆಯೊ । ಮುಂದೆನ್ನ ಜನ್ಮ ಸಫಲ ಮಾಡಿ ಪೊರೆಯೊ ॥ ತಂದೆ ಶ್ರೀಪುರಂದರವಿಠಲನ್ನ ನೆನೆಯೊ। ಎಂದೆಂದಿಗಾನಂದ ಸುಖವನ್ನೆ ಪಡೆಯೊ ॥ ೩ ॥

## ೩೬೦ ರಾಗ ಅರಬಿ ಅಟತಾಳ

ಹರಿದಾಸರ ಸಂಗ ದೊರಕಿತು ಎನಗೀಗ । ಇನ್ನೇನಿನ್ನೇನು ॥ ವರಗುರು ಉಪದೇಶ ನೆರವಾಯ್ತು ಎನಗೆ । ಇನ್ನೇನಿನ್ನೇನು॥ ಮಾಯದ ಸಂಸಾರ ಮಮಕಾರ ತಗ್ಗಿತು । ಇನ್ನೇನಿನ್ನೇನು ॥ ತೋಯಜಾಕ್ಷನ ನಾಮ ।ಜಿಹ್ವೆಯೊಳ್ ನೆಲಿಸಿತು । ಇನ್ನೇನಿನ್ನೇನು ॥೧॥ ಹಲವು ದೈವಗಳೆಂಬ ಹಂಬಲು ಬಿಟ್ಟಿತು । ಇನ್ನೇನಿನ್ನೇನು ॥ ಜಲಜನಾಭನ ಧ್ಯಾನ ಹೃದಯದೊಳ್ ದೊರಕಿತು । ಇನ್ನೇನಿನ್ನೇನು ॥ ೨ ॥ ತಂದೆತಾಯಿ ಮುಚುಕುಂದವರದ ನಾದ। ಇನ್ನೇನಿನ್ನೇನು ॥ ಸಂದೇಹವಿಲ್ಲ ಮುಕುಂದ ದಯಮಾಡ್ದ । ಇನ್ನೇನಿನ್ನೇನು ॥ ೩ ॥ ಏನೆಂದು ಹೇಳಲಿ ಆನಂದ ಸಂಭ್ರಮ । ಇನ್ನೇನಿನ್ನೇನು ॥ ಆ ನಂದಗೋಪನ ಕಂದನ ಮಹಿಮೆಯು । ಇನ್ನೇನಿನ್ನೇನು। ॥ ೪ ॥ ಎನ್ನ ವಂಶಗಳೆಲ್ಲ ಪಾವನವಾದವು। ಇನ್ನೇನಿನ್ನೇನು ॥ ಚಿನ್ಮಯ ಪುರಂದರವಿಠಲಯ್ಯ ದೊರಕಿದ । ಇನ್ನೇನಿನ್ನೇನು ॥ ೫ ॥

## ೩೬೧ ರಾಗ ಸೌರಾಷ್ಟ್ರ ಅಟತಾಳ

ಎರವಿನ ಸಿರಿಗೆ ಬಿಮ್ಮನೆ ಬೆರೆತರೆ ನೀರ । ಕಡೆದರುಂಟೆ ಬೆಣ್ಣೆ ಜೀವವೆ॥ ಉರಗನ ಹೆಡೆಯ ನೆಳಲ ಸೇರಿದ ಕಪ್ಪೆ । ಸ್ಥಿರಕಾಲ ಬಾಳ್ವುದೆ ಜೀವವೆ ॥

|| ಪ || ಸತಿಸುತರೆಂಬು ನೆಚ್ಚಲುಬೇಡ ಮನದೊಳು । ಹಿತವರೊಬ್ಬರ ಕಾಣೆ ಜೀವವೆ || ವೃಥಾ ನೀನು ಕೆಡಬೇಡ ಮರಣವು ತಪ್ಪದು । ದಶಕಂಠ ಗಾದರು ಜೀವವೆ ||೧|| ಆಸೆ ಮಾಡಲು ಬೇಡ ಭಾಷೆ ತಪ್ಪಲು ಬೇಡನ್ಯ । ಸ್ತ್ರೀಸಂಗವು ಬೇಡ ಜೀವವೆ || ಏಸೇಸು ಜನ್ಮಾಂತರ ಕಳೆದುಳಿದರು । ಈ ಸಾವು ತಪ್ಪದು ಜೀವವೆ || ೨ || ಆನೆ ಕುದುರೆ ಮಂದಿ ಶಾನೆ ಭಂಡಾರವು । ಏನು ಪಡೆದರಿಲ್ಲ ಜೀವವೆ || ಮಾನ ಸಹ ಸರ್ವ ಹರಿಗೆ ಅರ್ಪಣ ಮಾಡಿ । ಪುನೀತನಾಗುನೀ ಜೀವವೆ || ೩ || ಕೆರೆಯು ಕಟ್ಟಿಸು ಮತ್ತೆ ಪ್ರೊದೋಟ ಹಾಕಿಸು । ಸೆರೆಯು ಬಿಡಿಸು ಪುಣ್ಯ ಜೀವವೆ || ಕರೆಯದೆ ಮನೆಗೆ ಬಂದ ವರಿಗನ್ನವ ನೀಡು । ಪರಲೋಕ ಸಾಧನ ಜೀವವೆ || ||೪|| ಸತ್ಯವಂತರ ಸಂಗದೊಳಗೆ ಚರಿಸೆ ಮೃತ್ಯು । ಅತ್ತತ್ತಲಿರುವಳು ಜೀವವೆ || ಸತ್ಯವಂತ ಗುರು ಪುರಂದರವಿಠಲೆನ್ನೆ । ಸತ್ತು ಹುಟ್ಟುವುದಿಲ್ಲ ಜೀವವೆ ||೫||

## ೩೬೨ ರಾಗ ಅರಬಿ ಅಟತಾಳ

ಪಾಪಿಗಳೊಳಗೆಲ್ಲ ನಾನು ವೆಗ್ಗಳನೆಂದು ತಿಳಿಯಲಿಲ್ಲ ।ದಯಾ । ರೂಪ ಕೃಪಾಂಬುಧಿ ನೀನಲ್ಲದಿಲ್ಲವೆಂದರಿಯಲಿಲ್ಲ || ಪ || ಕಾಲ್ಗಳಿಂದಲಿ ತೀರ್ಥ ಯಾತ್ರೆಯ ನಾನೆಂತೂ ಮಾಡಲಿಲ್ಲ । ಹರಿ । ಪಾಲ್ಗಡಲಶಾಯಿ ನಿನ್ನ ದಿವ್ಯ ಕಥೆಯನ್ನು ಕೇಳಲಿಲ್ಲ || ಕೂಳ್ಗಳಾಶೆಯಿಂದ ನಿನ್ನ ನೈವೇದ್ಯವನುಣ್ಣಲಿಲ್ಲ। ಇಂಥ । ಸಾಲ್ಗಳ ಪಾಪದಿಂ ಎನ್ನ ಪಾಲಿಪ ಸ್ವಾಮಿ ನೀನೆಯಲ್ಲ || ೧ || ಕಣ್ಣುಗಳಿಂದ ನಿನ್ನಯ ದಿವ್ಯ ಮೂರ್ತಿಯ ನೋಡಲಿಲ್ಲ । ಶ್ರುತಿ। ಸನ್ನುತ ಮಹಿಮೆಯ ಅನುದಿನ ನಾನು ಕೊಂಡಾಡಲಿಲ್ಲ || ಹೆಣ್ಣು ಹೊನ್ನು ಮೆಚ್ಚಿ ನಿನ್ನ ದಾಸರ ದಾಸ್ಯ ಮಾಡಲಿಲ್ಲ । ಮುನಿ । ಸನ್ನುತ ವರಪಾದಪದ್ಮ ಯುಗಂಗಳ ಸ್ಮರಿಸಲಿಲ್ಲ || ೨ || ಕರದಿಂದ ನಿನ್ನ ಸುಮೂರ್ತಿಪೂಜೆಯನು ಮಾಡಲಿಲ್ಲ । ಇಹ । ಪರ ಎರಡನು ಬಿಟ್ಟು ವಿಷಯದೊಳನುದಿನ ಬಾಳ್ದೆ ನಲ್ಲ || ಗುರುಹಿರಿಯರ ಮಾತು ಕೇಳದೆ ನಾ ಬಲು ಕೆಟ್ಟೆನಲ್ಲ । ಹರಿ । ಪರಮಪುರುಷ ನೀನಲ್ಲದೆ ಜಗದೊಳು ಕಾವರಿಲ್ಲ ||೩|| ಹೊಟ್ಟೆಯಾಸೆಗಾಗಿ ದುಷ್ಟರ ಸೇವೆಗೆ ನಿಂತೆನಲ್ಲ । ಯಮ । ಕುಟ್ಟಿ ಕೊಲ್ಲದ್ಹಾಂಗೆ ನೀನೆ ರಕ್ಷಿಸ।

ಬೇಕು ಸಿರಿಯನಲ್ಲ ॥ ಅಷ್ಟೂ ತತ್ತ್ವೇಶರ ಸ್ವಾಮಿ ನೀನಲ್ಲದೆ ಬೇರೆ ಇಲ್ಲ ಇನ್ನು । ದುಷ್ಟಕೃತ್ಯಕೆ ಮನವೆರಗದಂದದಿ ಮಾಡು ಶ್ರೀಗೋಪಾಲ ॥ ೪ ॥ ಜಗದೊಳಗೆನ್ನಂಥಾ ಪಾಪಿಗಳಿನ್ನ್ಯಾರು ಇಲ್ಲವಲ್ಲ। ಹರಿ। ಸುಗುಣಪೂರ್ಣ ನಿನ್ನಂಥ ಕೃಪಾಂಬುಧಿ ಜಗದೊಳಿಲ್ಲ ॥ ನಿಗಮಗೋಚರ ನಿನ್ನ ಮಹಾಮಹಿಮೆಯ ನಾನು ತಿಳಿಯಲಿಲ್ಲ । ಈ। ಜಗದ್ಗುರುವಿನ ಗುರುವೆ ಪುರಂದರ ವಿಠಲ ನೀನಲ್ಲದಿನ್ನಿಲ್ಲ ॥ ೫ ॥

## ೩೬೩ ರಾಗ ಪಂತುವರಾಳಿ ಏಕತಾಳ

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ। ವಿಟ್ಠಲನಾಮ ತುಪ್ಪವ ಕಲಸಿ ಬಾಯಿ ಚಪ್ಪರಿಸಿರೊ ॥ಪ॥ ಒಮ್ಮನ ಗೋದಿಯ ತಂದು ವೈರಾಗ್ಯ ಕಲ್ಲಲಿ ಬೀಸಿ। ಸುಮ್ಮಾನ ಸಜ್ಜಿಗೆಯ ತೆಗೆದು ಸಣ್ಣ ಶ್ಯಾವಿಗೆಯ ಹೊಸೆದು॥ ॥೧॥ ಹೃದಯವೆಂಬೊ ಮಡಕೆಯಲ್ಲಿ ಭಾವವೆಂಬೊ ಹೆಸರನಿಟ್ಟು । ಬುದ್ಧಿಯಿಂದ ಪಾಕಮಾಡಿ ಹರಿವಾಣಕೆ ಬಡಿಸಿಕೊಂಡು ॥೨॥ ಆನಂದ ಆನಂದವೆಂಬೊ ತೇಗು ಬಂದಿತು ಕಾಣಿರೊ । ಆನಂದಮೂರುತಿ ನಮ್ಮ ಪುರಂದರ ವಿಠಲನ ನೆನೆಯಿರೊ ॥ ೩ ॥

## ೩೬೪ ರಾಗ ಸಾವೇರಿ ಅಟತಾಳ

ಮಾಧವ ಮಧುಸೂದನ ಯಾದವ ಕುಲರನ್ನ। ಬಾರೆಂದು ಕರೆದಳೆಶೋದೆ ಮುದ್ದಿಲಿ ಮಗನ ॥ ಪ ॥ ಸಂಗಡಿಗರನೆಲ್ಲ ಬಿಟ್ಟು ಬಾರಯ್ಯ ಚೆಲುವ । ಮುಂಗಯ್ಯ ಪಾಕು ಬೆರಳ್ಹೊನ್ನುಂಗುರ ॥ ಝುಂಗಿಪ ಉಡಿಗೆಜ್ಜೆ ಉಡಿದಾರವ ಕಂಡು । ಅಂಗನೆಯರು ನಿನ್ನನೊಯ್ವರೊ ॥ ನಿನ್ನಂಘ್ರಿಮೇಲಿನ್ನ ನೊಸಲನಿಡುವೆ ಕೃಷ್ಣ । ಕಂಗಳ ಸಿರಿಯೆ ಬಾರೊ ಮಗನೆ ॥೧॥ ಬಾಲಕರೊಡನಾಟ ಸಾಕು ಬಾರಯ್ಯ। ನೀಲಾಂಗ ನಿನ್ನ ಮುತ್ತಿನರಳೆಲೆ ॥ ಕೀಲುಮಾಗಾಯಿ ಹುಲಿಯುಗುರು ಕಂಡು । ಸೋಲ್ವರೊ ನಿನಗೆ ಸೊಬಗಿಯರು॥ ಶ್ರೀಲೋಲ ನೀನಾಳಿ ಕಂಸಾಸುರನ ತುಂಬಿಡೊ । ಡ್ಡೋಲಗದೊಳು ರಕ್ಕಸರು ಪಂಥವಾಡಿ ॥ ವೀಳ್ಯವ ಪಿಡಿದು ಕೊಲುವೆನೆಂದು ನಿನ್ನ। ಕಾಲಿಗೆ

ಎರಗುವೆ ಬಾರೊ ಮಗನೆ ॥ ೨ ॥ ಬೊಮ್ಮನ ಮರಿಯಿ ವಿಶ್ವವನೆಲ್ಲ ಹೃದಯದೊ । ಳೊಮ್ಮೆ ತೋರುವೆನೆಂದು ಕಂಡು ನಾ ಬಲ್ಲೆ ॥ ಎನ್ನ ಮನಕೆ ಆಹ್ಲಾದನು ಉಪಾಯ । ದಿಂದ ಭಾಗವತರ ಪಾಲಿಸುತಿಪ್ಪ ಅ ॥ ಗಮ್ಯಗೋಚರ ಶ್ರೀಪುರಂದರವಿಠಲ ತೊರೆ । ಮಮ್ಮಿಯ ಕೊಡುವೆ ಬಾರೆಲೊ ಮಗನೆ ॥೩॥

## ೩೬೫ ರಾಗ ಮಧ್ಯಮಾವತಿ ಆದಿತಾಳ

ಕಾವ ದೇವ ನೀನಲ್ಲದೆ ಜಗಕೆ ಇ । ನ್ನಾವ ದೇವರುಳ್ಳರೈ ॥ಪ॥ ದೇವರ ದೇವ ನೀನೆಂದು ನಂಬಿದ ಎನ್ನ । ಕಾಯೊ ಕನಕಾಚಲ ಕೃಷ್ಣ ಕರುಣದಿ॥ ॥ಅ॥ ತಂದೆಯ ತೊಡೆಮೇಲೆ ಬಂದು ಕುಳಿತಿದ್ದ । ಕಂದನ ಮಲತಾಯಿಯು ನೂಕಲು ॥ ಅಂದು ಶಿಶುವು ಅಡವಿಗೆ ನಡೆತರಲು । ಬಂದು ಪೊರೆದೆಯೋ ನೀ ಕರುಣದಲಿ ॥೧॥ ನಖಮುಖದಲಿ ಹಿರಣ್ಯಕನೊಡಲನು ಸೀಳಿ । ರಕುತವ ದೆಸೆದೆಸೆಗೆ ಚೆಲ್ಲಲು ॥ ಸಕಲ ಸುರರು ಕೊಂಡಾಡಲು ಜಯವೆಂದು । ಭಕುತ ಪ್ರಹ್ಲಾದನ ಪೊರೆದೆ ಕರುಣದಿ ॥ ೨ ॥ ಶಕಟ ಪೂತನಿ ಧೇನುಕ ವತ್ಸಾಸುರ । ಬಕಮುಖ್ಯರನೆಲ್ಲ ಸವರಿದೆಯೊ ॥ ಪ್ರಕಟತನದಿ ಕಂಸನ ನೆಗ್ಗೊತ್ತಿ ದೇ । ವಕಿವಸುದೇವರ ಪೊರೆದೆ ಕರುಣದಿ ॥ ೩ ॥ ಅತಿ ಚಪಲದಿ ದುಶ್ಶಾಸನ ಸಭೆಯಲಿ । ಪತಿಗಳೈವರು ಎದುರಿನೊಳಿರಲು ॥ ಖತಿಯಿಂದಲಿ ಸೆಳೆಯೆ ಸೀರೆಯ ತರಳೆ ದ್ರೌ । ಪದಿಯಭಿಮಾನವ ಪೊರೆದೆ ಕರುಣದಿ ॥೪॥ ಮರಣಕಾಲದಲಿ ಆಜಮಿಳ ಮರುಕದಿ । ತರಳ ನಾರಗನೆಂದು ಕರೆಯಲು॥ ನೆರೆದು ಪೊರೆದೆ ಕರುಣಾಳುಗಳರಸನೆ। ಗುರುಪುರಂದರವಿಟ್ಠಲ ಕರುಣದಲಿ॥

## ೩೬೬ ರಾಗ ಆರಭಿ ರೂಪಕತಾಳ

ವೇಂಕಟೇಶ ಬೇಡಿಕೊಂಬೆ ಕೃಪೆಯ ಪಾಲಿಸೊ ॥ ಪ ॥ ಬ್ರಹ್ಮ । ಶಂಕರಾದಿ ವಂದ್ಯ ಎನಗೆ ಮುಕ್ತಿ ತೋರಿಸೊ ॥ ಅ ॥ ನಷ್ಟ ಮೊದಲಾದಂಥ ಕಷ್ಟ ಬಿಡಿಸೊ । ನಿನ್ನ । ಪಟ್ಟದ ರಾಣಿಗೆ ಹೇಳಿ ಪದವಿ ಕೊಡಿಸೊ ॥ ಇಷ್ಟ ಭಕ್ತ ಜನರೊಳು ಎನ್ನ ಸೇರಿಸೊ । ಈ । ಸೃಷ್ಟಿಯೊಳು ನಿನ್ನ ದಾಸಾನು ದಾಸನೆನಿಸೊ ॥ ೧ ॥ ಉಟ್ಟು ಉಂಡು ಮಿಕ್ಕಿದ್ದೆಲ್ಲ ಎನಗೆ ಹಾಕಿಸೊ। ಪೊಂ।

ಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ ॥ ಘಟ್ಟ್ಯಾಗಿ ಸಕ್ಕರೆ ತುಪ್ಪ ರೊಟ್ಟಿ ಉಣಿಸೊ । ಮುಂದೆ । ಹುಟ್ಟಿ ಬಹ ಜನ್ಮಂಗಳ ಎನಗೆ ಬಿಡಿಸೊ ॥ ॥೨॥ ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ । ಉ । ತ್ಕೃಷ್ಟ ಬಂಗಾರ ದೊಳು ಎನ್ನ ಸೇರಿಸೊ ॥ ಬೆಟ್ಟಿಗೆ ಉಂಗುರ ಮಾಡಿ ಎನ್ನ ಧರಿಸೊ । ಸ್ವಾಮಿ । ದಿಟ್ಟ ಪುರಂದರವಿಠಲನೆ ದಯದಿ ಪಾಲಿಸೊ ॥೩॥

## ೩೬೭ ರಾಗ ಆರಭಿ ಆದಿತಾಳ

ಆಡಿದನೋ ರಂಗ ಅದ್ಭುತದಿಂದಲಿ । ಕಾಳಿಂಗನ ಫಣೆಯಲಿ ॥ ಪ ॥ ಬೇಡಿದವರಿಗೆ ಬೇಡಿದ ವರಗಳ । ನೀಡುತಲಿ ದಯಮಾಡುತಲಿ ನಲಿ । ದಾಡುತಲಿ ಬೆಣ್ಣೆ ಬೇಡುತಲಿ ಕೃಷ್ಣ ॥ ಅ ॥ ಅಂಬುರುಹೋದ್ಭವ ಅಖಿಳ ಸುರರು ಕೂಡಿ । ಅಂಬರದಲಿ ನಿಂತು ಅವರ್ ಸ್ತುತಿಸೆ । ರಂಭೆ ಊರ್ವಶಿ ರಮಣಿಯರೆಲ್ಲರು । ಚಂದದಿಂ ಭರತನಾಟ್ಯವ ನಟಿಸೆ । ಝುಂತಟ ತಕಧಿಮಿ ತಧಿಗಿಣಿ ತೋಂ ಎಂದು । ಝುಂಪೆತಾಳದಿ ತುಂಬುರನೊಪ್ಪಿಸೆ ॥ ಧಾ ಮ ಪ ಮಾ ಧ ಸ ರೀ ಎಂದು ಧ್ವನಿಯಿಂದ । ನಾರದ ತುಂಬುರಗಾನ ಮಾಡಲು । ನಂದಿಯು ಮದ್ದಲೆ ಚಂದದಿ ಹಾಕಲು ॥ ೧ ॥ ಫಣವ ಮೆಟ್ಟಿ ಬಾಲವ ಕೈಯಲ್ಲಿ ಪಿಡಿದು । ಥಳಥಳಿಸುತ್ತ ನಾಟ್ಯವನಾಡೆ । ಚಂದ್ರಮಂಡಲ ದಂತೆ ಪೊಳೆಯುವ ಮುಖದೊಳು । ಚಲಿಸುವ ನೀಲ ಕೇಶಗಳಾಡೆ । ಕಾಲ ಲಂದುಗೆ ಗೆಜ್ಜೆ ಘುಲುಘುಲುಘಲಿರೆನುತ । ಉಡಿಗೆಜ್ಜೆ ಗಂಟೆಗಳಾಡೆ ॥ ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ । ಪುಟ್ಟ ಪಾದವ ಇಟ್ಟು ಶ್ರೀಕೃಷ್ಣನು । ಮೆಟ್ಟಿದನು ತಕ ಧಿಮಿ ತಧಿಕೆನುತ ॥೨॥ ಸುರರು ಪುಷ್ಪದ ವೃಷ್ಟಿಯ ಕರೆ ಯಲು । ಸುದತಿಯರೆಲ್ಲರು ಪಾಡಲು । ನಾಗಕನ್ನಿಕೆಯರು ನಾಥನ ಬೇಡಲು । ನಾನಾ ವಿಧದಿ ಸ್ತುತಿ ಮಾಡಲು । ರಕ್ಕಸರೆಲ್ಲರು ಕಕ್ಕಸವನೆ ಕಂಡು । ದಿಕ್ಕು ದಿಕ್ಕುಗಳಿಗೆ ಓಡಲು ॥ ಚಿಕ್ಕವನಿವನಲ್ಲ ಪುರಂದರವಿಟ್ಠಲ । ವೆಂಕಟರಮಣನ ಬೇಗ ಯಶೋದೆ । ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ॥ ೪ ॥

## ೩೬೮ ರಾಗ ಪೂರ್ವಿ ಅಟತಾಳ

ಆತನ ಪಾಡುವೆ ಅನವರತ । ಪ್ರೀತಿಯಿಂದಲಿ ತನ್ನ ಭಕುತರ ಸಲ ಹುವ ॥ಪ॥ ಆವಾತನ ಕೀರ್ತಿ ಪರೀಕ್ಷಿತ ಕೇಳಿ । ಪಾವನನಾದನು ಮೂಜಗ

ವರಿಯೆ || ಭಾವಶುದ್ಧಿಯಲಿ ಶುಕನಾರ ಪೊಗಳುವ | ಆವಾಗ ಪ್ರಹ್ಲಾದ ನಾರ ನೆನೆವನಯ್ಯ || ೧ || ಶಿಲೆಯ ಬಾಲೆಯ ಮಾಡಿದ ಪಾವನಾರೆಯ | ನಳಿನಸಂಭವನ ಪಿತ್ರವನಾರು || ಕಲಿಯುಗದಿ ಜನರಿಗೆ ಯಾರ ನಾಮವೆ ಗತಿ | ಇಳೆಯು ಭಾರವನಿಳುಹಿ ಸಲಹಿದನಾರಯ್ಯ ||೨|| ಪ್ರುಕವನ ಸುತೆ ಯಭಿಮಾನರಕ್ಷಕನಾರು | ನೃಪ ಧರ್ಮಜಗೆ ರಕ್ಷಕನಾರು || ಕೃಪೆಯಿಂದ ವಿದುರನ ಮನೆಯಲುಂಡವನಾರು | ಆಪತ್ಕಾಲದಿ ಗಜನ ಸಲಹಿದ ನಾರಯ್ಯ ||೩|| ಅತಿಶಯದಿಂದ ಅರ್ಜುನನಿಗೆ ಸಾರಥಿಯಾಗಿ | ರಥವನೇರಿ ನಡೆಯಿಸಿದವನಾರು || ಪೃಥಿವಿಯೆಲ್ಲವ ಬಲಿ ಯಾರಿಗೊಪ್ಪಿಸಿದನು | ಮತಿವಂತ ಧ್ರುವನ ರಕ್ಷಕನಾರು ಪೇಳಯ್ಯ ||೪|| ಸಾಗರನ ಮಗಳಿಗು ಯಾರ ನಾಮವೆ ಗತಿ | ಯೋಗದಿ ನಾರದನಾರ ಭಜಿಪನು || ರಾಗರಹಿತ ಹನುಮಂತನೊಡೆಯನಾರು | ಭಾಗವತರ ಪ್ರಿಯ ಪುರಂದರವಿಠಲ ||೫||

## ೩೭೯ ರಾಗ ದ್ವಿಜಾವಂತಿ ಆದಿತಾಳ

ನೆನೆಯಿರೊ ಭಕ್ತಜನರುಗಳು ಅನುದಿನ | ಘನಮಹಿಮನ ಸೇವೆಯ ಮಾಡಿದರೆ | ಮನದಲ್ಲಿ ನೆನೆದಂಥ ಅಭೀಷ್ಟವನೀವ ಹನುಮಂತ || ಪ || ಒಂದು ಯುಗದಲ್ಲಿ ಹನುಮಾವತಾರನಾಗಿ | ಬಂದು ನೆರೆದಾಯೋಧ್ಯಾಪುರಕಾಗಿ || ಬಂದ ಧೀರನ ನೋಡಿ ಸುಜನರೆಲ್ಲಾ | ನಂದದಿಂದಲಿ ಪಾಡಿ|| ||೧|| ವಾಯುಕುಮಾರಕ ದ್ವಾಪರದಲ್ಲಿ ಭೀಮ | ರಾಯನೆಂದೆನಿಸಿದ ಕೌರವರ ಬಲದಿ || ನಾಯಕನಾಗಿ ಬಂದ ದುಶ್ಶಾಸನನ | ಕಾಯವನಳಿಸಿ ನಿಂದು ||೨|| ಕಾಯಜಪಿತನ ಮುಂದೆ ಕೌರವರ ತರಿದು ರಾಜ | ಸೂಯಯಾಗವ ಮಾಡಿದ ಬಲವಂತ || ರಾಯ ರಾಯರ ಧೀರ ಹನುಮಂತ | ಪ್ರಿಯಜನ ಮಂದಾರ||೩|| ಗುರು ಮಧ್ವಮುನಿಯಾಗಿ ಹರಿಗತಿಪ್ರಿಯನಾಗಿ| ಕರುಣಾಕರನಾಗಿ ಶರಣರ ಪೊರೆವ || ಮೆರೆವ ಶ್ರೀಹನುಮಂತನ ಈ ದೇವನ | ಸ್ಮರಿಸಿರೋ ಗುಣವಂತ || ೪ || ಲಂಕಾಪಟ್ಟಣ ಸಮೀಪ ಸಮುದ್ರವ ದಾಟಿ | ಪಂಕಜನಾಭ ಶ್ರೀಪುರಂದರವಿಠಲ ನಿ || ಶ್ಯಂಕ ರಾವಣನ ಗೆದ್ದ ಈ ಹನುಮಂತ | ಪಂಕಜಮುಖಿಯಳ ನೋಡ್ದ ||೫||

## ೩೮೦ ರಾಗ ಧನ್ಯಾಸಿ ಅಟತಾಳ

ನೋಡುವುದೇ ಕಣ್ಣು ಕೇಳುವುದೇ ಕಿವಿ । ಪಾಡುವುದೇ ವದನ ॥ ಪ ॥ ಗಾಡಿಗಾರ ಶ್ರೀವೇಣುಗೋಪಾಲನ । ಕೂಡಿಕೊಂಡಾಡುವ ಸುಖದ ಸೊಬಗನು ॥ಅ॥ ಪೊಂಗೊಳಲೂದುತ ಮೃಗಪಕ್ಷಿಗಳನೆಲ್ಲ । ಸಂಗಳಿಸುತಲಿಪ್ಪನ॥ ಅಂಗಜಜನಕ ಗೋಪಾಂಗನೇರೊಡನೆ ಬೆಳ । ದಿಂಗಳೊಳಗೆ ಸುಳಿದಾಡೊ ರಂಗಯ್ಯನ ॥ ೧ ॥ ನವಿಲಂತೆ ಕುಣಿವ ಹಂಸದಂತೆ ನಲಿಯುವ । ಮರಿಕೋಗಿಲೆಯಂತೆ ಕೂಗುವ ॥ ಎರಳೆಯ ಮರಿಯಂತೆ ಚಿಗಿಜಿಗಿದಾಡುವ । ತುಂಬಿ ಝೇಂಕರಿಸುವಂದದಿ ಝೇಂಕರಿಪನ ॥ ೨ ॥ ಮುರುಡು ಕುಬ್ಜೆಯ ಡೊಂಕು ತಿದ್ದಿ ರೂಪವ ಮಾಡಿ। ಸೆರೆಯ ಬಿಡಿಸಿಕೊಟ್ಟನ ॥ ಗರುಡಗಮನ ಗುರುಪುರಂದರವಿಠಲನ । ಶರಣಾಗತಸುರಧೇನು ರಂಗಯ್ಯನ ॥೩॥

## ೩೮೧ ರಾಗ ಕಲ್ಯಾಣಿ ಅಟತಾಳ

ಎಲ್ಲಿರುವನೋ ರಂಗನೆಂಬ ಸಂಶಯಬೇಡ । ಎಲ್ಲಿ ಭಕ್ತರು ಕರೆದರಲ್ಲೆ ಒದಗುವನು ॥ ಪ ॥ ತರಳ ಪ್ರಹ್ಲಾದ ಶ್ರೀಹರಿ ವಿಶ್ವಮಯನೆಂದು । ಬರಿದೋದಲವನ ಪಿತ ಕೋಪದಿಂದ ॥ ಸ್ಥಿರವಾದಡೀ ಕಂಭದೊಳು ತೋರು ತೋರೆನಲು । ಭರದಿ ಬರಲದಕೆ ವೈಕುಂಠ ನೆರೆಮನೆಯೆ ॥ ೧ ॥ ಪಾಪಕರ್ಮವ ಮಾಡಿದಜಮಿಳನ ಯಮಭಟರು । ಕೋಪದಿಂದೆಳೆಯುತಿರೆ ಭೀತಿಯಿಂದ ॥ ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ । ದ್ವೀಪವೀ ಧರೆಗತಿ ಸಮೀಪದಲ್ಲಿಹುದೆ ॥೨॥ ಕರಿರಾಜನನು ನೆಗಳು ನುಂಗುತಿರೆ ಭಯದಿಂದ । ಮೊರೆಯಿಡಲು ಕೇಳಿ ಅತಿ ತ್ವರಿತದಿಂದ ॥ ಕರುಣದಲಿ ಬಂಧನವ ಬಿಡಿಸಲಾಗಜರಾಜ । ನಿರುವ ಸರಸಿಗೆ ಅನಂತಾಸನವು ಮುಮ್ಮನೆಯೆ ॥೩॥ ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ । ತರುಣಿ ಹಾ ಕೃಷ್ಣ ಎಂದೊದರೆ ಕೇಳಿ ॥ ಭರದಿಂದ ಅಕ್ಷಯಾಂಬರವಿತ್ತ ಹಸ್ತಿನಾ । ಪುರಿಗು ದ್ವಾರಾವತಿಗು ಕೂಗಳತೆಯೇ ॥ ೪ ॥ ಅಣು ಮಹತ್ತುಗಳಲ್ಲಿ ಪರಿಪೂರ್ಣನೆಂದೆನಿಸಿ । ಗಣನೆಯಿಲ್ಲದ ಮಹಾಮಹಿಮನೆನಿಪ ॥ ಘನ ಕೃಪಾನಿಧಿ ನಮ್ಮ ಪುರಂದರ ವಿಠ್ಠಲನು । ನೆನೆದವರ ಮನದಲ್ಲೆ ಇಹನೆಂಬ ಬಿರುದಿರಲು ॥ ೫ ॥

## ೩೮೩ ರಾಗ ತೋಡಿ ಆದಿತಾಳ

ನೀನೇ ದಯಾಸಂಪನ್ನನೋ। ಕಾವೇರಿರಂಗ। ನೀನೇ ಬ್ರಹ್ಮಾದಿ ವಂದ್ಯನೋ ॥ ಪ ॥ ಬಂಧುಗಳೆಲ್ಲರ ಮುಂದಾ ದ್ರುಪದನ। ನಂದನೆಯೆಳೆ ತಂದು ಸೀರೆಯ ಸೆಳೆವಾಗ॥ ಬಂಧು ಕೃಷ್ಣ ಸಲಹೆಂದರೆ ಅಕ್ಷಯ। ವೆಂದು ಕಾಯ್ದ ಗೋವಿಂದನು ನೀನೆ ॥ ೧ ॥ ನಿಂದಿತ ಕರ್ಮವನೊಂದುಳಿಯದೆ ಜೇ। ಕೆಂದು ಮಾಡಿದನಂದಜಮಿಳನು ॥ ಕಂದ ನಾರಗಾ ಎಂದರೆ ಮುಕ್ತಿಯ ಕುಂದದೆಯಿತ್ತ ಮುಕುಂದನು ನೀನೆ ॥ ೨ ॥ ಮತ್ತಗಜವ ನೆಗ ಳೊತ್ತಿ ಪಿಡಿದು ಬಲು। ಒತ್ತ್ಯೆಧರೋಷ್ಮವ ಮೃತ್ಯುವಿನಂತಿರೆ ॥ ಭಕ್ತರ ಸಲಹುವ ಪುರಂದರವಿಠ್ಠಲ। ಹಸ್ತಿಗೊಲಿದ ಪರವಸ್ತುವು ನೀನೆ ॥ ೩ ॥

## ೩೮೪ ರಾಗ ಬಿಲಹರಿ ಅಟತಾಳ

ಬರಿದೆ ಹೋಯಿತು ಹೋಯಿತು ಹೊತ್ತು ॥ಪ॥ ನರಜನ್ಮಸ್ಥಿರವೆಂದು ನಾನಿದ್ದೆನೊ ರಂಗ ॥ಅ॥ ಆಸೆಯೆಂಬುದು ಎನ್ನ ಕ್ಲೇಶಪಡಿಸುತಿದೆ। ಘಾಸಿ ಯಾದೆನೊ ಹರಿ ಶೇಷಶಾಯಿ ॥ ವಾಸುದೇವನೆ ನಿನ್ನ ಧ್ಯಾನವ ಮಾಡದೆ। ನಾಶವಾಯಿತು ಜನ್ಮ ಮೋಸಹೋದೆನು ಕೃಷ್ಣ ॥ ೧ ॥ ಸತಿಸುತರೆಂತೆಂಬ ಅತಿ ಭ್ರಾಂತಿಗೊಳಗಾಗಿ। ಮತಿಹೀನನಾದೆನೊ ಚ್ಯುತಿದೂರನೆ ॥ ಸತತ ವಿಷಯದಿಂದ ಹತನಾದೆ ಮನವೆನ್ನ। ಗತಿಗೆಡಿಸುತಿದೆ ಲಕ್ಷ್ಮೀಪತಿ ಸರ್ವೋ ತ್ತಮನೆ ॥ ೨ ॥ ಪರರ ಸೇವೆಯ ಮಾಡಿ ಪರರನ್ನೆ ಕೊಂಡಾಡಿ। ಮರುಳು ತನದಲಿ ಮತಿಹೀನನಾದೆ ॥ ನೆರೆ ನಂಬಿದೆನೊ ನಿನ್ನ ಕರುಣದಿಂದಲಿ ಎನ್ನ। ಮರೆಯದೆ ಸಲಹಯ್ಯ ಪುರಂದರವಿಠಲ ॥ ೩ ॥

## ೩೮೫ ರಾಗ ಶಂಕರಾಭರಣ ತ್ರಿಪುಟತಾಳ

ಧರಣಿಗೆ ದೊರೆಯೆಂದು ನಂಬಿದೆ। ಇಂಥ। ಪರಲೋಭಿಯೆಂಬು ದರಿಯೆ ಶ್ರೀಹರಿಯೆ ॥ ಪ ॥ ಕಾಡಿ ಬೇಡುವರಿಗೆ ಕೊಡಲಾರದೆ ಅಂಜಿ। ಓಡಿ ನೀರೊಳು ಸೇರಿಕೊಂಡೆ ಬೇಗ ॥ ಹೇಡಿಯು ತೆರದಲಿ ಮೋರೆಯ

ತೋರದೆ । ಓಡಿ ಅರಣ್ಯದಿ ಮೃಗಗಳ ಸೇರ್ದೆ ॥ ೧ ॥ ಒಡವರ ಬಿನ್ನಹ ಲಾಲಿಸದೆ ಹಲ್ಲ । ಕಡು ಕೋಪದಲಿ ತೆರೆದಂಜಿಸಿದೆ ॥ ತಡೆಯದೆ ಭಿಕ್ಷುಕನಾದರೆ ಬಿಡರೆಂದು । ಕೊಡಲಿಯ ಪಿಡಿದು ಕೋಡಗಹಿಂಡ ಕಾಯ್ದೆ ॥ ೨ ॥ ಉತ್ತಮನೆಂದರೆ ಮತ್ತೆ ಚೋರನಾದೆ । ಬತ್ತಲೆ ನಿಂತೆ ತೇಜಿಯನೇರಿನೆ ॥ ಎತ್ತ ಹೋದರು ಬಿಡೆ ಮತ್ತೆ ನಿನ್ನನು ದೇವ। ಚಿತ್ತಜಜನಕ ಶ್ರೀಪುರಂದರ ವಿಠಲ ॥ ೩ ॥

## ೩೮೬ ರಾಗ ನವರೋಜು ಆದಿತಾಳ

ನಂಬಿದೆ ನಿನ್ನ ಪಾದವ । ವೇಂಕಟರಮಣ । ನಂಬಿದೆ ನಿನ್ನ ಪಾದವ ॥ ॥ ಪ ॥ ನಂಬಿದೆ ನಿನ್ನ ಪಾದಾಂಬುಜಯುಗಳವ । ಚಂದದಿ ಸಲಹೋ ಮಂದರಧರನೆ ॥ ಅ ॥ ತಂದೆಯು ನೀನೆ । ತಾಯಿಯು ನೀನೆ । ಬಂಧು ಬಳಗವು ನೀನೆ ॥ ಬಂದ ದುರಿತವೆಲ್ಲ ಹೊಂದಿಕೊಳ್ಳದಂತೆ । ಬಂದೆನ್ನ ಸಲಹೊ ಮುಕುಂದ ಮುರಾರಿ॥೧॥ ಚಿಕ್ಕಂದು ಮೊದಲು ನಾನು। ನಿನ್ನಯ ಪಾದ । ಹೊಕ್ಕು ಜೀವಿಸುತಿಹೆನು ॥ ಫಕ್ಕನೆ ಜ್ಞಾನವ ಅಕ್ಕರದಿಂದಲೆ ಕೊಡು । ಮಕ್ಕಳ ಮಾಣಿಕ್ಯ ರುಕ್ಮಿಣಿಯರಸ ॥ ೨ ॥ ಮರೆತು ಮಾಯದೊಳು । ಮುಳುಗಿದೆ ಮಾಯ । ವರಿತು ಅರಿಯದಾದೆ ॥ ಮರೆಯದೆ ಎನ್ನನು ಸಲಹೊ ಕೃಪಾನಿಧಿ । ವರದ ಶ್ರೀವೇಂಕಟ ಪುರಂದರವಿಠಲ ॥೩॥

## ೩೮೭ ರಾಗ ಕಾಪಿ ಅಟತಾಳ

ದಣಿಯ ನೋಡಿದೆನೋ ವೇಂಕಟನ। ಮನ। ದಣಿಯ ನೋಡಿದೆ ಶಿಖಾಮಣಿ ತಿರುಮಲನ ॥ಪ॥ ಚರಣದಂದುಗೆ ಗೆಜ್ಜೆಯವನ । ಪೀತಾಂ । ಬರ ಉಡಿಗೆ ಒಡ್ಯಾಣವಿಟ್ಟಿಹನ ॥ ಮೆರೆಯುವ ಮಾಣಿಕ್ಯದವನ । ಚಿನ್ನ । ಸರ ಹಾರ ಪದಕ ಕೌಸ್ತುಭ ಧರಿಸಿದವನ ॥೧॥ ಕೊರಳೊಳು ವೈಜಯಂತಿ ಇಹನ । ಕಿರು। ಬೆರಳ ಮುದ್ರಿಕೆ ಭುಜಕೀರ್ತಿಲೊಪ್ಪುವನ ॥ ಅರಳುಕಂಗಳ ನೋಟದವನ । ಸುಳಿ । ಗುರುಳು ನೊಸಲು ಪಟ್ಟೆ ನಾಮ ಹಚ್ಚಿಹನ ॥೨॥ ಶಂಖಚಕ್ರವ ಪಿಡಿದಿಹನ । ಕೈ ಕಂಕಣ ತೋಳ್ಬಂದಿ ಬಾಪುರಿಯವನ ॥

ಶಂಖನೂದುವ ಸರ್ವೋತ್ತಮನ । ಘೂ ವೈ । ಕುಂತವಿದೆಂದು ಹಸ್ತದಿ ತೋರಿಸುವನ ॥೩॥ ಕೇಸಕ್ಕಿ ಅನ್ನ ಉಂಬುವನ । ಬಡ್ಡಿ । ಕಾಸು ಬಿಡದ ಹಾಗೆ ಕೊಡಿ ಹಾಕುವನ ॥ ಘೋಷ್ನಾನಾದಕ್ಕೆ ಒಲಿದಿಹನ । ಮೈಯೊಳ್। ಸೂಸುವ ಗಂಧ ಕಸ್ತೂರಿ ಲೇಪಿತನ ॥ ೪ ॥ ನೀಹಾದ ವಲ್ಲಿ ಹೊದ್ದಿಹನ । ಹೊರ । ಜೇಟಿಯಾಡಿ ಅಂದದಿಂದ ಬರುವನ ॥ ನೋಟದಿ ಬಂದು ನಿಂತಿಹನ । ಈ । ಸೃಷ್ಟಿಗೊಡೆಯ ಪುರಂದರವಿಠಲನ ॥೫॥

## ೩೮೮ ರಾಗ ಕನ್ನಾಡ್ ಅಟತಾಳ

ನಾರಾಯಣ ಎನ್ನಿರೊ । ಶ್ರೀನರಹರಿ । ಪಾರಾಯಣ ಮಾಡಿರೊ ॥ ॥ಪ॥ ನಾರಾಯಣನೆಂದು ಅಜಮಿಳನು ಕೈವಲ್ಯ ಸೇರಿದನೆಂಬೊ ಸುದ್ದಿಯ ಕೇಳಿ ಅರಿಯಿರೇ ॥ಅ॥ ಕಾಶಿಗೆ ಹೋಗಲೇಕೆ । ಕಾವಡಿ ಪೊತ್ತು। ಬೇಸತ್ತು ತಿರುಗಲೇಕೆ ॥ ವಾಸುದೇವನ ನಾಮ ಬಾಯ್ತುಂಬ ನೆನೆವರೆ । ಕ್ಲೇಶಗಳೆಂಬುದು ಲೇಶಮಾತ್ರವಿಲ್ಲ ॥೧॥ ಚೋರರ ಭಯವಿಲ್ಲವೊ । ಹರಿನಾಮಕ್ಕೆ । ಯಾರ ಅಂಜಿಕೆಯಿಲ್ಲವೊ ॥ ಊರನಾಳುವ ದೊರೆ ನೀತಿ ಭೀತಿಗಳಿಲ್ಲ । ಘೋರ ಪಾತಕವೆಲ್ಲ ದೂರ ಮಾಡುವುದಕ್ಕೆ ॥ ೨ ॥ ಸ್ನಾನವ ಮಾಡಲೇಕೆ ಮಾನವರಿಗೆ । ಮೌನಮಂತ್ರಗಳೇಕೆ ॥ ದೀನಪಾಲಕ ನಮ್ಮ ಬೆಟ್ಟದೊಡೆಯನ್ನ । ಧ್ಯಾನಕೆ ಸರಿಯುಂಟೆ ಪುರಂದರವಿಠಲ ॥ ೩ ॥

## ೩೮೯ ರಾಗ ಮಧ್ಯಮಾವತಿ ಅಟತಾಳ

ಬಂದು ನಿಂದಿಹ ನೋಡಿ । ಭೂತಳದಿ ವೇಂಕಟ। ಇಂದಿರೆಯ ಒಡಗೂಡಿ। ಒಪ್ಪುವ ನಿರಂತರ। ಪೊಂದಿ ಭಜನೆಯ ಮಾಡಿ ॥ ಆನಂದಗೂಡಿ ॥ಪ॥ ವಂದಿಸುತ ಮನದೊಳಗೆ ಇವನಡಿ । ದ್ವಂದ್ವ ಭಜಿಸಲು ಬಂದ ಭಯಹರ ॥ ಇಂದುಧರ ಸುರವೃಂದನುತ ಗೋ। ವಿಂದ ಘನದಯಾಸಿಂಧು ಶ್ರೀಹರಿ ॥ಅ॥ ದ್ವಾರದೆಡಬಲದಲ್ಲಿ। ಜಯವಿಜಯರಿಬ್ಬರು। ಸೇರಿ ಸೇವಿಪರಲ್ಲಿ। ಸನಕಾದಿನುತ ಶೃಂ। ಗಾರನಿಧಿ ಅಂಗದಲ್ಲಿ। ಮುತ್ತಿನ ಶೋಭಿಪ। ಹಾರ ಪೊಂದಿಹುವಲ್ಲಿ ॥ ವಿಸ್ತಾರದಲ್ಲಿ ॥ ವಾರವಾರಕೆ ಪೂಜೆಗೊಂಬುವ ।

ಹಾರ ಮುಕುಟಾಭರಣ ಕುಂಡಲ । ಧಾರ ಭುಜಕೇಯೂರಭೂಷಿತ । ಮಾರಪಿತಗುಣ ಮೋಹನಾಂಗ । ಚಾರು ಪೀತಾಂಬರಕಟಿ ಕರ । ವೀರ ಕಲ್ಹಾರಾದಿ ಪೂವಿನ । ಹಾರ ಕೊರಳೊಳು ಎಸೆವುತಿರೆ ವದ । ನಾರ ವಿಂದನು ನಗುತ ನಲಿಯುತೆ ॥೧॥ ಎಲ್ಲ ಭಕುತರಭೀಷ್ಟ । ಕೊಡುವುದಕೆ ತಾ ಕೈ । ವಲ್ಯ ಸ್ಥಾನವ ಬಿಟ್ಟ । ಶೇಷಾದ್ರಿ ಮಂದಿರ । ದಲ್ಲಿ ಲೋಲುಪ ದಿಟ್ಟ । ಸೌಭಾಗ್ಯ ನಿಧಿಗಿದಿ । ರಿಲ್ಲಿ ಭುಜಬಲಪುಷ್ಟ ॥ ಕಸ್ತೂರಿಯಿಟ್ಟ ॥ ಚೆಲ್ವ ಫಣೆಯಲಿ ಶೋಭಿಸುವ ಸಿರಿ । ವಲ್ಲಭನ ಗುಣ ಪೊಗಳದಿಹ ಜಗ । ಖುಲ್ಲರೆದೆದಲ್ಲಣ ಪರಾಕ್ರಮ । ಮಲ್ಲಮರ್ದನ ಮಾತುಳಾರಿ । ಫಲ್ಗುಣನ ಸಖ ಪ್ರಕಟನಾಗಿಹ । ದುರ್ಲಭನು ಅಘದೂರ ಬಹು ಮಾಂ । ಗಲ್ಯ ಹೃದಯನು ಸೃಷ್ಟಿಗೆ । ಉಲ್ಲಾಸ ಕೊಡುತಲಿ ಚಂದದಿಂದಲಿ ॥೨॥ ಪದಕ ಕೌಸ್ತುಭಧಾರ । ಸರಿಗೆಯ ಕಂದರ । ಸುದರುಶನದರಧಾರ । ಸುಂದರ ಮನೋಹರ । ಪದಯುಗದಿ ನೂಪುರ । ಇಟ್ಟಿಹನು ಸನ್ಮುನಿ । ಹೃದಯ ಸ್ಥಿತ ಗಂಭೀರ ॥ ಬಹು ದಾನ ಶೂರ ॥ ವಿಧಿಭವಾದ್ಯರ ಪೊರೆವ ದಾತನು। ತುದಿ ಮೊದಲು ಮಧ್ಯವು ವಿರಹಿತನು । ಉದುಭವಾದಿಗಳೀವ ಕರ್ತನು । ತ್ರಿದಶಪೂಜಿತ ತ್ರಿಭುವನೇಶ । ಸದುವಿಲಾಸದಿ ಸ್ವಾಮಿತೀರ್ಥದಿ । ಉದಿಸುತಿರೆ ಸಿರಿಮಹಿಳೆ ಸಹಿತದಿ । ಪದುಮನಾಭ ಪುರಂದರವಿಠಲ । ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ ॥ ೩ ॥

## ೩೯೦ ರಾಗ ಮಧ್ಯಮಾವತಿ ಆದಿತಾಳ

ಕಾವ ದೇವ ನೀನಲ್ಲದೆ ಜಗಕೆ ಇ । ನ್ನಾವ ದೇವರುಳ್ಳರೈ ॥ಪ॥ ದೇವರ ದೇವ ನೀನೆಂದು ನಂಬಿದೆನೆನ್ನ । ಕಾಯೊ ಕನಕಾಚಲ ಕೃಷ್ಣ ಕರುಣದಿ ॥ ॥ಅ॥ ತಂದೆಯ ತೊಡೆಮೇಲೆ ಬಂಧು ಕುಳಿತಿದ್ದ। ಕಂದನ ಮಲತಾಯಿಯು ನೂಕಲು ॥ ಅಂದು ಶಿಶುವು ಆಡವಿಗೆ ನಡೆತರಲು । ಬಂದು ಪೊರೆದೆಯೋ ನೀ ಕರುಣವಲಿ ॥೧॥ ನಖಮುಖದಲಿ ಹಿರಣ್ಯಕನೊಡಲನು ಸೀಳಿ । ರಕುತವ ದೆಸೆದೆಸೆಗೆ ಚೆಲ್ಲಲು ॥ ಸಕಲ ಸುರರು ಕೊಂಡಾಡಲು ಜಯವೆಂದು । ಭಕುತ ಪ್ರಹ್ಲಾದನ ಪೊರೆದೆ ಕರುಣದಿ ॥ ೨ ॥ ಶಕಟ ಪೂತನಿ ಧೇನುಕ ವತ್ಸಾಸುರ । ಬಕಮುಖರನೆಲ್ಲ ಸವರಿದೆಯೋ ॥ ಪ್ರಕಟತನದಿ ಕಂಸನ

ನೆಗ್ಗೊತ್ತಿ ದೇ । ವಕಿವಸುದೇವರ ಪೊರೆದೆ ಕರುಣದಿ ॥೩॥ ಅತಿ ಚಪಲದಿ ದುಶ್ಯಾಸನ ಸಭೆಯಲಿ । ಪತಿಗಳೈವರು ಎದುರಿಸೋಳಿರಲು ॥ ಖತಿಯಿಂದಲಿ ಸೆಳೆಯೆ ಸೀರೆಯು ತರಳೆ ದ್ರೌ । ಪದಿಯಭಿಮಾನವ ಪೊರೆದೆ ಕರುಣದಿ ॥೪॥ ಮರಣಕಾಲದಲಿ ಅಜಮಿಳ ಮರುಕದಿ । ತರಳ ನಾರಗನೆಂದು ಕರೆಯಲು॥ ನೆರೆದು ಪೊರೆದೆ ಕರುಣಾಳುಗಳರಸನೆ। ಗುರುಪುರಂದರವಿಠ್ಠಲ ಕರುಣದಲಿ॥

## ೩೯೧ ರಾಗ ಪೂರ್ವಿ ಅಟತಾಳ

ಅಪಮಾನವಾದರೆ ಒಳಿತು । ಅಪರೂಪ ಹರಿನಾಮ ಜಪಿಸುವ ಮನುಜಗೆ ॥ ಪ ॥ ಮಾನದಿಂದ ಅಭಿಮಾನ ಪುಟ್ಟುವುದು । ಮಾನದಿಂದ ತಪ ಹಾನಿಯಾಗುವದು ॥ ಮಾನಿ ದುರ್ಯೋಧನಗೆ ಹಾನಿಯಾಯಿತು ಅನು । ಮಾನವಿಲ್ಲ ಮಾನಾಪಮಾನಸಮನಿಗೆ ॥ ೧ ॥ ಅಪಮಾನದಿಂದಲಿ ತಪ ವೃದ್ಧಿಯಾಗುವುದು । ಅಪಮಾನದಿಂದ ಪುಣ್ಯ ಸಫಲವಾಗುವುದು ॥ ಅಪಮಾನದಿಂದಲಿ ನೃಪ ಧ್ರುವರಾಜಗೆ। ಕಪಟನಾಟಕ ಕೃಷ್ಣ ಅಪರೋಕ್ಷನಾದನು ॥೨॥ ನಾನೇನು ಮಾಡಲಿ ಯಾರಲ್ಲಿ ಪೋಗಲಿ। ಕಾನನಚರರಾರಾಧ್ಯ ನೀನಿರಲು ॥ ದೀನರಕ್ಷಕ ನಮ್ಮ ಪುರಂದರ ವಿಠಲ । ಏನು ಬೇಡೆನಗಪಮಾನವೇ ಇರಲಿ ॥೩॥

## ೩೯೨ ರಾಗ ಬಿಲಹರಿ ಅಟತಾಳ

ಹಣ್ಣು ಬಂದಿದೆ ಕೊಳ್ಳಿರೊ ನೀವೀಗ । ಚಿನ್ನ ಬಾಲಕೃಷ್ಣನೆಂಬೊ ಕನ್ನೆಬಾಳೆ ॥ಪ॥ ಹವ್ಯಕವ್ಯದ ಹಣ್ಣು ಸವಿವ ಸಕ್ಕರೆ ಹಣ್ಣು । ಭವರೋಗಗಳನೆಲ್ಲ ಕಳೆವ ಹಣ್ಣು ॥ ನವನೀತ ಚೋರನೆಂಬೊ ಜವನ ಅಂಜಿಪ ಹಣ್ಣು । ಅವನಿಯೊಳು ಶ್ರೀರಾಮನೆಂಬೊ ಹಣ್ಣು ॥ ೧ ॥ ಕೊಳೆತುಹೋಗುವದಲ್ಲ ಹುಳುತುಹೋಗುವುದಲ್ಲ । ಕಳೆದು ಬೀಸಾಡಿಸಿಕೊಳ್ಳುವುದಲ್ಲ ॥ ಅಳತೆ ಕೊಂಬುವುದಲ್ಲ ಗಿಳಿ ಕಚ್ಚಿ ತಿಂಬೋದಲ್ಲ । ಒಳಿತಾದ ಹರಿಯೆಂಬೊ ಮಾವಿನ ಹಣ್ಣು ॥೨॥ ಕೆಟ್ಟು ನಾರುವುದಲ್ಲ ಬಿತ್ತಿ ಬೆಳೆಯೋದಲ್ಲ । ಕಷ್ಟದಿ ಹಣ ಕೊಟ್ಟು ಕೊಂಬುವುದಲ್ಲ ॥ ಸೃಷ್ಟಿಯೊಳಗೆ ನಮ್ಮ ಪುರಂದರವಿಠ್ಠಲ। ಕೃಷ್ಣ ರಾಯನೆಂಬೊ ಶ್ರೇಷ್ಠಾದ ಹಣ್ಣು ॥೩॥

## ೩೯೩ ರಾಗ ಪೀಲು ಆದಿತಾಳ

ದೇವಕಿಕಂದ ಮುಕುಂದ ‖ ಪ ‖ ನಿಗಮೋದ್ಧಾರ ನವನೀತಚೋರ । ಖಗಪತಿವಾಹನ ಜಗದೋದ್ಧಾರ ‖ ೧ ‖ ಶಂಖಚಕ್ರಧರ ಶ್ರೀಗೋವಿಂದ । ಪಂಕಜಲೋಚನ ಪರಮಾನಂದ ‖ ೨ ‖ ಮಕರಕುಂಡಲಧರ ಮೋಹನ ವೇಷ । ರುಕುಮಿಣಿವಲ್ಲಭ ಪಾಂಡವಪೋಷ ‖ ೩ ‖ ಕಂಸಮರ್ದನ ಕೌಸ್ತುಭಾಭರಣ । ಹಂಸವಾಹನ ಪೂಜಿತಚರಣ ‖೪‖ ವರ ವೇಲಾಪುರ ಚೆನ್ನ ಪ್ರಸನ್ನ । ಪುರಂದರವಿಠಲ ಸಕಲಗುಣಪೂರ್ಣ ‖೫‖

## ೩೯೪ ರಾಗ ಕಾಂಭೋಜಿ ಝಂಪೆತಾಳ

ನಾ ಮುಂದೆ ರಂಗ ನೀ ಎನ್ನ ಹಿಂದೆ । ಎಂದೆಂದು ನಿನ್ನ ನಾಮವ ಎಂದೆಂಬೆ ‖ ಪ ‖ ಅನಾಥನು ನಾನು ಎನಗೆ ಬಂಧು ನೀನು । ಹೀನನು ನಾನು ದಯವಂತ ನೀನು ‖ ಧ್ಯಾನಮಂತ್ರನು ನೀನು ಧ್ಯಾನಿಸುವೆನು ನಾನು । ಜ್ಞಾನಗಮ್ಯನು ನೀನು ಅಜ್ಞಾನಿ ನಾನು ‖ ೧ ‖ ಸುರತರುವು ನೀನು ಫಲ ಬಯಸುವಂಥವ ನಾನು । ಸುರಧೇನು ನೀನು ಕರೆದುಂಬೆ ನಾನು ‖ ವರ ಚಿಂತಾಮಣಿ ನೀನು ಪರಿಚಿಂತಿಸುವೆ ನಾನು । ಶರಧಿಕ್ಷೀರನೆ ನೀನು ತರಳನು ನಾನು ‖ ೨ ‖ ಒಂದರೊಳೊಂದೊಂದು ಅವಗುಣವ ಹೊಂದಿದೆ । ಕಂದನೆಂದೆತ್ತಿಕೊ ಸಲಹೊ ಬೇಗ ‖ ತಂದೆ ಶ್ರೀಪುರಂದರ ವಿಠ್ಠಲರಾಯ ನೀ । ಬಂದೆನ್ನ ಮನದಲಿ ನಲಿನಲಿದಾಡು ‖ ೩ ‖

## ೩೯೫ ರಾಗ ಹಿಂದುಸ್ಥಾನಿ ಕಾಪಿ ಆದಿತಾಳ

ಗುಣವಾಯಿತೆನ್ನ ಭವರೋಗ । ಕೃಷ್ಣನೆಂಬ ವೈದ್ಯನು ದೊರಕಿದನು ‖ ಗುಣವಾಗುವವರಿಗೆ ಎಣೆಯಿಲ್ಲ । ಗುಣವಂತರಾಗುವರು ಭವವೆಲ್ಲ ‖ ಪ ‖ ಸಂತತ ಹರಿಭಕ್ತಿಯನುಪಾನ । ಸಂತತ ಗುರುಭಕ್ತಿ ಮರುಪಾನ ‖ ಸಂತತ ಶ್ರವಣ ಕಠಿನ ಪಥ್ಯ । ಸಂತತ ಕೀರ್ತನ ಉಷ್ಣೋದಕ ‖ ೧ ‖ ಚಂದ್ರೋದಯ ಉಂಟು ಈತನಲ್ಲಿ । ಚಿಂತಾಮಣಿಯುಂಟು ಈತನಲ್ಲಿ ‖ ಸಂಚಿಯೊಳಗೆ ತುಂಬ ಮಾತ್ರೆಗಳುಂಟು । ಚೆನ್ನಾಗಿ ಗುಣ ಮಾಡುವನೀತ ‖೨‖

ಗುರು ಸ್ಮರಣೆಯು ಶುಂಠಿ ಮೆಣಸು । ಹರಿದಿವ್ಯನಾಮವು ಸಾರನ್ನ ॥ ಗುರು ಪಾದ ಸೇವೆಯು ಸಿಹಿಸಾರು । ಹರಿಪಾದೋದಕವೇ ಘೃತವು ॥೩॥ ಸಹಸ್ರ ನಾಮದಿ ತಾ ವಂದ್ಯ । ಸಕಲ ಸ್ವತಂತ್ರಕೆ ತಾ ಬಾದ್ಯ ॥ ಹರಿ ಸರ್ವೋತ್ತಮನೆಂಬ ವೈದ್ಯ । ಪುರಂದರ ವಿಠಲನೆ ನಿರವದ್ಯ ॥೪॥

## ೩೯೬ ರಾಗ ಕಾಂಭೋಜಿ ಝಂಪೆತಾಳ

ಉಬ್ಬದಿರು ಉಬ್ಬದಿರು ಎಲೆ ಮಾನವ ॥ಪ॥ ಹೆಬ್ಬುಲಿಯಂತೆ ಯವ್ವ ಬೊಬ್ಬಿಡುತ ಕಾದಿರುವ ॥ಅ॥ ಸಾಗರದ ತೆರೆಯಂತೆ ಸಾವು ಹುಟ್ಟಿರಲಾಗಿ। ಭೋಗಭಾಗ್ಯಗಳೆಂದು ಬಳಲಲೇಕೊ ॥ ನಾಗಪೆಡೆನೆರಳಲ್ಲಿ ನಡುಗೊ ಕಪ್ಪೆಯ ರೀತಿ । ಕೂಗಿ ಚೀರಿದರೆ ನಿನ್ನಾರು ಕೇಳುವರೊ ॥ ೧ ॥ ಮಾಳಿಗೆ ಮನೆಯೆಂದು ಮತ್ತೆ ಸತಿಸುತರೆಂದು । ಜಾಳಿಗೆ ಧನಧಾನ್ಯ ಪಶುಗಳೆಂದು॥ ವೇಳೆ ತಪ್ಪದೆ ತಿಂಬ ಕೂಳು ತನಗುಂಟೆಂದು । ಗಾಳಿಗಿಕ್ಕಿದ ದೀಪ ಬಾಳು ಬದುಕೆಲ್ಲ ॥೨॥ ಅಸ್ಥಿರದ ಭವದೊಳಗೆ ಅತಿಶಯಗಳೆಣಿಸದಲೆ । ವಸ್ತು ಇದರಲಿ ಕೇಳು ವೈರಾಗ್ಯವ ॥ ವಿಸ್ತಾರವಹಿಮ ಶ್ರೀಪುರಂದರವಿಠ್ಠಲನ । ಸ್ವಸ್ಥಚಿತ್ತದಿ ನೆನೆದು ಮುಕ್ತಿ ಪಡೆ ಮನುಜ ॥೩॥

## ೩೯೭ ರಾಗ ಕಲ್ಯಾಣಿ ಅಟತಾಳ

ಸಂದಿತಯ್ಯ ಪ್ರಾಯವು ಸಂದಿತಯ್ಯ ॥ ಪ ॥ ಒಂದು ದಿನವು ಸುಖವು ಇಲ್ಲ । ಕುಂದಿಹೋದೆ ಕಷ್ಟದಿಂದ ॥ ಬಂಧನವನು ಬಿಡಿಸುತೆನ್ನ । ತಂದೆ ನೀನೆ ರಕ್ಷಿಸಯ್ಯ ॥ ಅ ॥ ತಂದೆಯುದರದಿ ಮೂರು ತಿಂಗಳು । ಸಂದು ಹೋಯಿತು ತಿಳಿಯದೆ । ಬೆಂದೆ ನವಮಾಸದೊಳು ಗರ್ಭದಿ । ನಿಂದು ತಾಯಿಯ ಗರ್ಭದೆ ॥ ಕುಂದಿತಾಯುವು ಒಂದು ವರುಷ । ಇಂದಿರೇಶನೆ ಕೇಳು ದುಃಖವ । ಬಂಧನದೊಳಗೆ ನಿಂದೆನನುದಿನ । ಮುಂದೆ ಮೋಕ್ಷದ ಮಾರ್ಗ ಕಾಣದೆ ॥೧॥ ಕತ್ತಲೆಯೊಳಿರಲಾರೆನೆನುತಲಿ । ಹೊತ್ತೆ ಹರಕೆಂ‌ು ನಿನ್ನೊಳು । ನಿತ್ಯದಲಿ ಮಲ ಮೂತ್ರ ಬಾಲ್ಯದಿ । ಹೊತ್ತುಗಳೆದೆನು ಎನ್ನೊಳು ॥ ಮತ್ತೆ ಹದಿನಾರರ ಪ್ರಾಯದಿ । ಉಕ್ಕಿ ನಡೆದೆನು ಧರೆಯೊಳು।

ಹತ್ತಿ ಸಂಸಾರದ ಮಾಯಾ । ಸಿಕ್ಕಿದೆನು ಭವಬಲೆಯೊಳು ॥೨॥ ಎಡೆಬಿಡದೆ ಅನುದಿನದಿ ಪಾಪದ। ಕಡಲೊಳಗೆ ನಾ ಬಿದ್ದೆನೊ । ದಡವ ಕಾಣದೆ ದುಃಖ ದೊಳು ಬೆಂ। ದೊಡಲೊಳಗೆ ನಾ ನೊಂದೆನೊ ॥ ಬಿಡದೆ ನಿನ್ನಯ ಧ್ಯಾನ ವೆಂದೆಂ। ಬ್ಬಡಗವೇರಿಸು ಎಂದೆನೊ । ದೃಢದಿ ನಿನ್ನಯ ಪಾದ ಸೇರಿಸೊ। ಒಡೆಯ ಪುರಂದರ ವಿಠ್ಠಲ ॥೪॥

## ೩೯೮ ರಾಗ ಕಲ್ಯಾಣಿ ಅಟತಾಳ

ಏಕೆ ನಿರ್ದಯನಾಗುವೆ। ರಂಗಯ್ಯ ರಂಗ। ಏಕೆ ನಿರ್ದಯನಾಗುವೆ ॥ ॥ ಪ ॥ ಏಕೆ ನಿರ್ದಯ ರಂಗ ಕಾರುಣ್ಯಪತಿಯೆನ್ನ । ಸಾಕುವುದು ನಿನ್ನ ಭಾರ ಪಾಕಶಾಸನವಂದ್ಯ ॥ ಅ ॥ ಅರಿತು ಪಾಡುವೆನೆಂದರೆ । ರಂಗಯ್ಯ ನಿನ್ನ। ಅರಿತವರಾರಯ್ಯ॥ ಅರಿಯಬಾರದ ನಿನ್ನ ಹೊಂದುವುದ್ಹ್ಯಾಂಗಯ್ಯ। ಅರಿಯದವನು ನಾನು । ದಾರಿ ತೋರಿಸೊ ನೀನು ॥ ೧ ॥ ಸುಲಭನು ನೀನೆಂದು । ನಿನ್ನ ಬಳಿಗೆ। ಬಳಲಿ ಬಂದೆನೊ ದೊರೆಯೆ ॥ ಸುಲಭ ನೀನಾದರೆ ಒಲಿದು ಸಲಹಬೇಕೊ । ಚೆಲುವ ಮೂರುತಿ ಕೃಷ್ಣ ಎನ್ನ ಬಿಟ್ಟಗಲದೆ ॥೨॥ ಎಷ್ಟು ದಿವಸ ಹರಿಯೆ । ಈ ಮುಚ್ಚ್ಯಾಟ । ಕಷ್ಟಪಡಿಸ ಬೇಡವೊ ॥ ಎಷ್ಟಿದ್ದರು ನಾ ಮಾಡಿದಪರಾಧ। ಅಷ್ಟು ಮರೆತು ಎನ್ನ ಇಷ್ಟದೆ ಕೈ ಪಿಡಿಯೊ ॥೩॥ ಮಾತುಮಾತಿಗೆ ನಿನ್ನ । ನಾಮಗಳನ್ನು । ಹೇ ತಾತ ನುಡಿದೆನಲ್ಲದೆ ॥ ನೀತಿಯ ಪೇಳಯ್ಯ ವಾತಜನಯ್ಯನೆ । ದೂತನು ನಾನಯ್ಯ ದೂರಮಾಡದೆ ಕಂಡ್ಯ ॥ ೪ ॥ ನಂಬಿಕೆ ಇಲ್ಲದಂಥ। ಡಿಂಭವ ಪಡೆದೆ ಡಂಭಕ ಬೊಂಬೆಯಾದೆ ॥ ಡಂಭತನವ ಬಿಡಿಸೊ ನಿನ್ನಂಘ್ರಿಯ ತೋರಿಸೊ । ಅಂಬುಜಾಕ್ಷ ತಂದೆ ಪುರಂದರವಿಠಲನೆ ॥ ೫ ॥

## ೩೯೯ ರಾಗ ಘರಜು ಆದಿತಾಳ

ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ ॥ ಎರಡು ಬರಿದು ಒಂದು ತುಂಬಲಿಲ್ಲ ॥೧॥ ತುಂಬಲಿಲ್ಲದ ಕೆರೆಗೆ ಬಂದರು ಮೂವರೊಡ್ಡರು॥ ಇಬ್ಬರು ಕುಂಟರು ಒಬ್ಬಗೆ ಕಾಲೇ ಇಲ್ಲ ॥ ೨ ॥ ಕಾಲಿಲ್ಲದ ಒಡ್ಡರಿಗೆ

ಕೊಟ್ಟರು ಮೂರು ಎಮ್ಮೆಗಳ || ಎರಡು ಬರಡು ಒಂದಕ್ಕೆ ಕರುವೇ ಇಲ್ಲ || ೩ || ಕರುವಿಲ್ಲದ ಎಮ್ಮೆಗೆ ಕೊಟ್ಟರು ಮೂರು ಹೊನ್ನುಗಳ || ಎರಡು ಸವಕಲು ಒಂದು ಸಲ್ಲಲೆ ಇಲ್ಲ || ೪ || ಸಲ್ಲದಾ ಹೊನ್ನುಗಳಿಗೆ ಬಂದರು ಮೂರು ನೋಟಗರು|| ಇಬ್ಬರು ಕುರುಡರು ಒಬ್ಬಗೆ ಕಣ್ಣೆ ಇಲ್ಲ ||೫|| ಕಣ್ಣಿಲ್ಲದ ನೋಟಗರಿಗೆ ಕೊಟ್ಟರು ಮೂರು ಊರುಗಳ || ಎರಡು ಹಾಳು ಊರು ಒಂದಕೆ ಒಕ್ಕಲೆ ಇಲ್ಲ || ೬ || ಒಕ್ಕಲಿಲ್ಲದ ಊರಿಗೆ ಬಂದರು ಮೂವರು ಕುಂಬಾರರು || ಇಬ್ಬರು ಜೊಂಟರು ಒಬ್ಬಗೆ ಕೈಯೆ ಇಲ್ಲ ||೭|| ಕೈಯಿಲ್ಲದ ಕುಂಬಾರರು ಮಾಡ್ಯಾರು ಮೂರು ಮಡಿಕೆಗಳ|| ಎರಡು ಒಡಕು ಒಂದಕ್ಕೆ ಬುಡವೆ ಇಲ್ಲ ||೮|| ಬುಡವಿಲ್ಲದ ಗಡಿಗೆಗೆ ಹಾಕಿದರು ಅಕ್ಕಿಗಳ || ಎರಡು ಹಂಜಕ್ಕಿ ಒಂದು ಬೇಯಲಿಲ್ಲ||೯|| ಬೇಯಲಿಲ್ಲದ ಅಕ್ಕಿಗೆ ಬಂದರು ಮೂವರು ನೆಂಟರು || ಇಬ್ಬರು ಉಣ್ಣರು ಒಬ್ಬಗೆ ಹಸಿವೆ ಇಲ್ಲ || ೧೦ || ಹಸಿವಿಲ್ಲದ ನೆಂಟರಿಗೆ ಕೊಟ್ಟರು ಮೂರು ಟೊಣಪೆಗಳ|| ಎರಡು ಸೋಕವು ಒಂದು ತಾಕಲೆ ಇಲ್ಲ || ೧೧ || ಇನ್ನು ಈ ಅರ್ಥಗಳೆಲ್ಲ ಪುರಂದರವಿಠಲ ಬಲ್ಲ | ಅನ್ಯರ್ಯಾರೂ ತಿಳಿದವರಿಲ್ಲ || ೧೨ ||

## ೪೦೦ ರಾಗ ತೋಡಿ ಛಾಪುತಾಳ

ಕಂಡವರಂತೆ ಎನ್ನನು ನೋಡಲಾಗದು | ಪುಂಡರೀಕದಳನಯನ ಪುರಾಣಪುರುಷೋತ್ತಮನೆ || ಪ || ಎಂಭತ್ತನಾಲ್ಕು ಲಕ್ಷ ಯೋನಿಗಳಿಂದ ಬಂದೆ | ನಾನು | ಕುಂಭೀಪಾಕನರಕದೊಳಗೆ ನಿಂದೆ ||೧|| ಸಂಸಾರಸಾಗರದೊಳು ಸಿಕ್ಕಿ ಬಳಲಿದೆ | ಬಹು | ಹಿಂಸೆ ತಾಳಿದೆ ನೀನೆ ಎನಗೆ ಗತಿಯೆಂದು|| || ೨ || ಅಂಜಬೇಡೆಂಬುವರಿಲ್ಲ ಆದರ ಮಾಡುವರಿಲ್ಲ | ನಮ್ಮ | ಅಂಜನಾಸುತಪ್ರಿಯ ಶ್ರೀಪುರಂದರವಿಠಲ ||೩||

## ೪೦೧ ರಾಗ ನಾದನಾಮಕ್ರಿಯೆ ಛಾಪುತಾಳ

ಸುಲಭವಲ್ಲವೊ ಮಹಾನಂದ | ತನ್ನೊಳಗೆ ತಾ | ತಿಳಿಯಬೇಕು ಗುರು ದಯದಿಂದ||ಪ|| ಬೆಕ್ಕನು ಇಲಿ ನುಂಗುವ ತನಕ| ಕಡು| ರಕ್ಕಸಿಯ ಕಂಡು

ಗಿಣಿ ನುಂಗುವ ತನಕ || ಮಕ್ಕಳ ಭಕ್ಷಿಸುವನಕ | ಮದ | ಸೊಕ್ಕಿದ ಗಜವನ್ನು ನರಿ ನುಂಗುವ ತನಕ || ೧ || ಇಷ್ಟದೈವದ ವಶವಾಗೋತನಕ | ಮೂರು | ಬೆಟ್ಟಗಳನ್ನು ನೊಣ ನುಂಗುವ ತನಕ || ಶಿಷ್ಟರೊಡನೆ ಸೇರುವ ತನಕ | ಗುಬ್ಬಿ | ಕೆಟ್ಟ ರಾಜಹಂಸನ ನುಂಗುವ ತನಕ || ೨ || ಒಳಹೊರ ಗೊಂದಾಗುವ ತನಕ | ಸಾಲ | ಕಳೆ ಎಂಬುವ ಭಾವ ಬಯಲಾಗುವ ತನಕ || ಬೆಳಕಿನೊಳಗೆ ಕಾಣುವ ತನಕ | ನಮ್ಮ | ಪುರಂದರವಿಠಲನ ದಯವಾಗುವ ತನಕ || ೩ ||

## ೪೦೨ ರಾಗ ಸೌರಾಷ್ಟ್ರ ಆದಿತಾಳ

ವೃಂದಾವನವೆ ಮಂದಿರವಾಗಿಹ | ಇಂದಿರೆ ಶ್ರೀತುಲಸಿ || ಪ || ನಮ್ಮ | ನಂದನ ಮುಕುಂದಗೆ ಪ್ರಿಯವಾದ | ಚೆಂದಾದ ಶ್ರೀತುಲಸಿ ||ಅ|| ತುಲಸಿ ವನದಲ್ಲಿ ಹರಿ ಇಹನೆಂಬೋದು | ಶ್ರುತಿ ಸಾರುತಿದೆ ಕೇಳಿ || ತುಲಸೀ ದರ್ಶನದಿಂದ ದುರಿತಗಳೆಲ್ಲ | ಹರಿದು ಹೋಗೋದು ಕೇಳಿ || ತುಲಸೀ ಸ್ಪರ್ಶನದಿಂದ ದೇಹ ಪಾವನವೆಂದು | ನೀವೆಲ್ಲ ತಿಳಿದು ಕೇಳಿ | ತುಲಸೀ ಸ್ಮರಣೆ ಮಾಡಿ ಸಕಲಿಷ್ಟವ ಪಡೆದು | ಸುಖದಲಿ ನೀವು ಬಾಳಿ ||೧|| ಮೂಲ ಮೃತ್ತಿಕೆಯನ್ನು ಧರಿಸಿದ ಮಾತ್ರದಿ | ಮೂರು ಲೋಕ ವಶವಾಹುದು | ಮಾಲೆಗಳನೆ ಕೊರಳಲ್ಲಿಟ್ಟ ಮನುಜಗೆ | ಮುಕ್ತಿಮಾರ್ಗವನೀವುದು || ಕಾಲ ಕಾಲಗಳಲ್ಲಿ ಮಾಡಿದ ದುಷ್ಕರ್ಮ | ಕಳೆದು ಬಿಸುಟು ಹೋಗೋದು | ಕಾಲನ ದೂತರ ಅಟ್ಟಿ ಕೈವಲ್ಯವ | ಲೀಲೆಯ ತೋರುವುದು || ೨ || ಧರೆಯೊಳು ಸುಜನರ ಮರೆಯದೆ ಸಲಹುವ | ವರ ಲಕ್ಷ್ಮೀಶ್ರೀತುಲಸಿ || ಪರಮ ಭಕ್ತರ ಪಾಪಗಳೆಲ್ಲ ತರಿದು | ಪಾವನ ಮಾಡುವಳು ತುಲಸಿ || ಸಿರಿ ಆಯು ಪುತ್ರಾದಿ ಸಂಪತ್ತುಗಳನಿತ್ತು | ಹರುಷವೀವಳು ತುಲಸಿ | ಪುರಂದರವಿಠಲನ್ನ ಚರಣಕಮಲದ | ಸ್ಮರಣೆ ಕೊಡುವಳು ತುಲಸಿ ||೩||

## ೪೦೩ ರಾಗ ಆನಂದಭೈರವಿ ಅಟತಾಳ

ಪೊಂಗೊಳಲನೂದುತಿಹ ಯದುಕುಲೋತ್ತುಂಗ ||ಪ|| ತಿಂಗಳ ಪಾಂಗನೆ ರಜತಶುಭಾಂಗ ||ಅ|| ಸಲಿಲಚರ ಧರಾಧರನು ಇಳೆಧರೋಜ್ಜ್ವಲನೇತ್ರ |

ಬಲಿಯ ಬೇಡಿದನು ಭೃಗುಕುಲದಿ ಜನಿಸಿ ॥ ಬಲಿದ ಬಿಲ್ಲನೆ ಮುರಿದು ಲಲನೆಯರ ಒಳಗಾಗಿ । ಹೂಳರ ಸಂಭೋಧಿಸಿದ ಚೆಲುವ ಹಯವದನ ॥೧॥ ಬಿಡದೆ ನೋಡಿದ ಬೆಟ್ಟದಡಿಗೆ ಬೆನ್ನನು ಕೊಟ್ಟ । ಅಡವಿಕಿಟಿ ಕಡು ಕೋಪಿ ಕೊಡೆಯ ಪಿಡಿದ ॥ ಕೊಡಲಿಕರ ಜಡೆ ಧರಿಸಿದ ಗಿಡ ಕಿತ್ತು ತಾ ಕೆಡಹಿ । ಹುಡುಗಿಯರ ಜಾರ ಸಡಗರದಿ ತೇಜಿಯನೇರ್ದ ॥೨॥ ವಾರಿಚರ ಕೂರ್ಮಾವತಾರ ಸೂಕರ ಕ್ರೂರ । ಧಾರಣಿಯನಳೆದು ಶೂರರನು ಗೆಲಿದು ॥ ನೀರಜಾಕ್ಷಿಯ ತಂದು ನಾರೀಪ್ರಿಯ ವ್ರತವಳಿದು । ಏರಿದನು ಹಯವ ಪುರಂದರವಿಠಲ ಜಗದೊಡೆಯ ॥೩॥

### ೪೦೪ ರಾಗ ಧನ್ಯಾಸಿ ಆದಿತಾಳ

ನಾರಾಯಣ ಗೋವಿಂದ । ಹರಿ । ನಾರಾಯಣ ಗೋವಿಂದ ॥ ಪ ॥ ನಾರಾಯಣ ಗೋವಿಂದ ಮುಕುಂದ । ಪರತರ ಪರಮಾನಂದ ॥ ಅ ॥ ಮೊದಲು ಮತ್ಸ್ಯನಾಗಿ ಉದಿಸಿ ಸೋಮನ । ಸದೆದು ವೇದಗಳ ತಂದ ॥ ॥ ೧ ॥ ಮಂದರಗಿರಿ ಸಿಂಧುವಿನೊಳಮೃತ । ತಂದು ಭಕ್ತರಿಗುಣಲೆಂದ ॥ ॥ ೨ ॥ ಭೂಮಿಯ ಕದ್ದ ಖಳನ ಮರ್ದಿಸಿ । ಆ ಮಹಾ ಸತಿಯಳ ತಂದ ॥ ॥ ೩ ॥ ದುರುಳ ಹಿರಣ್ಯಕನ ಕರುಳ ಬಗಿದು ತನ್ನ । ಕೊರಳೊಳಿಟ್ಟ ಬಗೆಯಿಂದ ॥ ೪ ॥ ಪುಟ್ಟನಾಗಿ ಮಹಿಕೊಟ್ಟ ಬಲಿಯ ತಲೆ । ಮೆಟ್ಟಿ ತುಳಿದ ಬಗೆಯಿಂದ ॥ ೫ ॥ ಧಾತ್ರಿಯೊಳು ಮುನಿಪುತ್ರನಾಗಿ ಬಂದು । ಕ್ಷತ್ರಿಯರೆಲ್ಲರ ಕೊಂದ ॥೬॥ ವಡದಿಗಾಗಿ ಸರಗಡಲನೆ ಕಟ್ಟಿ । ಹಿಡಿದು ರಾವಣನ ಕೊಂದ ॥೭॥ ಗೋಕುಲದಿ ಹುಟ್ಟಿ ಗೋವ್ಗಳ ಕಾಯ್ದ । ಗೋಪಾಲಕೃಷ್ಣ ತಾ ಬಂದ ॥ ೮ ॥ ಛಲದಲಿ ತ್ರಿಪುರರ ಸತಿಯರ ವ್ರತವ । ಫಲವನಳಿದ ಬಗೆಯಿಂದ ॥೯॥ ಧರೆಯೊಳು ಪರಮ ನೀಚರ ಸವರೆ ಕು । ದುರೆಯೇರಿದ ಕಲಿ ಚಂದ ॥ ೧೦ ॥ ದೋಷದೂರ ಶ್ರೀಪುರಂದರವಿಠಲ । ಪೋಷಕಭಕ್ತಸುವೃಂದ ॥ ೧೧ ॥

### ೪೦೫ ರಾಗ ಶಂಕರಾಭರಣ ಆದಿತಾಳ

ನರಸಿಂಹನ ಪಾದಭಜನೆಯ ಮಾಡೊ ॥ ಪ ॥ ನರಸಿಂಹನ ಪಾದ। ಭಜನೆಯ ಮಾಡಲು । ದುರಿತಪರ್ವತವ ಖಂ। ಡಿಸುವ ಕುಲಿಶದಂತೆ ॥ಅ॥

ತರಳನ ಮೊರೆ ಕೇಳಿ । ತ್ವರಿತದಿಂದಲಿ ಬಂದು ॥ ದುರುಳನ ಕರುಳ ತನ್ನ । ಕೊರಳಲ್ಲಿ ಧರಿಸಿದ ॥೧॥ ಸುರರೆಲ್ಲ ನಡುಗಲು । ಸಿರಿದೇವಿ ಮೊರೆಯಿಡೆ ॥ ವರ ಕಂಭದಿಂ ಬಂದ । ಸಿರಿನರಹರಿ ನಮ್ಮ ॥ ೨ ॥ ಹರವಿರಿಂಚಾದ್ಯರು । ಕರವೆತ್ತಿ ಮುಗಿಯಲು ॥ ಪರಮಶಾಂತನಾದ ಶ್ರೀ । ಪುರಂದರವಿಠಲ ॥೩॥

## ೪೦೬ ರಾಗ ನವರೋಜು ಛಾಪುತಾಳ

ಮಂದರಾಧರ ದೇವ । ಮರೆಯ ಹೊಕ್ಕರ ಕಾವ ॥ ಪ ॥ ಮಂದಾಕಿನಿ ಪಿತ । ಮದಸತಿಯರ ದೃತ ॥ ಸುಂದರ ಶಶಿವದನಾ । ರಂಗಯ್ಯ ॥ಅ॥ ಕಣ್ಣ ನೋಟದಿ ಚೆಲುವಾ । ಕಮಠರೂಪದಲಿರುವಾ । ಹೆಣ್ಣಿನಾ ಮೊರೆಯ ಕೇಳ್ದ । ಹಿರಣ್ಯಕನುರವ ಸೀಳ್ದ । ಮಣ್ಣು ಬೇಡಿ ಬೆಳೆದ್ಯೋ ರಂಗಯ್ಯ ॥ ಹೊನ್ನ ಕೊಡಲಿ ಹಿಡಿದು । ಹತ್ತು ಶಿರವ ಕಡಿದು ॥ ಚಿಣ್ಣ ಗೋವಳನಾಗಿ। ಚಪಲೆಯರ ವ್ರತ ಕೆಡಿಸಿ । ಚೆನ್ನರಾವುತನಾದ್ಯೋ ರಂಗಯ್ಯ ॥ ೧ ॥ ಲೋಚನ ಬಿಡುತಲಿ ಬಂದು । ಗಿರಿ ತಾಳಿದೆ ಬೆನ್ನಲಿ ನಿಂದು । ಭೂಚೋರನ ಕೊಂದು । ಬಾಲ ಕರೆಯಲು ಬಂದು । ಯಾಚಕ ನೀನಾದ್ಯೋ ರಂಗಯ್ಯ ॥ ಸೂತಜನಾ ಸುತಗೊಲಿದು । ಶರಧಿ ಕಟ್ಟಿಸಿ ಮೆರೆದು । ಕೀಚಕಹತಗೇಯ। ಖೇಚರಪುರವಾಸ। ನೀಚಜನರ ತರಿದ್ಯೋ ರಂಗಯ್ಯ ॥೨॥ ವನಧಿ ಚರಿಸಿ ಬಂದು ।ಘನಧರೆಯೆತ್ತಿ ವರಹಾ। ಘನ ಕಂಬಂದಿಂದುದಯಿಸಿ । ಬಲಿಯುವುರಿದು ತಾ । ಜನನಿಯರ ಶಿರ ತರಿದ್ಯೋ ರಂಗಯ್ಯ ॥ ಹನುಮವಂದಿತ ಪಾದ । ಹರುಷ ಪಾಂಡವವರದ । ವನಿತೆಯರ ವ್ರತ ವಳಿದು । ಮಹಾ ಕಲ್ಕಿಯಾದ್ಯೋ । ಘನಪುರಂದರವಿಠಲ ರಂಗಯ್ಯ ॥೩॥

## ೪೦೭ ರಾಗ ಮುಖಾರಿ ಝಂಪೆತಾಳ

ಚಿತ್ತಶುದ್ಧಿಯಿಲ್ಲದ ಮನುಜ ಜ್ಞಾನಿಯೇ ॥ ಪ ॥ ಪಾಪ । ಹೊತ್ತು ಕಳೆಯದಂಥ ನರ ಮನುಜನೇ ॥ ಅ ॥ ಬಂಧನದೊಳಿಹ ವ್ಯಾಘ್ರ ಅದು ಬಹು ತಪಸ್ವಿಯೇ । ಸಿಂಧುವಿನೊಳಿಹ ದೊರೆ ಸಿತಕರಣವೆ । । ಅಂಧಕನು ಕಣ್ಣು ಮುಚ್ಚಲು ಯೋಗಸಾಧನವೆ । ಮಂದಮತಿ ಸುಮ್ಮನಿರಲದು

ವಶೌನವೆ ||೧|| ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೆ | ಕಾನನದೊಳಿಹ ಕಾಗೆ ವನವಾಸಿಯೆ || ಗಾಣ ತಿರುಗಲೆತ್ತು ದೇಶಯಾತ್ರಿಯೆನಬಹುದೆ | ಮೀನದಾಸೆಯ ಬಕನ ಸ್ಥಿತಿ ಧ್ಯಾನವೆ ||೨|| ತೋಳ ಅಡವಿಯ ತಿರುಗಲು ಅದು ದಿಗಂಬರನೆ | ಗಾಳಿಯುಂಬುವ ಭುಜಗ ಉಪವಾಸಿಯೆ || ಆಲದ ಮರಕೆ ಜಡೆಯಿರಲು ಅದು ತಪಸ್ವಿಯೆ | ಕಾಲದಲ್ಲಿಹ ಗೂಗೆ ಹಿರಿಯಾಗಬಹುದೆ || ೩ || ಮಾರಿ ಮನೆಯೊಳಗಿರಲು ಮತ್ತೆ ಸಹಕಾರಿಯೇ | ಊರ ಒಳಗಿನ ಕಳ್ಳ ಅವನೆಂಟನೆ|| ಜಾರೆಯೆನಿಸುವವಳು ಕುಲವನಿತಿಯೇ ಸಂ | ಸಾರದೊಳು ಮಗ್ನನಾದವ ಜ್ಞಾನಿಯೆ ||೪|| ಮಂಡೂಕ ಕೂಗಲದು ಮಂತ್ರವೆಂದೆನಬಹುದೆ | ಗುಂಡು ನೀರೊಳಗಿರಲು ಅದು ಸ್ನಾನವೆ || ಪುಂಡರೀಕಾಕ್ಷ ಸಿರಿಪುರಂದರವಿಠಲನ್ನ | ಕಂಡು ಭಜಿಸವ ಪಾಪಿ ಅವ ಮನುಜನೆ || ೫ ||

### ೪೦೮ ರಾಗ ದೇಶೀಯತೋಡಿ ಆದಿತಾಳ

ಅಳುವುದೇತಕೋ ರಂಗ | ಅತ್ತರಂಜಿಪ ಗುಮ್ಮ || ನೀ ||ಪ|| ಹುಟ್ಟಿದೇಳು ದಿವಸದಲಿ | ದುಷ್ಟ ಪೂತನಿಯ ಕೊಂದೆ || ಮುಟ್ಟಿ ವಿಷದ ಮೊಲೆಯುಂಡ ಕಾರಣ | ದೃಷ್ಟಿ ತಾಗಿತೆ ನಿನಗೆ ರಂಗಯ್ಯ ||೧|| ತುರುವ ಕಾಯಲು ಪೋಗಿ | ಭರದೀಂದ್ರ ಮಳೆಗರೆಯೆ || ಬೆರಳಲ್ಲಿ ಬೆಟ್ಟವ ನೆಗಹಿದ ಕಾರಣ | ಬೆರಳು ಉಳುಕಿತೆ ನಿನಗೆ ರಂಗಯ್ಯ ||೨|| ಬಾಲಕತನದಲ್ಲಿ ಗೋ | ಪಾಲರೊಡನಾಡಿ || ಕಾಳಿಯಮಡುವ ಕಲಕಿದ ಕಾರಣ | ಕಾಲು ನೊಂದಿತೆ ನಿನಗೆ ರಂಗಯ್ಯ || ೩ || ವಸುದೇವಸುತನಾಗಿ | ಅಸುರಮಲ್ಲರ ಕೊಂದು || ಕಸುವಿನ ಕಂಸನ ಕೊಂದ ಕಾರಣ | ಕಿಸರು ತಾಗಿತೆ ನಿನಗೆ ರಂಗಯ್ಯ || ೪ || ಶರಣು ವೇಲಾಪುರದ | ದೊರೆಯೆ ಚೆನ್ನಿಗರಾಯ || ಶರಣರ ಸಲಹುವ ಕರುಣಾನಿಧಿಯೆ | ವರದ ಪುರಂದರವಿಟ್ಠಲರಾಯ ||೫||

### ೪೦೯ ರಾಗ ರೇಗುಪ್ತಿ ಆದಿತಾಳ

ಧನ್ಯನಾದೆ ನಾ | ನೀ ಜಗದೊಳು | ಧನ್ಯನಾದೆ ನಾ || ಪ || ಪನ್ನಗಶಯನನ ಕಣ್ಣಿನಿಂದಲಿ ಕಂಡು | ಧನ್ಯನಾದೆ ನಾ ||ಅ|| ಉನ್ನತ ಮಹಿಮ

ಪಃ । ಪನ್ನ ಚರಿತ ಸುರಸನ್ನುತ ಚರಣನ॥ ಪನ್ನಗಾರಿವಾ । ಹನ್ನ ಪುರುಷ ರನ್ನ । ಚೆನ್ನಿಗ ಶ್ರೀರಂಗನ ಮಹಿಮೆಯ ಕಂಡು ॥೧॥ ದೇವ ದೇವೋತ್ತಮ। ಕಾವ ನಮ್ಮ ಈಗ। ಭಾವಜನಯ್ಯನು ॥ ಕಾವೇರಿತೀರದ । ಉತ್ತಮ ಕ್ಷೇತ್ರದೊಳು । ಪಾವನ ನರಸಿಂಗನ ಕಂಡು ॥ ೨ ॥ ಭಾನುಕೋಟಿಪ್ರಭ। ಸ್ವಾನಂದಪೂರ್ಣನ । ದೀನರಕ್ಷಕನ ॥ ಸಿರಿಪುರಂದರ । ವಿಠಲ ಚೆನ್ನಿಗ । ಶ್ರೀರಂಗನ ಮಹಿಮೆಯ ಕಂಡು ॥ ಧನ್ಯನಾದೆ ನಾ ॥೩॥

## ೪೧೦ ರಾಗ ಮಧ್ಯಮಾವತಿ ತ್ರಿಪುಟತಾಳ

ಭಾರತೀಶನೆ ಎನ್ನ । ಭವಜನಿತ ದುಃಖವ । ದೂರಮಾಡುತಿ ಘನ್ನ । ಸನ್ನುತವರೇಣ್ಯ ॥ ಪ ॥ ವಾರವಾರದಿ ಭಜಿಪೆ ನಿನ್ನ ಮು । ರಾರಿ ವಾರಿಜ ಪದದಿ ಎನ್ನ ಮನ । ಸೇರಿ ಶಾಂತದಿ ಮುಕುತಿಪಥವನು । ತೋರಿ ಪೊರೆ ಕರುಣಾಳು ಉತ್ತಮ ॥ಅ॥ ವಾಯುಸುತ ಹೇ ಧೀರ । ಶ್ರೀರಾಮಕಿಂಕರ । ರಾಯಮಹಾದುರ್ಧರ । ಸದ್ಗುಣಗಣಾಂಬುಧಿ । ಮಾಯದನುಜವಿದಾರ॥ ಸುಚರಿತ್ರಶೂರ ॥ ತೋಯಜಾಂಬಕನಾ ಸತಿಯ ಖಳ । ನಾಯಕನು ಬಂದೊಯ್ಯೆ ಕಪಟದಿ । ಜೀಯನೇ ವಾರಿಧಿಯ ಲಂಘಿಸಿ। ಕಾಯಜನ ಪಡೆ ದಾಕೆಗುಂಗುರ । ಈಯಲಿತ್ತಲು ವನದೊಳಿಹ ಖಳ । ನಾಯಕರು ಬಂದ್ಹಿಡಿಯೆ ಅವರಾ । ಕಾಯ ಖಂಡಿಸಿ ತಿರುಗಿ ದಶರಥ । ಪ್ರಿಯನಿಗೆ ಸುಕ್ಷೇಮ ತಿಳುಹಿದ ॥೧॥ ಕುರುಕುಲಾಂಬುಧಿಸೋಮ। ಎಂದೆಣಿಸಿದನೆ ಮಹಾ। ಗುರು ಪರಾಕ್ರಮ ಭೀಮ । ದ್ರೌಪದಿಮನೋಜಯ । ಕರುಣವಾರಿಧಿಸೋಮ ॥ ರಣರಂಗಧಾಮ ॥ ದುರುಳ ದುರ್ಯೋಧನನು ನಿಮ್ಮನು । ಅರಗಿನರಮನೆಯಲ್ಲಿ ಪೊಗಿಸಲು । ಹಿರಿಯ ಧರ್ಮಾದಿಗಳ ಕೈಗೊಂ । ಡ್ಹರುಷದಿಂದಲಿ ತೆರಳಿಬಂದಾ । ವರಹಿಡಿಂಬಕ ಬಕಮುಖಾದ್ಯರ । ತರಿದು ಯದುಕುಲ ಜಾತ ಕೃಷ್ಣನ ॥ ಪರಮಕಿಂಕರನಾಗಿ ಸತತದಿ । ಮೆರೆವ ಪಾಂಡವಜಾತ ಖ್ಯಾತ॥೨॥ ಮಧ್ಯಗೇಹನೊಳುದಿಸಿ। ವರವೀರವೈಷ್ಣವ। ಪದ್ಧತಿಗಳನುಸರಿಸಿ। ಮಾಯ್ಗಳ ಕುಭಾಷ್ಯವ । ಗೆದ್ದು ಗುರುವೆಂದೆನಿಸಿ। ಮಧ್ವಾಖ್ಯನೆನಿಸಿ॥ ಸಿದ್ಧ ಮೂರುತಿ ಹರಿಯನುಗ್ರಹ । ಬದ್ಧರಾದಾ ಜನಕೆ ಭೇದವ। ತಿದ್ದಿ ತಿಳುಹಿದ

ಮುನಿವರೇಂದ್ರ ಪ್ರ ಸಿದ್ಧವಾದಪರಾಜಿತನೆ ಎ। ಸ್ನದ್ಧರಿಸುತಲಿ ಜೆಂದ ದಲಿ ಪ್ರ। ಸಿದ್ಧ ವರ್ಣಸಿಗಿರಿಯಲಿ ನಿಂದಿಹ। ಮಧ್ವಪತಿ ಪುರಂದರವಿಠಲ ದೂತ। ಮುದ್ದು ಪ್ಲವಗ ಧಿಪರ ಶೇಖರ ||೩||

## ೪೧೧ ರಾಗ ಪೂರ್ವಿ ಅಟತಾಳ

ಭಕುತರಿ ಸೇವೆಯು ಕೊಡುಕಂಡ್ಯ। ನಿನ್ನ। ಭಕುತರ ಸಂಗವ ಕೊಡು ಕಂಡ್ಯ ಹರಿಯೆ ||ಪ|| ಶ್ರೀತುಲಸಿ ಪದುಮಾಕ್ಷದ ಸರವಿಟ್ಟು। ಪ್ರೀತಿ ಯಿಂದ ಏಕಾದಶಿಯ ಮಾಡಿ|| ಚಾತುರ್ಜಾವದ ಹೊತ್ತು ಜಾಗರಗಳ ಮಾಡಿ|। ಪೂತರೊಳಾಡುತಲಿಪ್ಪ ಶ್ರೀಹರಿಯ ||೧|| ಶಂಖಚಕ್ರಂಗಳನೊತ್ತಿ ಕೊಂಡು। ಶಂಖಚಕ್ರಧರನೆಂಜಲನುಂಡು || ಕಿಂಕರತರ ದೇಹ ಪರವಶ ವಾಗಲ್। ಝೇಂಕರಿಸುತ ಜರೆದಾಡುತ ನಲಿವ ||೨|| ದ್ವಾದಶನಾಮಂ ಗಳನುಚ್ಚರಿಸುತ। ದ್ವಾದಶನಾಮಂಗಳಿಟ್ಟು ಕೊಂಡು || ದ್ವಾದಶಿ ಸಾಧಿಸಿ ಪಾರಣೆಗಳ ಮಾಡಿ। ದ್ವಾದಶಮೂರ್ತಿಯ ಮನದಲಿ ನೆನೆವ ||೩|| ಹರಿಗೆ ಸಿರಿ ರಾಣೀವಾಸಿಯೆಂದೆಂಬ ಶ್ರೀ। ಹರಗೆ ಬೊಮ್ಮ ಕುಮಾರನೆಂದೆಂಬ || ಹರಿಗೆ ಹರನು ಮೊಮ್ಮಗನೆಂದೆಂಬ ಶ್ರೀ। ಹರಿಗೆ ಸುರರಾಳುಗಳೆಂದೆಂಬ || ||೪|| ಆಪತ್ತು ಬಂದರೆ ಸಂಪತ್ತು ಬಂದರೆ| ಲೇಪಿಸಿಕೊಂಡಿರದೆ ನಮ್ಮ||ಶ್ರೀ ಪುರಂದರವಿಠಲ ಚರಣವೆಂಬ। ಪಾದಪದುಮವ ಮನದಲ್ಲಿ ನೆನೆವರ ||೫||

## ೪೧೨ ರಾಗ ಆನಂದಭೈರವಿ ತ್ರಿಪುಟತಾಳ

ಗೋವಿಂದಾ ನಮೋ ಗೋವಿಂದಾ ನಮೋ। ಗೋವಿಂದಾ ನಾರಾ ಯಣ || ಗೋವರ್ಧನ ಗಿರಿಯನೆತ್ತಿದ। ಗೋವಿಂದಾ ನಮ್ಮ ರಕ್ಷಿಸೈ ||ಪ|| ಮಂಚ ಬಾರದು ಮಡದಿ ಬಾರಳು। ಕಂಚು ಕನ್ನಡಿ ಬಾರದು || ಸಂಚಿ ತಾರ್ಥದ ದ್ರವ್ಯ ಬಾರದು। ಮುಂಚೆ ಮಾಡಿದ ಧರ್ಮವೆ ||೧|| ಅರ್ಥವ್ಯಾ ರಿಗೆ ಪುತ್ರರ್‍ಯಾರಿಗೆ। ಮಿತ್ರ ಬಾಂಧವರ್‍ಯಾರಿಗೆ|| ಕರ್ತು ಯಮನವರೆಳೆದು ಒಯ್ವಾಗ। ಅರ್ಥಪುತ್ರರು ಕಾಯ್ವರೆ || ೨ || ತಂದು ಬಂದರೆ ತನ್ನ ಪುರು ಷನ। ಹಸಿದು ಬಳಲಿದಿರೆಂಬಳು || ಒಂದು ದಿವಸವು ತಾರದಿದ್ದರೆ। ಹಂದಿ ನಾಯಂತೆ ಕೆಲೆವಳು || ೩ || ಪ್ರಾಣವಲ್ಲಭೆ ತನ್ನ ಪುರುಷನ। ಕಾಣಬೇ

ನಿಲ್ಲಲಾರಳು ॥ ಪ್ರಾಣ ಪೋಗಲು ಮುಟ್ಟಲಂಜ್ವರು । ಜಾಣೆ ಕರೆದರು ಬಾರಳು ॥೪॥ ಉಂಟುಕಾಲಕೆ ನೆಂಟರಿಷ್ಟರು । ಬಂಟರಾಗಿ ಕಾಯ್ವರು ॥ ಕಂಟಕೆಮನೋರು ಬಂದು ಎಳೆವಾಗ । ನೆಂಟರಿಷ್ಟರು ಬಾರರು ॥ ೫ ॥ ಒಡವೆಯರಸಿಗೆ ಒಡಲು ಅಗ್ನಿಗೆ । ಮಡದಿ ಮತ್ತೊಬ್ಬ ಚೆಲುವಗೆ ॥ ಬಡಿದೆಳೆದು ಯಮನವರು ಒಯ್ವಾಗ । ಎಡವಿ ಬಿದ್ದಿತು ನಾಲಿಗೆ॥ ೬ ॥ ದಿಟ್ಟತನದಿ ಪುಟ್ಟಸಾಳಿದ ವೃಷ್ಣಿನಂದನಚರಣವ ॥ ಮುಟ್ಟಿ ಭಜಿಸಿರೊ ಸಿರಿ ಪುರಂದರ । ವಿಠ್ಠಲೇಶನ ಪಾದವ ॥೭॥

## ೪೧೩ ರಾಗ ಮಾರವಿ ಝಂಪೆತಾಳ

ನಾರಾಯಣಾಯ ನಮೋ । ನಾರಾಯಣಾಯ ನಮೋ । ನಾರಾಯಣಾಯ ನಮೋ ॥ ಪ ॥ ಹರಿ ಕೃಷ್ಣ ಶರಣೆನಲು ಅದು ನಿಮಗೆ ಲೇಸು । ಹರಿಯ ಕೀರ್ತನೆಗಳನು ಜಗದೊಳಗೆ ಸೂಸು ॥ ಹರಿಭಕ್ತಿಯಿಲ್ಲದರ ಸಂಗಕ್ಕೆ ಹೇಸು । ಹರಿಯ ಮರೆತರೆ ಮುಂದೆ ನರಕವೇ ಹಾಸು ॥ ೧ ॥ ದುರ್ಜನರ ಮನೆಯಲಿಹ ಹಾಲ ಸವಿಯಿಂದ । ಸಜ್ಜನರ ಮನೆಯಲ್ಲಿ ನೀರೆ ಲೇಸೆಂದ ॥ ದುರ್ಜನರ ಒಡನಾಟ ಸಂಸರ್ಗದಿಂದ । ನಿರ್ಜೀವಿಯಾಗಿರುವ ಕಾಡೆ ಲೇಸೆಂದ ॥ ೨ ॥ ಇಂದ್ರಿಯಂಗಳ ಸುಖವ ನೆಚ್ಚದಿರು ಕಂಡ್ಯ । ಇಂದ್ರಾದಿಗಳ ಭವಣೆಯನು ನೋಡಿಕೊಂಡ್ಯ ॥ ಎಂದೆಂದಿಗಿಲ್ಲ ದೇಹವ ಕಳೆವೆ ಕಂಡ್ಯ । ಹಿಂದು ಮುಂದಿನ ಗತಿಯು ತಿಳಿಯದವ ಭಂಡ ॥೩॥ ಎಳೆ ತುಳಸಿ ವನಮಾಲೆ ಧರಿಸಿಕೊಳಬೇಕು । ತಿಲಕೋರ್ಧ್ವಪುಂಡ್ರಂಗಳನು ಹಚ್ಚಲು ಬೇಕು ॥ ನಳಿನನಾಭನ ಸ್ಮರಣೆಯೊಳು ಮುಳುಗಬೇಕು ॥ ಇಳೆಯೊಳಗೆ ವೈಕುಂಠವನು ಸಾರಬೇಕು ॥೪॥ ಸಿರಿವರನ ಭಕ್ತರನು ಸೇವಿಸಲು ಬೇಕು । ಪಿರಿದಾಗಿ ದಾನಧರ್ಮವಾಚರಿಸಬೇಕು ॥ ಧರಣಿ ಪುಣ್ಯಸ್ಥಳವ ಮೆಟ್ಟುತಿರಬೇಕು । ಪುರಂದರವಿಠಲನ್ನ ಸತತ ನೆನೆಬೇಕು ॥೫॥

## ೪೧೪ ರಾಗ ರೇಗುಪ್ತಿ ಅಟತಾಳ

ಆವ ಕುಲವಾದರೇನು ಆವನಾದರೇನು । ಆತ್ಮ । ಭಾವವರಿತ ಮೇಲೆ ॥ ॥ ಪ ॥ ಹಸಿ ಕಬ್ಬು ಡೊಂಕಿರಲು । ಅದರ ರಸ ಡೊಂಕೇನೊ ॥ ವಿಷ

ಯಾಸೆಗಳನೆ ಬಿಟ್ಟು । ಹಸನಾದ ಗುರುಭಕ್ತಿ ಮಾಡೊ ॥ ೧ ॥ ನಾನಾ ವರ್ಣದ ಆಕಳು । ಅದು । ನಾನಾವರ್ಣದ ಕ್ಷೀರವೇನೊ ॥ ಹೀನಕರ್ಮಗಳನು ಬಿಟ್ಟು । ಹಿಗ್ಗಿ । ಜ್ಞಾನ ಒಲಿಸಿರೊ ॥೨॥ ಕುಲದ ಮೇಲೆ ಹೋಗ ಬೇಡ । ಮನುಜ । ಕುಲವಿಲ್ಲ ಜ್ಞಾನಿಗಳಿಗೆ ॥ ವರದ ಪುರಂದರ ವಿಠಲನ । ಪದವ । ಸೇರಿ ಮುಕ್ತನಾಗೊ ॥೩॥

## ೪೧೫ ರಾಗ ಶಂಕರಾಭರಣ ಝಂಪೆತಾಳ

ನೆಚ್ಚಬೇಡ ಪ್ರಾಣಿ ಸಂಸಾರ ಸ್ಥಿರವೆಂ । ದ್ಹುಚ್ಚು ಬುದ್ಧಿಲಿ ನೀನು ಕೆಡಬೇಡ ಕಂಡ್ಯ ॥ ಸ್ವೇಚ್ಛೆಯಿಂದಿರದೆ ಧರ್ಮದಿ ನೀನು ನಡೆ ಕಣ್ಣ । ಮುಚ್ಚಿದ ಮೇಲುಂಟೆ ನರಜನ್ಮ ಸ್ಥಿರವೆಂದು ॥ಪ॥ ನೆಂಟರಿಷ್ಟರು ಬಂಧು ಬಳಗವು ಹರಿ ಕೊಟ್ಟು । ದುಂಟಾಪರೆ ಬಾಚುವರು ॥ ಕಂಚಕ ಬಂದಾಗ ಒಪ್ಪೊತ್ತಿರದು ಕಡೆಗೆ । ಕಂಟೆಯ ತರಿದೊಟ್ಟೆ ಸುಡುವರು ನಿನ್ನ ॥ ೧ ॥ ಅತಿಪ್ರೀತಿಯಿಂದಲಿ ಮದುವ್ಯಾದ ಮೋಹದ। ಸತಿ ನಿನ್ನ ಮರಣಕಾಲದಲ್ಲಿ॥ ಗತಿ ಯಾರು ತನಗೆಂದು ಗೋಳಿಡುವಳಲ್ಲದೆ। ಜೊತೆಯಾಗಿ ನಿನ್ನ ಸಂಗಡ ಬಾಹೋಳಲ್ಲ ॥ ೨ ॥ ಒಂದೊಂದು ಪರಿಯು ಪ್ರೇಮವ ಮಾಡಿ ಸಲಹಿದ । ಕಂದ ನಿನ್ನವಸಾನಕಾಲದಲ್ಲಿ ॥ ಮುಂದೆ ಸಂಸಾರ ನಡೆವ ಉಪಾಯವು ಆವು । ದೆಂದು ಚಿಂತಿಸುವ ಸಂಗಡ ಬಾಹೋನಲ್ಲ ॥೩॥ ಅಷ್ಟಕಂಭವನಿಕ್ಕಿ ಚೌಕದುಪ್ಪರಿಗೆಯ। ಕಟ್ಟಿದ ಮನೆಯು ಇದ್ದಲ್ಲೆ ಇಹುದು॥ ಹೊಟ್ಟೆತುಂಬ ಉಣದೆ ಅರ್ಥವ ಗಳಿಸಿದ್ದು । ಒಟ್ಟೆಟ್ಟಲ್ಲಿರದೆ ಸಂಗಡ ಬಾಹೋದಲ್ಲ ॥೪॥ ಇಂತು ಒಂದೊಂದರಿಂದಲೂ ಪ್ರಯೋಜನವಿಲ್ಲ । ಅಂತ್ಯಕಾಲಕೆ ಒಂದೂ ಬಾಹೋದಲ್ಲ ॥ ಕಂತುಜಕ ಸಿರಿಪುರಂದರವಿಠಲನ । ಸಂತತ ಚಿಂತೆಯೊಳಿರು ಕಂಡ್ಯ ಮನುಜ ॥೫॥

## ೪೧೬ ರಾಗ ಕೇದಾರಗೌಳ ಝಂಪೆತಾಳ

ನಿನ್ನನೇ ನಂಬಿದೆನು ಸಲಹಯ್ಯ । ಎನ್ನ ಗುಣದೋಷಗಳ ಎಣಿಸ ಬೇಡಯ್ಯ ॥ಪ॥ ಆಸೆಯೆಂಬುದು ಅಜನ ಲೋಕಕ್ಕೆ ಮುಟ್ಟುತಿದೆ । ಬೇಸ

ರದೆ ಸ್ತ್ರೀಯರೊಳು ಬುದ್ಧಿಯೆನಗೆ ॥ ವಾಸುದೇವನೆ ನಿನ್ನ ಧ್ಯಾನ ಮಾಡಿದವನಲ್ಲ । ಕೇಶವಾ ಎನ್ನ ಕ್ಲೇಶಗಳ ಬಿಡಿಸಯ್ಯ ॥೧॥ ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು । ಮೇಲೆ ಯೌವನದಿಂದನರಿಯದಾದೆ॥ ಜೋಲುವ ಸಂಸಾರದಲಿ ಸಿಕ್ಕಿದೆನು ಹರಿಯೆ । ಪಾಲಿಸೋ ಪರಮಾತ್ಮ ಭಕುತಿಯನು ಕೊಟ್ಟು ॥ ೨ ॥ ಈ ತೆರವಲಿ ಇಂದಿರೇಶ ಕಾಲವ ಕಳೆದೆ । ಭೀತ ಮೋಹದಲಿ ಮುನ್ನರಿಯದಾದೆ ॥ ಮಾತೆ ಶಿಶುವನು ಕರೆದು ಮನ್ನಿಸುವ ತೆರನಂತೆ । ದಾತ ಪುರಂದರವಿಠಲ ಸಲಹೊ ದಯಮಾಡಿ ॥೩॥

## ೪೧೭ ರಾಗ ಜಂಜೂಟಿ ಆದಿತಾಳ

ರಾಮ ರಾಮ ರಾಮ ರಾಮ । ರಾಮ ಎನ್ನಿರೋ ॥ ಸೀತಾ ॥ ಪ ॥ ನೇಮದಿಂದ ಭಜಿಸುವವರ । ಕಾಮಿತಗಳ ಕೊಡುವ ನಾಮ ॥ಅ॥ ಭರದಿ ಯಮನ ಭಟರು ಬಂದು । ಹೊರಡು ಎಂದು ಮೆಟ್ಟಿ ತುಳಿದು ॥ ಕೊರಳಿಗಾತ್ಮ ಸೇರಿದಾಗ । ಹರಿಯ ಧ್ಯಾನ ಬಾರದಯ್ಯ ॥೧॥ ಇಂದ್ರಿಯಂಗಳೆಲ್ಲ ಕೂಡಿ । ಬಂದು ತನುವ ಮುಸುಕಿದಾಗ॥ ಸಿಂಧುಸುತೆಯ ಪತಿಯ ನಾಮ ಅಂದಿಗೆಒದಗಲರಿಯದಯ್ಯ ॥೨॥ ಶ್ವಾಸಖಾಸವೆರಡು ಕಂಠ । ವಾಸವಾಗಿ ಸಿಲುಕಿದಾಗ ॥ ವಾಸುದೇವ ಕೃಷ್ಣನೆಂದು । ಆ ಸಮಯಕ್ಕೊದಗದಯ್ಯ ॥ ॥೩॥ ಶೃಂಗಾರದ ದೇಹವೆಲ್ಲ । ಅಂಗಬಡಿದು ಮುರಿದು ಬಿದ್ದು ॥ ಕಂಗಳಿಗಾತ್ಮ ಸೇರಿದಾಗ ಶ್ರೀ । ರಂಗನ ನಾಮ ಒದಗದಯ್ಯ ॥ ೪ ॥ ವಾತಪಿತ್ತವೆರಡು ಕೂಡಿ । ಈ ತನುವನಾವರಿಸಿ ॥ ಧಾತುಗುಂದಿದಾಗ ರಘು । ನಾಥ ಧ್ಯಾನ ಒದಗದಯ್ಯ ॥ ೫ ॥ ಕಲ್ಲುಮರನಾಗಿ ಜ್ಞಾನ । ವಿಲ್ಲದಾಗ ಮರಣವೊದಗೆ ॥ ಫುಲ್ಲನಾಭ ಕೃಷ್ಣನೆಂಬ । ಸೊಲ್ಲು ಬಾಯಿಗೊದಗದಯ್ಯ ॥ ೬ ॥ ಭ್ರಷ್ಟ ಜನ್ಮದಲ್ಲಿ ಬಂದು ದುಷ್ಟಕರ್ಮಂಗಳನೆ ಮಾಡಿ ॥ ಬಿಟ್ಟುಹೋಗ್ವ ಸಮಯ ಪುರಂದರ । ವಿಠ್ಠಲ ನಾಮ ಒದಗದಯ್ಯ ॥ ೭ ॥

## ೪೧೮ ರಾಗ ಖರಹರಪ್ರಿಯ ಛಾಪುತಾಳ

ಏಕೆ ಚಿಂತಿಪೆ ಬರಿದೆ ನೀ । ವಿಧಿ ಬರೆದ । ವಾಕು ತಪ್ಪದು ಪಣೆಯೊಳು॥ ಮರುಳೆ ॥ ಪ ॥ ಹುಟ್ಟಲಿಕೆ ಮೊದಲೆ ತಾಯ । ಮೊಲೆಯೊಳಗೆ । ಇಟ್ಟ

ದ್ದೆಯೋ ಕ್ಷೀರವ ॥ ತೊಟ್ಟಿಲೊಳು ಮಲಗುವಾಗ । ಗಳಿಸಿ ನೀ । ಇಟ್ಟು ಕೊಂಡುಣುತಿದ್ದೆಯ । ಮರುಳೆ ॥ ೧ ॥ ಉರಗ ವೃಶ್ಚಿಕ ಪಾವಕ । ಹುಲಿ ಸಿಂಹ । ಕರಿಯರಸು ಚೋರಭಯವು ॥ ಹರಿಯಾಜ್ಞೆಯಿಂದಲ್ಲದೆ । ಇವು ಇನ್ನು । ಶರಧಿ ಪೊಕ್ಕರು ಬಿಡುವುದೆ । ಮರುಳೆ ॥೨॥ ಇಂತು ಸುಖದುಃಖ ಗಳಲಿ । ಬಳಲಿ ನೀ। ಭ್ರಾಂತನಾಗಲು ಬೇಡವೊ॥ ಸಂತೋಷದಿಂದರ್ಚಿಸಿ। ಭಜಿಸು ನಿ । ಶ್ಚಿಂತ ಪುರಂದರವಿಠಲನ । ಮರುಳೆ ॥೩॥

## ೪೧೯ ರಾಗ ಶ್ರೀರಾಗ ಅಟತಾಳ

ಪಾಲಿಸೆ ಎನ್ನ ಶ್ರೀಮಹಾಲಕ್ಷ್ಮಿ । ಪಾಲಿಸೆ ಎನ್ನನು ಪಾಲಾಬ್ಧಿ ಸಂಜಾತೆ ॥ಪ॥ ಲಲಿತಾಂಗಿ ಶುಭೆ ದೇವಿ ಮಂಗಳೆ ದೇವಿ ॥ಅ॥ ವೇದಾಭಿ ಮಾನಿ । ಸಾರಸಾಕ್ಷಿ । ಶ್ರೀಧರರಮಣಿ ॥ ಕಾಮುಕೊ ನಿನ್ನಯ ಪಾದ ಸೇವಕರನ್ನು । ಆದಿಶಕ್ತಿ ಸರ್ವಾಧಾರೆ ಗುಣಪೂರ್ಣೆ ॥ ೧ ॥ ದಯದಿಂದ ನೋಡೆ । ಭಜಿಪ ಭಕ್ತರ । ಭಯ ದೂರ ಮಾಡೆ ॥ ದಯಪಾಲಿಸೆ ಮಾತೆ ತ್ರೈಲೋಕ್ಯ ವಿಖ್ಯಾತೆ । ಜಯದೇವಿ ಸುವ್ರತೆ ಹಯವದನನ ಪ್ರೀತೆ ॥೨॥ ನೀನಲ್ಲದನ್ಯ । ರಕ್ಷಿಪರನು । ಕಾಣೆ ನಾ ಮುನ್ನ ॥ ದಾನವಾಂತಕ ಸಿರಿ ಪುರಂದರವಿಠಲನ । ಧ್ಯಾನಿಪ ಭಕುತರ ಮಾನ ನಿನ್ನದು ತಾಯೆ ॥೩॥

## ೪೨೦ ರಾಗ ಶಂಕರಾಭರಣ ಆದಿತಾಳ

ಹರಿಯೇ ಗತಿ ಸಿರಿ ವಿರಿಂಚಿ ಶಿವರಿಗೆ । ಹರಿಯೇ ಗತಿ ಸುರಸುರಾದಿ ಗಳಿಗೆ ॥ಪ॥ ರುಕ್ಮಿಣಿದೇವಿಯ ಶಿಶುಪಾಲಗೀವೆನೆಂದು । ರುಕ್ಮ ಸಂಭ್ರಮಿ ಸಲು ಕೃಷ್ಣ ಬಂದು ॥ ಸಕಲ ರಾಯರುಗಳು ಸನ್ನದ್ಧರಾಗಿರೆ । ರುಕುಮಿಣಿ ಯನು ತಂದು ವರಿಸಿ ಆಳಿದನಾಗಿ ॥ ೧ ॥ ಹಯಾಸ್ಯನೆಂಬುವ ವೇದವ ಕದ್ದೊಯ್ಯೆ । ಹಯಗ್ರೀವನಾಗಿ ಹರಿಯವನ । ಕಾಯವ ಖಂಡಿಸಿ ಅಜಗೆ ವೇದವನಿತ್ತು ಕಾಯ್ದ ಕಮಲಾಕ್ಷನೆ ದೈವವೆಂದು ॥೨॥ ಭಸುಮಾಸುರನಿ ಗೊಂದಸದಳ ವರವಿತ್ತು । ತ್ರಿಶೂಲಧರ ಓಡಿ ಬಳಲುತಿರೆ ॥ ಬಿಸರುಹನ ಯನನು ಭಸುಮಾಸುರನನು । ಭಸುಮವ ಮಾಡಿ ಶಿವನ ಪೊರೆದನಾಗಿ

||೩|| ಸುರಪನ ರಾಜ್ಯವ ಬಲಿಯಾಕ್ರಮಿಸಲು। ಹರಿ ದಾನವ ಬೇಡಿ ಯಜ್ಞದಲಿ || ಚರಣದಿಂದಿಳೆಯ ಸ್ವರ್ಗವ ಈರಡಿ ಮಾಡಿ। ಸುರಪಗೆ ರಾಜ್ಯವನಿತ್ತು ಪೊರೆದನಾಗಿ ||೪|| ಸುರಭೂಸುರರನ್ನು ಅಸುರರು ಬಾಧಿಸೆ । ಹರಿಯವತರಿಸಿ ಅಸುರರನೆಲ್ಲ || ಶಿರಗಳ ತರಿದು ಸುರಭೂಸುರರನು। ಪೊರೆವುತ್ತಲಿಹನಾಗಿ ಪುರಂದರವಿಠಲ ||೫||

## ೪೨೧ ರಾಗ ಭೂಪಾಳಿ ಝಂಪೆತಾಳ

ತುಂಗೆ ಮಂಗಳತರಂಗೆ || ಪ || ಹರಿಯ ಸರ್ವಾಂಗೆ ಜಯ ಜಯತು ಜಯ ಜಯ ತುಂಗಭದ್ರೆ || ಅ || ಆದಿಯಲ್ಲೊಬ್ಬ ದೈತ್ಯ ಮೇದಿನಿಯ ಕದ್ದೊಯ್ದು । ಸಾಧಿಸುತ್ತಿರಲವನ ಬೆನ್ನಟ್ಟಿ ಬಿಡದೆ || ಭೇದಿಸುತಲವನ ಭವಮಿಯನೆತ್ತಿ ಕಾಯ್ದಂಥ। ಆದಿವರಾಹನ ದಾಡೆಗಳಿಂದ ಬಂದೆ || ೧ || ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ । ಮಳಲು ಮಿಟ್ಟಿಗಳೆಲ್ಲ ಮಣಿಯ ಮಯವು || ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ । ನಳಿನನಾಮವು ಸರ್ವ ವಿಷ್ಣುಮಯವು || ೨ || ಇದೇ ವೃಂದಾವನ ಇದೇ ಕ್ಷೀರಾಂಬುಧಿ। ಇದೇ ವೈಕುಂಠಕೆ ಸರಿಯೆಂದೆನಿಸಿದೆ। ಇದೇ ಬದರಿಕಾಶ್ರಮ ಇದೇ ವಾರಣಾಸಿಗೆ। ಅಧಿಕ ಫಲವನ್ನೀವ ದೇವಿ ||೩|| ಧರೆಗೆ ದಕ್ಷಿಣ ವಾರಣಾಸಿಯೆಂದೆನಿಸಿದೆ। ಪರಮ ಪವಿತ್ರೆ ಪಾವನ ಚರಿತೆ ನಿನ್ನ || ಸ್ಮರಣೆ ಮಾತ್ರದಿ ಕೋಟಿಜನ್ಮದಘವನು ಕಳೆವ। ಪರಿದು ಸಾಯುಜ್ಯ ಫಲವೀವ ದೇವಿ ||೪|| ಪರಮಭಕ್ತ ಪ್ರಹ್ಲಾದಗೊಲಿದು ಬಂದು। ನರಸಿಂಹ ಕ್ಷೇತ್ರವೆಂದೆನಿಸಿ ಮೆರೆದೆ|| ಧರೆಯೊಳಗಧಿಕ ವರ ಕೂಡಲೀಪುರದಲ್ಲಿ। ವರದ ಪುರಂದರವಿಠಲನಿರಲು ಬಂದೆ ||೫||

## ೪೨೨ ರಾಗ ಭೂಪಾಳಿ ಅಟತಾಳ

ಎಲ್ಲಿ ಶ್ರೀ ತುಲಸಿಯ ವನವು। ಅಲ್ಲಿ ಒಪ್ಪುವರು ಸಿರಿನಾರಾಯಣರು || || ಪ || ಗಂಗೆ ಯಮುನೆ ಗೋದಾವರಿ ಕಾವೇರಿ। ಕಂಗೊಳಿಸುವ ಮಣಿಕರ್ಣಿಕೆಯು || ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ। ಮುಂಗಾಡಿಸುವ

ಮೂಲವೃಕ್ಷದಲಿರುವರು ‖ ೧ ‖ ಸರಸಿಜಭವ ಭವ ಸುರಪ ಪಾವಕ ಚಂ । ದಿರ ಸೂರ್ಯ ಮೊದಲಾದವರು ‖ ಸಿರಿರಮಣನ ಆಜ್ಞದಿ ಅಗಲದಂತೆ । ತರುಮಧ್ಯದೊಳು ನಿತ್ಯ ನೆಲಸಿಪ್ಪರು ‖೨‖ ಋಗ್ವೇದ ಯಜುರ್ವೇದ ಸಾಮ ಅಥರ್ವಣ । ಅಘಹಳಿಸುವ ವೇದಘೋಷಗಳು ‖ ಅಗ್ರಭಾಗವಲ್ಲಿದೆ ಬೆಟ್ಟದೊಡೆಯ ಅಲ್ಲಿ । ಶೀಘ್ರದಿ ಒಲಿವ ಶ್ರೀಪುರಂದರವಿಠಲ ‖೩‖

## ೪೨೩ ರಾಗ ಮೋಹನ ಆದಿತಾಳ

ತಪ್ಪುಗಳಿಲ್ಲವ ಪರಿಹರಿಸುವ ನ । ಮ್ಮಪ್ಪನಲ್ಲವೆ ನೀನು ‖ ಪ ‖ ಅಷ್ಟಾದರು ಎನ್ನವಗುಣ ಎಣಿಸದೆ । ಸತ್ಯಸಂಕಲ್ಪ ತಿಮ್ಮಪ್ಪ ನೀನು ‖ಅ‖ ಬೆಳಗಿನ ಝಾವದಿ ಹರಿಯ ಸ್ಮರಣೆಯ । ಮಾಡದಿರುವುದು ತಪ್ಪು । ಮಲ ಮೂತ್ರ ವಿಸರ್ಜನೆ ಮೃತ್ತಿಕೆಯಲಿ । ಮಲವ ತೊಳೆಯದಿರುವುದು ತಪ್ಪು ‖ ತುಳಸಿ ವೃಂದಾವನ ಗೋಸೇವೆಗೆ । ಆಲಸ್ಯ ಮಾಡುತಲಿರುವದು ತಪ್ಪು । ನಳಿನ ಸಖನಿಗೆ ಅರ್ಘ್ಯವನೀಯದೆ । ಕಲಿವ್ಯಾಸಂಗದಲಿರುವುದು ತಪ್ಪು ‖೧‖ ದಿನ ದಿನ ಉದಯ ಸ್ನಾನವ ಮಾಡದೆ । ತನು ವಂಚನೆಯಾ ತಪ್ಪು । ಮುನಿಸುರ ಭೂಸುರರಾರಾಧಿಸದೆ । ಧನ ವಂಚನೆಯ ತಪ್ಪು ‖ ಕ್ಷಣ ಗುಣ ಜಿಜ್ಞಾಸಿಲ್ಲದೆ ದು । ರ್ಜನರ ಸಂಸರ್ಗದ ತಪ್ಪು ವನಜಾಕ್ಷ ನಿನ್ನ ಧ್ಯಾನವ ಮಾಡದೆ । ಮನ ವಂಚನೆಯ ತಪ್ಪು ‖ ೨ ‖ ಕಣ್ಣಿಲಿ ಕೃಷ್ಣಾಕೃತಿಯ ನೋಡದೆ ಪರ । ಹೆಣ್ಣಿನ ನೋಡಿದ ತಪ್ಪು । ಅನ್ನವನರ್ಪಿಸದೆ ಅಜ್ಞಾನದಿ । ಉಣ್ಣುವ ನಾಲಿಗೆ ತಪ್ಪು ‖ ನಿನ್ನ ಕಥಾಮೃತವಿಲ್ಲದೆ ಹರಟೆಯ । ಮನ್ನಿಸುವ ಕಿವಿ ತಪ್ಪು । ಚಿನ್ಮಯಮೂರುತಿಚರಣಕ್ಕೆರಗದೆ । ಉನ್ಮತ್ತತೆಯ ತಪ್ಪು ‖ ೩ ‖ ಆನಂದನ ಸಂಕೀರ್ತನೆ ಮಾಡದೆ । ಹೀನವಿವಾದದ ತಪ್ಪು । ಶ್ರೀನಾಥಾರ್ಚನೆ ಇರಲೂಳಿಗವ । ಮಾಡಿದ ಕೈಯ ತಪ್ಪು ‖ ಶ್ರೀನಿರ್ಮಾಲ್ಯ ವಿರಹಿತ ಸುರಭಿಯ । ಘ್ರಾಣದ ನಾಸಿಕ ತಪ್ಪು । ಶ್ರೀನಾರಾಯಣನನ್ವೇಷಣಗೆಯ್ಯ । ದನ್ಯಾಟನೆ ಪಾದದ ತಪ್ಪು ‖೪‖ ಯಜ್ಞಾತ್ಮಗೆ ಯಜ್ಞವರ್ಪಿಸದೆ ಕಾಮ್ಯ । ಯಜ್ಞ ಮಾಡಿದ ತಪ್ಪು ‖ ಅಜ್ಞಾನ ಜ್ಞಾನದಲಿ ಕ್ಷಣ ಕ್ಷಣ । ಅಘಗಳ ಗಳಿಸುವ ತಪ್ಪು ‖ ಆಗತ ಶೌಚದ ಕರ್ಮವ ಜರೆದು

ಸ ಮಗ್ರ ಗುಹ್ಯವ ತಪ್ಪು || ಯಜ್ಞೇನ ಮಧ್ವಪತಿ ಪುರಂದರವಿಠಲನ | ವಿಸ್ಮರಣೆಯು ತಪ್ಪು || ೫ ||

### ೪೨೪ ರಾಗ ಕಾಂಭೋಜಿ ಝಂಪೆತಾಳ

ತಾ ಪಡೆದು ಬಂದುದಕುಪಾಯವೇನು ||ಪ|| ಕೋಪದಲಿ ಶ್ರೀಪತಿಯು ಶಾಪಿಸಿದರೇನು ||ಅ|| ಅನ್ನಕಿಲ್ಲವು ಎಂದು ಅತಿದೈನ್ಯ ಪಡಲೇನು | ಮನ್ನಣೆಯು ಸೌಭಾಗ್ಯ ಬಯಸಲೇನು || ತನ್ನ ಶಿರ ಅಡಿಮಾಡಿ ತಪವ ಮಾಡಿದರೇನು | ಎಣ್ಣೆ ಹಚ್ಚಿ ಹುಡಿಯೊಳಗೆ ಉರುಳಾಡಲೇನು ||೧|| ಸರಿಯು ಜನರನು ನೋಡಿ ಕರುಬಿ ಕೊರಗಿದರೇನು | ಬರಿದೆ ನಿಂದೆಯು ಮಾಡಿ ಪರಚಿಕೊಳಲೇನು || ಇರುಳು ಹಗಲೊಂದಾಗಿ ಕುದಿದು ಸೊರಗಿದರೇನು | ಅರಿಯುವ ಮನುಜರಿಗೆ ಅಲ್ಪರಿವರೇನು || ೨ || ಕಂಡ ದೇವತೆಗಳಿಗೆ ಕಯ್ಯ ಮುಗಿದರೆ ಏನು | ಷಂಡತನದಲಿ ಜಗವ ಚರಿಸಿದರೇನು || ಮಂಡಲಾಧಿಪ ನಮ್ಮ ಪುರಂದರವಿಠ್ಠಲನ | ಕೊಂಡಾಡುವುದಕಿನ್ನು ಸಂದೇಹವೇನು ||೩||

### ೪೨೫ ರಾಗ ಧನ್ಯಾಸಿ ಅಟತಾಳ

ಹರಿ ನೀನೆ ಗತಿಯೆಂದು ನೆರೆನಂಬಿದವರನು | ಮರೆತಿರುವುದು ನ್ಯಾಯವೆ ||ಪ|| ಗರುಡಗಮನ ನೀ ಸಿರಿಲೋಲನಾಗಿರೆ | ಅರಸಿ ಎನ್ನನು ಕಾಯ್ವ ಧೊರೆಗಳಿನ್ನಾರಯ್ಯ || ಅ || ಮುಟ್ಟಿ ಪೂಜಿಸಿ ನಿನ್ನ ಇಷ್ಟವ ಬೇಡುವ | ದೃಷ್ಟಿ ಎನ್ನೊಳಗಿದೆಯೆ || ಕಷ್ಟವ ಪಡಲಾರೆ ಸೃಷ್ಟಿಯೊಳಗೆ ಎನ್ನ | ದುಷ್ಟಕರ್ಮವ ಬಿಡಿಸಿ ದಿಟ್ಟನೆಂದೆನಿಸೊ || ೧ || ಭುಜಗಶಯನ ನಿನ್ನ ಭಜಕರ ಹೃದಯದಿ | ನಿಜವಾಗಿ ನೀನಿಲ್ಲವೆ || ಅಜನ ಪಿತನೆ ಕೇಳು ತ್ರಿಜಗವೆಲ್ಲವು ನಿನ್ನ | ಸುಜನ ಪಾಲಕನೆಂದು ಭಜನೆ ಮಾಳ್ಪುದು ಕಂಡು ||೨|| ಭಾಗವತರರಸನೆ ಯೋಗಿಗಳೊಡೆಯನೆ | ಬಾಗಿ ಬಿನ್ನವಿಪೆ ನಿನ್ನ || ಸಾಗರಶಯನನೆ ನೀಗಿಸಿ ಶ್ರಮವನು | ಜಾಗುಮಾಡದೆ ಎನ್ನ ಬೇಗದಿ ಕಾಯಯ್ಯ ||೩|| ತುಂಟರೈವರ ತುಳಿದು ಕಂಟಕೊಬ್ಬನ ಕಳೆದು | ಎಂಟು ಮಂಧಿಯ ಗರ್ವವನಳಿದು || ನೆಂಟ ನೀ ಬಂದೆನ್ನ ಕಂಟಕವನೆ ಬಿಡಿಸಿ |

ಉಂಟಾದ ವೈಕುಂಠಬಂಟನೆಂದೆಣಿಸೊ ||೪|| ಧರಣಿಯೊಳಗೆ ನೀ ಸುಜನರ ಸಲಹುವ | ಬಿರುದು ಪಡೆದವನಲ್ಲವೆ || ಸಿರಿರಮಣನೆ ಎನ್ನ ಕರುಣದಿಂದಲಿ ಕಾಯೊ | ಪರಮಪುರುಷ ಸಿರಿಪುರಂದರವಿಠಲ ||೫||

## ೪೨೬ ರಾಗ ಕಲ್ಯಾಣಿ ಆಟತಾಳ

ಸಲ್ಲದೊ ಕೃಷ್ಣ ಸಲ್ಲದೊ || ಪ || ಸಿರಿ | ವಲ್ಲಭ ಇದ ನೋಡಿ ಪಾಲಿಸ ಬೇಕೋ ||ಅ|| ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನ್ನು | ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ||೧|| ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ | ಪಾವಕನುರಿಗೆ ನೀನೊಪ್ಪಿಸಿಕೊಡುವುದು ||೨|| ಕುಶಲದಿ ಬಣ್ಣಿಸಿ ಬರೆದ ಚಿತ್ತಾರವ | ಮಸಿ ಮಣ್ಣು ಮಾಡಿ ನೀ ಕೆಡಿಸುವುದು || ೩ || ಬಲು ಕಾಲ ಮುದ್ದಿಸಿ ಕಲಿಸಿ ಮಾತುಗಳ | ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು || ||೪|| ಕರುಣಿಸು ಗುರು ಪುರಂದರವಿಠ್ಠಲ ನಮ್ಮ | ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು || ೫ ||

## ೪೨೭ ರಾಗ ಯಮುನಾಕಲ್ಯಾಣಿ ಆದಿತಾಳ

ಹರಿಕಥಾಶ್ರವಣ ಮಾಡೋ | ಪಾಡೋ | ಹರಿಕಥಾಶ್ರವಣ ಮಾಡೋ|| ||ಪ|| ಪಥ ವೈಕುಂಠಕಿದು ನೋಡೋ || ಅ || ಸರಸಿಜನಾಭನ ಸರ್ವದಾ ಹೊಗಳುತ | ದುರಿತ ದೂರಕೀಡಾಡೋ || ೧ || ಧ್ಯಾನ ಭಕುತಿ ವೈರಾಗ್ಯವೀವ ನಮ್ಮ | ಆನಂದತೀರ್ಥರ ಪಾಡೋ ||೨|| ಪರಮಪುರುಷ ಶ್ರೀಪುರಂದರವಿಠಲನ | ಚರಣಕಮಲದಲಿ ಕೂಡೋ ||೩||

## ೪೨೮ ರಾಗ ಮುಖಾರಿ ಅಟತಾಳ

ತೊಳಲದಿರು ಕಂಡ ಕಡೆಗೆ | ಪರಮಾತ್ಮ | ನೊಳಕಂಡು ಸುಖಿಸೊ ಮನವೆ || ಪ || ಲಿಪಿಯೊಳಖಿಳವ ಚಿಂತಿಸಿ ಕಡೆಕಡೆಗೆ | ಕಪಿಯಂತೆ ಎಡೆಯಾಡದೆ ಮನವೆ|| ಗುಪಿತದೊಳಗಿದ್ದಾತ್ಮನ ಧ್ಯಾನಿಸಲು| ಅಪರಿಮಿತ ಸುಖ ಸುಖಿಸುವೆ ಮನವೆ || ೧ || ನಾಗ ನರ ಸುರಲೋಕವ ತಿರುತಿರುಗಿ| ಕಾಗೆ

ಯಂತೆಡೆ ಯಾಡದೆ|| ರಾಗದ್ವೇಷವ ತೊಲಗಿಸಿ ಮನದಿ ಮಧು| ಸೂದನನ ಕಾಣು ಕಂಡ್ಯ ಮನವೆ ||೨|| ಪರರಿಗಿದ ಸೂಚಿಸದಿರೊ ಸಿದ್ಧಾಂತ | ಪರಮ ತತ್ತ್ವವನು ತಿಳಿವು ಮನವೆ || ಗುರುಪುರಂದರವಿಠಲನ ಸ್ಮರಿಸಲು | ಸ್ಥಿರ ವುಳ್ಳ ಮುಕುತಿಯಹುದೊ ಮನವೆ ||೩||

### ೪೨೯ ರಾಗ ಮಧ್ಯಮಾವತಿ ಅಟತಾಳ

ಅಚ್ಯುತಾನಂತ ಗೋವಿಂದ| ಹರಿ| ಸಚ್ಚಿದಾನಂದಸ್ವರೂಪ ಮುಕುಂದ|| || ಪ || ಕೇಶವ ಕೃಷ್ಣ ಮುಕುಂದ | ಹರಿ | ವಾಸುದೇವ ಗುರು ಜಗದಾದಿ ವಂದ್ಯ || ಯಶೋದೆಯ ಸುಕೃತದ ಕಂದ | ಸ್ವಾಮಿ | ಶೇಷಶಯನ ಭಕ್ತ ಹೃದಯಾನಂದ || ೧ || ನಾರಾಯಣ ನಿಮ್ಮ ನಾಮ | ವೆನ್ನ ನಾಲಿಗೆ ಮೇಲಿರಬೇಕೆಂಬ ನೇಮ || ನಾನು ಬೇಡುವೆ ನಿಮ್ಮ ನಾಮ | ಪ್ರಾಣ | ಪಯಣಸಮಯಕೊದಗಲಿ ಗುಣಧಾಮ ||೨|| ಮಾಧವ ಮಂಗಳಗಾತ್ರ | ಸ್ವಾಮಿ | ಯಾದವ ಕೈಲಾಸವಾಸನ ಮಿತ್ರ || ಮಹಿಮೆ ಕೇಳಿದರೆ ವಿಚಿತ್ರ| ನಿನ್ನ | ಮನಮೆಚ್ಚಲಿ ಸತ್ಯಭಾಮಾಕಳತ್ರ || ೩ || ಗೋವಿಂದ ಗೋಪಾಲ ಬಾಲ | ಸೋ೧| ಸಾಸಿರ ಗೋಪೇರ ಆನಂದಲೀಲ || ನೀಲಮಣಿ ಮುಕ್ತಾಮಾಲ | ನಿಮ್ಮ | ನೇನೆಂದು ಕರೆಯಲಿ ಸುಗ್ರೀವಪಾಲ ||೪|| ವಿಷ್ಣು ಚಕ್ರವು ಬಂದು ಸುತ್ತಿ | ಮೂರು | ಸೃಷ್ಟಿಯನೆಲ್ಲ ತಿರುಗಿ ಬೆನ್ನಟ್ಟಿ || ಕೃಷ್ಣ ಸಲಹೆಂದು ಮೊರೆಯಿಟ್ಟ | ಮುನಿ | ಶ್ರೇಷ್ಠಗಿಷ್ಟರ ಮೇಲೆ ಅಭಯವ ಕೊಟ್ಟಿ|| || ೫ || ಮಧುಸೂದನ ಮಾರಜನಕ | ಮದ | ಗಜ ಸೀಳಿ ಮಲ್ಲರ ಗೆಲಿದೆ ತವಕ || ಒದಗಿ ಕಂಸನ ಕೊಂದ ಬಳಿಕ | ನೀ | ಮುದುಕಗೆ ಪಟ್ಟವ ಕಟ್ಟಿದ್ಯೊ ಧನಿಕ ||೬|| ತ್ರಿವಿಕ್ರಮ ತ್ರೈಲೋಕ್ಯನಾಥ | ದೇವ | ತ್ರಿಪುರರ ಸತಿಯರ ವ್ರತಕೆ ವಿಘಾತ|| ಯದುವಂಶ ಪಾಂಡವಪ್ರೀತ| ಎನ್ನ| ಹೃದಯದೊಳಡಗಿರೊ ಶ್ರೀಜಗನ್ನಾಥ ||೭|| ವಾಮನರೂಪಿಲಿ ಬಂದು | ಬಲಿಯ | ದಾನವ ಬೇಡಲು ಉಚಿತವು ಎಂದು || ಧಾರೆಯನೆರೆಯಲು ಅಂದು | ಬೆಳೆದು | ಧಾರಿಣಿಯೆಲ್ಲವನಳೆದ್ಯೊ ನೀನಂದು || ೮ || ಶ್ರೀಧರ ಶೃಂಗಾರ ಹಾರ | ದಿವ್ಯ| ಶ್ರೀವತ್ಸಲಾಂಛನ ಶ್ರೀರಘುವೀರ || ವಾರಿಧಿಸಮಗಂಭೀರ| ಧೀರ | ಕ್ರೂರ ರಕ್ಕಸರನೆಲ್ಲರ ಸಂಹಾರ ||೯|| ಹೃಷಿಕೇಶ ವೃಂದಾವನದಲಿ|

ನೀ । ಹರುಷದಿ ಕೊಳಲನೂದುತ ಯಮುನೆಯಲಿ ॥ ಸತಿಯರ ಸಮ್ಮೇಳದಲಿ । ನೀ । ಧರಿಸಿದ್ಯೊ ಮಂದಾರಮಾಲೆ ಕೊರಳಲಿ ॥ ೧೦ ॥ ಪದ್ಮನಾಭ ಕೇಳೊ ಘನ್ನ । ಪಾದ । ಪದ್ಮವ ತೋರಿಸೊ ಬೇಗನೆ ನಿನ್ನ ॥ ಮುದ್ದು ಮುಖವ ತೋರಿ ಎನ್ನ । ಬೇಗ । ಉದ್ಧಾರ ಮಾಡೆಂದು ಬೇಡುವೆ ನಿನ್ನ ॥ ॥೧೧॥ ದಾಮೋದರ ಗುಣಧಾಮ । ಸ್ವಾಮಿ । ದಾನವಾಂತಕ ಯದುಕುಲ ಸಾರ್ವಭೌಮ ॥ ನೀಲಮೇಘನಿಭಶ್ಯಾಮ । ಕೃಷ್ಣ । ನೀಲಾಪತಿಯೆಂಬ ಬಹುಪುಣ್ಯನಾಮ ॥ ೧೨ ॥ ಸಂಕರ್ಷಣ ದನುಜರಹಣ । ದೇವ । ಪಂಕಜಮುಖಿ ದ್ರೌಪದಿ ಮೇಲೆ ಕರುಣ ॥ ಕುಂಕುಮಾಂಕಿತ ರೇಖಾಚರಣ । ನಿಜ । ಕಂಕಣ ಕೇಯೂರ ಕೌಸ್ತುಭಾಭರಣ ॥೧೩॥ ವಾಸುದೇವ ಕೇಳೊ ನಿನ್ನ । ದಿವ್ಯ । ಸಾಸಿರನಾಮವ ನೆನೆವನೆ ಧನ್ಯ ॥ ಬೇಸರಿಸದೆ ಸಲಹಬೇಕೆನ್ನ । ತುಸ । ಘಾಸಿಯ ಮಾಡದೆ ಕರುಣಾಸಂಪನ್ನ ॥ ೧೪ ॥ ಪ್ರದ್ಯುಮ್ನನೆಂದು ನಾ ಕರೆದೆ । ಎನ್ನ । ಬದ್ಧವಾದ ದುಷ್ಕರ್ಮವ ಕಳೆದೆ ॥ ದುರ್ಬುದ್ಧಿ ದುರ್ವಾಕ್ಯ ಮರೆದೆ । ಸಾಧು । ಸಜ್ಜನರ ಸಂಗ ನಿನ್ನಿಂದ ಬೆರೆದೆ ॥೧೫॥ ಅನಿರುದ್ಧ ಅನುದಿನದಲ್ಲಿ । ನೀ । ವಿನಯದಿಂದಿದ್ದೆ ಗೋಪಿಯರ ಮನೆಯಲ್ಲಿ ॥ ಸನಕಾದಿವಂದ್ಯ ನಿನ್ನಗಲಿ । ಒಂದು । ಕ್ಷಣ ಬಿಟ್ಟಿರಲಾರೆ ನಿಲ್ಲೊ ಮನದಲ್ಲಿ ॥೧೬॥ ಪುರುಷೋತ್ತಮಗಾರು ಸಾಟಿ । ಪರ । ಬಹ್ಮಸ್ವರೂಪಿಯೆ ನಿನಗಾರೊ ಪೋಟಿ ॥ ಮಹಿಮೆ ಕೇಳಿದರೊಂದುಕೋಟಿ । ನಿನ್ನ । ಹೃದಯದಿ ಕಂಡ ಬ್ರಹ್ಮಾಂಡ ಕಿರೀಟಿ ॥೧೭॥ ಅಧೋಕ್ಷಜ ಅಸುರಸಂಹಾರಿ । ಕೃಷ್ಣ । ಅದ್ಭುತರೂಪ ಶಿಶುಪಾಲನ ವೈರಿ ॥ ಭಕ್ತರ ಪಾಲಿಪ ಶೌರಿ । ಅಜಾ । ಮಿಳ ನಾರಗನೆನ್ನೆ ಕಾಯ್ದೆ ಮುರಾರಿ ॥೧೮॥ ನರಸಿಂಹರೂಪವ ತಾಳ್ದೆ । ಕಂದ । ಕರೆಯೆ ಕಂಭದಿ ಬಂದು ಕರುಣದಿ ಕಾಯ್ದೆ ॥ ದುರುಳ ಹಿರಣ್ಯಕನ ಸೀಳ್ದೆ ।ಅವನ। ಕರುಳು ಬಗಿದು ವನಮಾಲೆಯ ಹಾಕ್ದೆ ॥೧೯॥ ಅಚ್ಯುತ ನೀನತಿ ಮುದ್ದು । ಗೋಪಿ । ಬಚ್ಚಿಟ್ಟ ಹಾಲು ಮೊಸರು ಬೆಣ್ಣೆ ಮೆದ್ದು ॥ ತುಚ್ಛ ಶಕಟನ ಕಾಲಿಲೊದ್ದು । ಕಾಡು । ಗಿಚ್ಚನು ನುಂಗಿ ಪಾಲಿಸಿದೆಯೊ ಗೆದ್ದು ॥೨೦॥ ಜನಾರ್ದನರೂಪ ನೀನಾಗಿ । ಎನ್ನ । ಮನದ ಕರ್ಮವ ತೊಲಗಿಸೊ ಮುಂದಾಗಿ ॥ ಮುನಿಗಳೆಲ್ಲರು ಒಂದಾಗಿ । ಈ । ತನು ನಿನ್ನದೆಂಬರೊ ಕೇಳೊ ನಿಜವಾಗಿ ॥ ೨೧ ॥ ಉಪೇಂದ್ರರೂಪದಿ ಬಂದೆ । ಅಪ್ರ । ಮೇಯ

ಕಾಳಿಂಗನ ಮಡುವ ಧುಮುಕಿದೆ ॥ ನಾಗನ ಹೆಡೆಗಳ ತುಳಿದೆ । ನಾಗ । ಪತ್ನಿಯರು ಬೇಡೆ ಪತಿಯ ಪಾಲಿಸಿದೆ ॥೨॥ ಹರಿ ಹರಿಯೆಂದರೆಪಾಪ । ರಾಶಿ । ಹರಿದು ಹೋಯಿತು ಎನ್ನ ಮನದ ಸಂತಾಪ ॥ ಸರ್ವರೊಳಗೆ ವಿಶ್ವರೂಪ । ನಿನ್ನ । ನೆರೆ ನಂಬಿದವರನು ಸಲಹುವ ಭೂಪ ॥೩॥ ಕೃಷ್ಣ ನೆಂಬ ಸೊಲ್ಲ । ಕೇಳಿ । ನಷ್ಟವಾಯಿತು ಎನ್ನ ಪಾಪಗಳೆಲ್ಲ ॥ ಮುಟ್ಟಿ ಭಜಿಸಿರೊ ನೀವೆಲ್ಲ । ಪುರಂದರ । ವಿಠ್ಠಲನಲ್ಲದೆ ಮತ್ತೆ ಬೇರಿಲ್ಲ ॥೪॥

### ೪೩೦ ರಾಗ ಆರಭಿ ಆದಿತಾಳ

ಇಂದಿರಾರಮಣ ಗೋ । ವಿಂದ ನಿನ್ನಯ ಪಾದ । ದ್ವಂದ್ವವೆನಗೆ ಸಾಕೆಲೋ ॥ ಪ ॥ ಅಂದು ಬ್ರಹ್ಮಾಂಡವ ಸೀಳಿದಂಥ ಪಾದ । ಎಂದೆಂದು ಭಕುತರು ಪಾಲಿಸುವ ನಿನ್ನ ॥ ಅ ॥ ನಾರಾಯಣ ನಿನ್ನ ನಾಮವು ಅಜಮಿಳನ । ಘೋರ ಪಾಪವನಟ್ಟಿತೊ ॥ ಸಾರಿ ನಿನ್ನನು ಭಜಿಪ ಚಾರು ಭಕ್ತರಿಗೆ । ಕೋರಿದ ವರಗಳ ನೀಡುವ ದಾತನೆ ॥ ೧ ॥ ಮುನಿಗಳು ತಮ್ಮ ಮನವನೆ ನಿಲ್ಲಿಸಿ । ಘನತರ ಮಹಿಮ ನಿನ್ನ । ನೆನೆವುತ್ತಿರಲು ಅವರ ಕಾವಲಾಗಿರುತಿದ್ದೆ । ಅನಾಥರಕ್ಷಕ ಕಾರುಣ್ಯಮೂರುತಿ ॥೨॥ ಒಂದೆ ಮೂರುತಿಯಾಗಿ ಎಂದು ಇರುವನಾಗಿ । ಪೊಂದಿದೆ ಅನಂತ ರೂಪವನೆಲ್ಲ ॥ ಒಂದು ಅರಿಯದ ಎನ್ನ ಕಾಯಬೇಕೋ ಅಣ್ಣ । ತಂದೆ ಪುರಂದರವಿಠಲರಾಯನೆ॥

### ೪೩೧ ರಾಗ ಕಾಂಭೋಜಿ ಝಂಪೆತಾಳ

ಭ್ರಷ್ಟರಾದರು ಮನುಜರು ॥ ಪ ॥ ಅಷ್ಟಮದ ಗರ್ವದಲಿ ಹರಿಸ್ಮರಣೆಯನು ಮರೆತು ॥ಅ॥ ಮಡದಿ ಮಾತನು ಕೇಳಿ ನಡೆದು ಕೊಂಬನು ಭ್ರಷ್ಟ। ಪಡೆದ ಜನನಿಯನು ಬೈಯುವನು ಭ್ರಷ್ಟ॥ ಕಡನಕೊಟ್ಟವರೊಡನೆ ಧಡಿಗತನ ಮಾಡುವ ಭ್ರಷ್ಟ । ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ ॥೧॥ ಬಾರದೊಡವೆಗಳನ್ನು ಬಯಸುವನು ತಾ ಭ್ರಷ್ಟ। ಸೇರದವರೊಡನೆ ಸ್ನೇಹಿಸುವ ಭ್ರಷ್ಟ ॥ ಶೌರಿದಿನ ವ್ರತವನಾಚರಿಸದವನತಿ ಭ್ರಷ್ಟ । ನಾರಿಯರ ನೆಚ್ಚಿದಾ ನರನು ಕಡು ಭ್ರಷ್ಟ ॥ ೨ ॥ ತಂತ್ರವನು ಅರಿಯದೆ ಮಂತ್ರ

ಮಾಡುವ ಭ್ರಷ್ಟ। ಮಂತ್ರವಿಲ್ಲದ ವಿಪ್ರನತಿ ಭ್ರಷ್ಟನು ॥ ಅಂತರವನರಿಯದೆ ನುಡಿಯುವವ ಭ್ರಷ್ಟ ಸ್ವ । ತಂತ್ರವಿಲ್ಲದೆ ಕಾರ್ಯ ನಡೆಸುವನು ಭ್ರಷ್ಟ ॥ ॥೩॥ ಹರಿಚರಿತ್ರೆಗಳನ್ನು ಜರೆದಾಡುವವ ಭ್ರಷ್ಟ। ಹರಿಯ ಶರಣರ ನೋಡಿ ನಿಂದಿಪನು ಭ್ರಷ್ಟ ॥ ಗುರುಹಿರಿಯರ ಪಾದಕ್ಕೆರಗದವನವ ಭ್ರಷ್ಟ । ನೆರೆ ಹೊರೆಯರನು ನೋಡಿ ಕರುಬುವನು ಭ್ರಷ್ಟ ॥ ೪ ॥ ಹರಿನಾಮವನು ದಿನದಿ ಸ್ಮರಿಸದಾತನು ಭ್ರಷ್ಟ । ಕರುಣವಿಲ್ಲದ ವಿಪ್ರನವ ಭ್ರಷ್ಟನು । ಕರುಣಾಳು ನಮ್ಮ ಸಿರಿಪುರಂದರವಿಠಲನ್ನ । ಚರಣಕಮಲವ ಸ್ಮರಿಸದವ ಭ್ರಷ್ಟನಯ್ಯ ॥೫॥

## ೪೩೨ ರಾಗ ನಾದನಾಮಕ್ರಿಯೆ ಛಾಪುತಾಳ

ಅನುಭವದಡುಗೆಯ ಮಾಡಿ । ಅದ । ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ॥ಪ॥ ತನುವೆಂಬ ಭಾಂಡವ ತೊಳೆದು । ಕೆಟ್ಟ । ಮನದ ಚಂಚಲವೆಂಬ ಮುಸುರೆಯ ಕಳೆದು ॥ ಘನವಾಗಿ ಮನೆಯನ್ನು ಬಳಿದು । ಅಲ್ಲಿ । ಮಿನುಗುವ ತ್ರಿಗುಣದ ಒಲೆಗುಂಡ ನೆಡೆದು ॥೧॥ ವಿರಕ್ತಿಯೆಂಬುವ ಮಡಿಯುಟ್ಟು । ಪೂರ್ಣ । ಹರಿಭಕ್ತಿಯೆಂಬ ನೀರನ್ನೆಸರಿಟ್ಟು ॥ ಅರಿವೆಂಬ ಬೆಂಕಿಯ ಕೊಟ್ಟು। ಮಾಯಾ। ಮರೆವೆಂಬ ಕಾಷ್ಠವ ಮುದದಿಂದ ಸುಟ್ಟು॥ ॥ ೨ ॥ ಕರುಣೆಂಬೊ ಸಾಮಗ್ರಿ ಹೂಡಿ । ಮೋಕ್ಷ । ಪರಿಕರವಾದಂಥ ಪಾಕವ ಮಾಡಿ ॥ ಗುರುಶರಣರು ಸವಿದಾಡಿ । ನಮ್ಮ ಪುರಂದರವಿಠಲನ ಬಿಡದೆ ಕೊಂಡಾಡಿ ॥೩॥

## ೪೩೩ ರಾಗ ಕಾಂಭೋಜಿ ಝಂಪೆತಾಳ

ಯಾರೆತ್ತ ಪೋದರೇನು ಊರೆತ್ತ ಬೆಂದರೇನು । ಪೂರ್ವ ಪ್ರಾಪ್ತಿ ತನಗಲ್ಲದುಂಟೆ ಮನವೆ ॥ಪ॥ ಹಗಲೆ ತಾರಕೆಗಳು ಹಾರಿ ಆಡಿದರೇನು । ಬೈಗು ಭಾಸ್ಕರ ಮೂಡಿ ಬೆಳಗಾದರೇನು ॥ ಹಗೆಯವರ ಮನೆಯಲ್ಲಿ ಹಗರಣಾದರೆ ಏನು । ನಿಗಮಗೋಚರನಂಘ್ರಿ ನೆನೆ ಕಂಡ್ಯ ಮನವೆ ॥ ೧ ॥ ಬೆಂಡು ಮುಳುಗಿದರೇನು ಗುಂಡು ತೇಲಿದರೇನು । ಭಂಡು ನಾಲಿಗೆ ಎರಡು

ತುಂಡಾದರೇನು ॥ ಉಂಡ ಮನೆಗೆರಡೆಣಿಪ ಮುರಿದು ಬಿದ್ದರೆ ಏನು । ಪುಂಡರೀಕಾಕ್ಷನ್ನ ನೆನೆ ಕಂಡ್ಯ ಮನವೆ ॥೨॥ ವೆಚ್ಚಕಿಲ್ಲದ ಹಣವು ವ್ಯರ್ಥವಾದರೆ ಏನು । ಮಚ್ಚರಿಸುವರೆಲ್ಲ ಮಡಿದರೇನು ॥ ಅಚ್ಯುತಾನಂತ ಶ್ರೀ ಪುರಂದರವಿಠ್ಠಲನ । ನಿಶ್ಚಲ ಭಕುತಿಯಿಂ ನೆನೆ ಕಂಡ್ಯ ಮನವೆ ॥೩॥

## ೪೩೪ ರಾಗ ಸೌರಾಷ್ಟ್ರ ಝಂಪೆತಾಳ

ಜಯತು ಗೋಕುಲವಾಸ ದೈತ್ಯಪೂತನಿನಾಶ । ಜಯತು ಕ್ಲೇಶ ವಿನಾಶ ಸರ್ವಲೋಕೇಶ ॥೧॥ ಜಯತು ರುಕ್ಮಿಣಿನಾಥ ಅನಾಥರಿಗೆ ನಾಥ । ಜಯತು ಮಥುರಾನಾಥ ಪಾಲಿಸೋ ದಾತ ॥೨॥ ಜಯತು ಪಾವನಗಾತ್ರ ಚಾರುತರ ಚಾರಿತ್ರ । ಜಯತು ಜಲಜಾನೇತ್ರ ಮುನಿನುತಿಪಾತ್ರ ॥೩॥ ಜಯತು ಸಾವಿರನಾಮ ನೀಡೆನಗೆ ಪರಂಧಾಮ। ಜಯತು ಸಾರ್ವಭೌಮ ಭಕ್ತಿಯದು ಪರಮ ॥ ೪ ॥ ಜಯತು ತುಲಸೀಹಾರ ದಿವ್ಯದೊಂದಾಕಾರ। ಜಯತು ನಿನ್ನ ವಿಚಾರ ಅದು ಬಲು ಅಪಾರ ॥ ೫ ॥ ಜಯತು ಪಾಂಡವ ಪಕ್ಷ ತುಂಟಯೋಧನಶಿಕ್ಷ । ಜಯತು ಲೋಕಾಧ್ಯಕ್ಷ ಧರ್ಮಸಂರಕ್ಷ ॥೬॥ ಜಯತು ಶ್ರೀಭೂಲೋಲ ಭಕ್ತಜನಪರಿಪಾಲ । ಜಯತು ಪಾವನಶೀಲ ತಂದೆ ಪುರಂದರವಿಠಲ ॥೭॥

## ೪೩೫ ರಾಗ ಕಾಂಭೋಜಿ ಝಂಪೆತಾಳ

ನಿನ್ನ ಒಲುಮೆಗೆ ನಾನು ಈಡೇನೊ ರಂಗ ॥ಪ॥ ಸಣ್ಣವನು ನಾನಯ್ಯ ಪನ್ನಗಾಚಲವಾಸ ॥ ಅ ॥ ಅಜಿತನಾಮಕ ನೀನು ಅಲ್ಪಶಕ್ತನು ನಾನು । ಕುಜನದೂಷಕ ನೀನು ಅವರ ಮಿತ್ರನು ನಾನು ॥ ವ್ರಜದ ಸ್ತ್ರೀಯರ ಮನವ ಸೂರೆಗೊಂಡ ಸ್ವಾಮಿ । ಅಜನ ಪೆತ್ತ ನಿನಗೆ ಸರಿ ಯಾರು ಪೇಳಯ್ಯ॥೧॥ ಅನೇಕ ಅದ್ಭುತ ಚರಿತ್ರ ಪಿಡಿದೆ ಹೇಸಿಕೆ ಮಾರ್ಗ । ಅನೇಕ ಭಕ್ತರ ಪೋಷ ನಾನವರ ದೂಷಕ ॥ ಅನೇಕ ಬಾಹುಗಳು ಮತ್ತನೇಕ ಪಾದಗಳಯ್ಯ । ಅನೇಕ ದಿವ್ಯಾಭರಣ ವಿಶ್ವರೂಪ ನಿನಗೆ ॥ ೨ ॥ ಪರಮ ಪಾವನ ನೀನು ದುಷ್ಟ ತರಳನು ನಾನು । ಕರುಣಾಬ್ಧಿಯು ನೀನು ಕಠಿನ

ಚಿತ್ತ ನಾನು || ಶರಣೆಂಬೆ ಗಿರಿರಾಯ ನಿನ್ನ ಪೋಲುವರುಂಟೆ | ಮರಳಿ ಪುಟ್ಟದಂತೆ ಮಾಡೆನ್ನ ಪುರಂದರವಿಠಲ ||೩||

### ೪೩೬ ರಾಗ ಕೇದಾರಗೌಳ ಝಂಪೆತಾಳ

ಹರಿಸ್ಮರಣೆಯಿಲ್ಲದೆ ಬಾಳಿಬದುಕಿದರೇನು | ನರಜನ್ಮದಲಿ ಜನಿಸಿ ಫಲ ವೇನು ಹರಿಯೆ ||ಪ|| ನೊರಸಿಲ್ಲದಾ ಊಟ ನೂರುಬಗೆಯಿದ್ದರೇನು | ನಾರಿ ಯಿಲ್ಲದ ಸಂಸಾರವೇನು || ಹೋರಿ ಹೆಣಗುವ ಮಕ್ಕಳು ನೂರಾರು ಇದ್ದ ರೇನು | ಪಾರಮಾರ್ಥ ತಿಳಿಯದಿಹ ಪುರುಷನೇನು ||೧|| ಪತಿಶೂನ್ಯವಾದ ಯೌವನದ ರತಿ ಬಾಳೇನು | ರತಿ ಹಿತಾದವಗೆ ಪರಗತಿಗಳೇನು || ಗತಿನಷ್ಟ ವಾದವಗೆ ಅತಿ ತೀರ್ಥ ತಪವೇನು | ಅತಿ ಲೋಭಿಗೆ ದಾನಧರ್ಮದ ಚಿಂತೆಯೇನು ||೨|| ನೀರು ಇಲ್ಲದ ನೆಲಕೆ ನಿತ್ಯ ಶ್ರಮಬಿಡಲೇನು | ಗೋರ ಕಣ್ಣಿಲಿ ಬಯಸಿ ಕಾಯ್ದರೇನು || ಕೇರಿಗಾಗದ ಭೂಮಿ ತಾನಾಗಿ ಬಂದ ರೇನು | ಸೂರೆಗೊಂಬಾ ಊರು ಸುಖ ಇದ್ದರೇನು || ೩ || ಸುಳ್ಳನಾಡುವ ಕಳ್ಳನೊಡನೆ ಗೆಳೆತನವೇನು || ಹಳ್ಳ ಹೊಳೆಯಿಲ್ಲದಿಹ ವಳ್ಳವೇನು || ಎಳ್ಳು ನುರಿಯುವವಂಗೆ ಗಾಣಿಗನೆಂಬ ಪೆಸರೇನು || ಹಳ್ಳಿಯಿಲ್ಲದವಂಗೆ ಹೆಗ್ಗಳಿಕೆ ಯೇನು ||೪|| ಸೊಂಟ ಮುರಿದವನಿಗೆ ಮನೆ ಬಂಟತನಗಳೇನು | ಎಂಟು ಸಾವಿರ ನೆಂಟರಿದ್ದರೇನು || ವಂಟಿಶಿಬಿರಕ್ಕೆ ಜನ ಉಂಟಾಗಿ ಬಂದರೇನು ವೈ | ಕುಂಠ ಪುರಂದರವಿಠಲನ್ನ ಕೃಪೆಯಿಂದಧಿಕವಯ್ಯ ||೫||

### ೪೩೭ ರಾಗ ಮುಖಾರಿ ಆದಿತಾಳ

ಕಾರುಣ್ಯಮೂರುತಿಯೆ ಕಂಗಳು ಮೂರುಳ್ಳ ಧೊರೆಯೆ || ಪ || ಧಾರಿಣಿ ಯೊಳು ನಿನಗೆಣೆಯೇ ಗುರುದೇವ ಶಿಖಾಮಣಿಯೆ || ಅ || ಗುಹಾಸುರ ಮರ್ದನನೆ ದೇವ ಖಗನೃಷವಾಹನನೆ | ಗಜಚರ್ಮ ಪೀತಾಂಬರನೆ ಮಹಾ ದೇವ ಮಾಧವನೆ ||೧|| ತ್ರಿಪುರಾವಳಿಸಂಹಾರನೆ ತ್ರೈಲೋಕ್ಯಪಾವನನೆ | ಅಪಾರಮಹಿಮನೆ ಪ್ರಸನ್ನ ಶ್ರೀಹರಿಹರನೆ || ೨ || ತುಂಗಭದ್ರದಡಿಯು ತಾಳಿಪ್ಪೆ ಗಂಗೆಯ ಜಡೆಯು | ಪುರಂದರವಿಠಲನ ಪ್ರಿಯ ನೀ ಸಲಹಯ್ಯ ಎನ್ನೊಡೆಯ || ೩ ||

## ೪೩೮ ರಾಗ ಮೋಹನ ಅಟತಾಳ

ಜ್ಞಾನವೊಂದೇ ಸಾಕು ಮುಕ್ತಿಗೆ। ಇನ್ನೇನು ಬೇಕು ಹುಚ್ಚು ಮರುಳೆ॥ ॥ಪ॥ ಪಿತಮಾತೆ ಸತಿಸುತರಗಲಿರಬೇಡ। ಯತಿಯಾಗಿ ಅರಣ್ಯ ಚರಿಸಲು ಬೇಡ॥ ವ್ರತ ನೇಮವ ಮಾಡಿ ದಣಿಯಲುಬೇಡ। ಸತಿಯಿಲ್ಲದವಗೆ ಸದ್ಗತಿ ಇಲ್ಲೊ ಮೂಢ ॥೧॥ ಜಪತಪವನೆ ಮಾಡಿ ದಣಿಯಲುಬೇಡ। ಕಪಿಯಾಗಿ ಅಡಿಗಡಿಗ್ಹಾರಲುಬೇಡ॥ ಉಪಮಾರರಸ ಕಾಶಿ ಕಳೆಯಲುಬೇಡ। ಚಪಲತನದಲ್ಲಿ ಫಲವಿಲ್ಲೊ ಮೂಢ ॥೨॥ ಜಾಗ್ರತೆಯಲಿ ನಿದ್ರೆ ಕಳೆಯಲು ಬೇಡ। ಆಗ್ರಹವನು ಬಿಟ್ಟು ಒಣಗಲು ಬೇಡ॥ ಸೋಗುಮಾಡಿ ಮಾತು ಕಳೆಯಲು ಬೇಡ। ಗೂಗೆ ಹಾಗೆ ಕಣ್ಣು ಮುಚ್ಚಲು ಬೇಡ ॥ ೩ ॥ ಹೊನ್ನು ಹೆಣ್ಣು ಮಣ್ಣು ಜರೆದಿರಬೇಡ। ಅನ್ನ ವಸ್ತ್ರ ನೀನು ತೊರೆದಿರಬೇಡ॥ ನನ್ನದೆಂದು ದೇಹ ನಂಬಲು ಬೇಡ। ತಣ್ಣೀರು ಮುಣುಗಿ ನಡುಗಲು ಬೇಡ ॥ ೪ ॥ ಮಹಾವಿಷ್ಣುಮೂರ್ತಿಯ ಮರೆದಿರಬೇಡ। ನಾಯಾಸ ದಿನದಲ್ಲಿ ಶ್ರಮ ಬಿಡಬೇಡ॥ ಕುಹಕಬುದ್ಧಿಯಲಿ ಕುಣಿದಾಡ ಬೇಡ। ಪುರಂದರವಿಠಲನ್ನ ಮರೆದಿರಬೇಡ ॥೫॥

## ೪೩೯ ರಾಗ ಆನಂದಭೈರವಿ ಛಾಪುತಾಳ

ನಿನ್ನ ನಂಬಿದೆ ನೀರದಶ್ಯಾಮ ॥ಪ॥ ಎನ್ನ ಪಾಲಿಸೊ ಸೀತಾರಾಮ ॥ ॥ಅ॥ ಪಾರವಿಲ್ಲದ ಸಂಸಾರವಪಾರ ವಾರಿಧಿಯೊಳು ಮುಣುಗಿದೆ ನಾನು। ನಾರಿ ಸುತರು ತನ್ನವರೆಂದು ಭ್ರಾಂತಿಯಲಿ ಬಿದ್ದು ನೊಂದೆನೊ ಹರಿಯೆ ॥ ॥ ೧ ॥ ವೇದಶಾಸ್ತ್ರಂಗಳ ಓದಿ ವಾದಿಸಿ ಬಲು ಜನ್ಮ ಬಳಲಿದೆ ನಾನು। ಆದಿಮೂರುತಿಪಾದವನ್ನು ಅನುಸರಿಸದೆ ಲೋಕರಂಜಿತನಾದೆ ॥ ೨ ॥ ಆರು ಗರ್ವಗಳು ಕೂಡಿ ಬರಿದೆ ಇಂದ್ರಿಯ ತಾನೆಲ್ಲ ನೋಡಿ। ತೋರಿದೆ ಹರಿದಾಸನೆಂದು ಗಾರುಡಿ ಮಾಡಿ ನಾ ಕಾಲವ ಕಳೆದೆ ॥೩॥ ಪರಸತಿ ಪರದ್ರವ್ಯಗಳನು ಪರನಿಂದೆ ಪರದ್ರೋಹಗಳನೆ ಮಾಡಿದೆನೊ। ದುರಿತಪರ್ವತವೆತ್ತಿದೆನೊ ಸ್ಥಿರವಾದ ತನುವೆಂದು ಮರಣ ಜರೆದೆನೊ ॥೪॥ ಬಂದೆನೊ ಬಹು ಜನ್ಮದಲ್ಲಿ ನೊಂದೆನೊ ವಿಷಯದ ಬಾಧೆಗಳಲ್ಲಿ। ಮುಂದೇನು ಗತಿಯೆನಗಿಲ್ಲ ತಂದೆ ನೀನಲ್ಲದೆ ಪುರಂದರವಿಠ್ಠಲ ॥ ೫ ॥

## ೪೪೦ ರಾಗ ಆನಂದಭೈರವಿ ಏಕತಾಳ

ನಿನ್ನನೇ ನಂಬಿದೆ ನೀರಜನಯನ । ಎನ್ನ ಪಾಲಿಸೊ ಇಂದಿರಾರಮಣ ॥ಪ॥ ಗೌತಮಮುನಿಯ ಶಾಪದಲಿ ಅಹಲ್ಯೆಯು । ಪಥದೊಳು ಶಿಲೆಯಾಗಿ ಮಲಗಿರಲು ॥ ಪತಿತಪಾವನ ನಿನ್ನ ಪಾದ ಸೋಕೆ ಸತಿಯಾಗೆ । ಅತಿಶಯದಿ ಭಕುತರನು ಕಾಯಿವನೆಂಬೋದು ಕೇಳಿ ॥೧॥ ಬಲವಂತ ಉತ್ತಾನಪಾದ ರಾಯನಣುಗನ । ಮಲತಾಯಿ ನೂಕಲಡವಿಯೊಳಗೆ ॥ ಜಲಜಾಕ್ಷ ನಿನ್ನನು ಕುರಿತು ತಪವಿ । ರಲಾಗೆ ನೀನವಗೆ ಧ್ರುವಪಟ್ಟ ಕಟ್ಟಿದ್ದು ಕೇಳಿ ॥೨॥ ಸುರ ನರಲೋಕದಿ ಪುಣ್ಯದ ಜನರನ್ನು । ಪೊರೆಯಬೇಕೆಂದು ವೈಕುಂಠದಿಂದ ॥ ಸಿರಿಸಹಿತದಿ ಬಂದು ಶೇಷಾಚಲದಿ ನಿಂದು । ಕರುಣಿ ಶ್ರೀಪುರಂದರವಿಠಲನೆಂಬುದ ಕೇಳಿ ॥ ೩ ॥

## ೪೪೧ ರಾಗ ಮಧ್ಯಮಾವತಿ ಆದಿತಾಳ

ಶಿವದರುಶನ ನಮಗಾಯಿತು ಕೇಳೆ । ಶಿವರಾತ್ರಿಯ ಜಾಗರಣೆ ॥ ಪ ॥ ಪಾತಾಳಗಂಗೆಯು ಸ್ನಾನವ ಮಾಡಲು । ಪಾತಕವೆಲ್ಲ ಪರಿಹಾರವು ॥ ಜ್ಯೋತಿರ್ಲಿಂಗನ ಧ್ಯಾನವ ಮಾಡಲು । ದ್ಯೂತಗಳಿಲ್ಲ ಅನುದಿನವು ॥೧॥ ಬೇಡಿದ ವರಗಳ ಕೊಡುವನು ತಾಯಿ। ಬ್ರಹ್ಮನ ರಾಣಿಯ ನೋಡುವನು॥ ಆಡುತ ಪಾಡುತ ಏರುತ ಬಸವನ । ಆನಂದದಲಿ ನಲಿದಾಡುವನು ॥೨॥ ಶಿಖರವ ಕಂಡೆನು ಪುರಂದರವಿಠಲನ । ಹರಿನಾರಾಯಣ ಧ್ಯಾನದಲಿ ॥೩॥

## ೪೪೨ ರಾಗ ಕಾಂಭೋಜಿ ಝಂಪೆತಾಳ

ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು । ಪಾಮರರು ತಾವೇನು ಬಲ್ಲರಯ್ಯ ॥ ಪ ॥ ರಾ ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ । ಆಯಸ್ಥಿತಗತವಾದ ಅತಿ ಪಾಪವನ್ನು ॥ ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ದಾರಿಯನು ವಾಲ್ಮೀಕಿ ಮುನಿರಾಯ ಬಲ್ಲ ॥ ೧ ॥ ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು । ಒತ್ತಿ ಒಳ

ಪೊಗದಂತೆ ಕವಾಟವಾಗಿ || ಚಿತ್ತಕಾಯಗಳ ಪವಿತ್ರಮಾಡುವ ಪರಿಯ | ಭಕ್ತವರ ಹನುಮಂತನೊಬ್ಬ ತಾ ಬಲ್ಲ ||೨|| ಧರೆಯೊಳೀ ನಾಮಕ್ಕೆ ಸರಿ ಮಿಗಿಲು ಇಲ್ಲೆಂದು | ಪರಮ ವೇದಗಳೆಲ್ಲ ಪೊಗಳುತಿಹವು || ಸಿರಿಯರಸ ಪುರಂದರವಿಠ್ಠಲನ ನಾಮವನ್ನು| ಸಿರಿ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ||

## ೪೪೩ ರಾಗ ಯರಕಲಕಾಂಭೋಜಿ ತ್ರಿಪುಟತಾಳ

ನಿನ್ನ ದಾಸನಾದೆ ನಾನು ||ಪ|| ಎನ್ನ ಮನ್ನಿಸಿ ಮಮತೆಯ ಮಾಡಯ್ಯ ನೀನು || ಅ || ಜನನಿಯ ಗರ್ಭದೊಳು ನಾನು | ಬಲು | ದೀನತ್ವದಿಂದ ತೊಳಲಿ ಬಂದವನು || ಚಿನುಮಯಾನಂದಾತ್ಮಕನು | ಏ | ನನುಮಾನ ವಿಲ್ಲದೆ ನಿನ್ನ ನಂಬಿದೆನು||೧|| ಹಲವು ಜನ್ಮದಿ ತೊಳಲಿದೆನು | ಬಲು| ಬಳ ಲಿದೆನು ಸಾಕೋ ಜನಿಸಲಾರೆ ನಾನು || ನಳಿನಾಕ್ಷ ನಿನ್ನ ನಂಬಿದೆನು | ಎನ್ನ | ಅಳಲಿಸುವುದು ಗುಣವಲ್ಲ ಇದೇನು || ೨ || ಮಲಮೂತ್ರ ದೇಹ ದೊಳ್ ಬಂದು | ಬಲು | ಅರಸಿದೆ ನಿನ್ನ ಕಾಣದೆ ದೇಹ ನೊಂದು|| ಲಲನೆ ಗಕ್ಷಯವಿತ್ತೆ ಎಂದು | ನಿನ್ನ | ಒಳಗಿನ ಕರುಣದ ಕಂದ ನಾನೆಂದು ||೩|| ಮಂದಮತಿಯೊಳಗಾನು :| ಬಲು | ದಂದುಗದಲಿ ಸಿಲುಕಿ ನೊಂದೆನೊ ನಾನು || ತಂದೆತಾಯೆಲ್ಲವು ನೀನು | ಹೀಗೆ | ಎಂದು ನೇಮಿಸು ಎನ ಗೊಂದು ದಾರಿಯನು||೪|| ಹಿಂದಿನ ಜನ್ಮವ ಮರೆತು| ಎನ್ನ| ಅಂತರಂಗವು ಕರಗಿತು ನಿನ್ನನೆ ಮರೆತು || ಚಿಂತೆಗಳೆಲ್ಲವ ತೊರೆದು / ನಿ | ಶ್ಚಿಂತನಾದೆ ನಿನ್ನ ದಾಸರೊಳ್ ಬೆರೆತು ||೫|| ಸಾರಿ ಪೇಳುವೆ ಒಂದು ಸೊಲ್ಲ | ಇದ | ನರಿತು ತಿಳಿದುಕೊಳ್ಳಿರಿ ನೀವೆಲ್ಲ || ನಾರಾಯಣನಲ್ಲದಿಲ್ಲ | ಹೀಗೆ | ಸಾರು ತಿದೆ ವೇದ ಶಾಸ್ತ್ರಂಗಳೆಲ್ಲ ||೬|| ಮರೆತೆನೋ ನಿನ್ನ ನಾಮವನು | ಜಿಹ್ವೆಗೆ| ಬರೆದು ಬೋಧಿಸೊ ನಿನ್ನ ದಿವ್ಯ ನಾಮವನು || ಶರಣುಪೊಕ್ಕರ ಕಾಯು ವನು | ನಮ್ಮ| ವರದ ಪುರಂದರವಿಠಲ ಇದೇನು ||೭||

## ೪೪೪ ರಾಗ ಬಲಹರಿ ಅಟತಾಳ

ನಾರಾಯಣ ಎನ್ನ ಬಾರದೆ | ನಿಮ್ಮ| ನಾಲಿಗೆಯೊಳು ಮುಳ್ಳು ಮುರಿ ದಿಹುದೆ ಕಲ್ಲು ಜಡಿದಿಹುದೆ || ಪ || ವಾರಣಾಸಿಗೆ ಪೋಗಿ ದೂರ ಬಳಲ

ಲೇಕೆ । ನೀರಕಾವಡಿ ಪೊತ್ತು ತಿರುಗಲೇಕೆ ॥ ಊರೂರು ತಪ್ಪದೆ ದೇಶಾಂತರವೇಕೆ । ದಾರಿಗೆ ಸಾಧನವಲ್ಲವೆ ಹರಿನಾಮ ॥೧॥ ನಿತ್ಯೋಪವಾಸವಿದ್ದು ಹಸಿದು ಬಳಲಲೇಕೆ । ಮತ್ತೆ ಚಳಿಯೊಳು ಗಂಗೆ ಮುಳುಗಲೇಕೆ ॥ ಹಸ್ತವ ಪಿಡಿದು ಮಾಡುವ ಜಪತಪವೇಕೆ । ಮುಕ್ತಿಗೆ ಸಾಧನವಲ್ಲವೆ ಹರಿನಾಮ ॥ ॥೨॥ ಸತಿಸುತರನು ಬಿಟ್ಟು ಯತಿಗಳಾಶ್ರಮವೇಕೆ । ವ್ರತಕೃಚ್ಛ್ರ ನೇಮ ನಿಷ್ಠೆಗಳೇತಕೆ ॥ ಪೃಥಿವಿಯೊಳಗೆ ನಮ್ಮ ಪುರಂದರವಿಠಲನ । ಅತಿಶಯದಿಂದೊಮ್ಮೆ ನೆನೆದರೆ ಸಾಲದೆ ॥ ೩ ॥

## ೪೪೫ ರಾಗ ಮುಖಾರಿ ಆದಿತಾಳ

ಕರುಣಾನಿಧಿಯೆ ಈಶ ಅರುಣಗಿರಿಯ ವ್ಯಾಸ ॥ಪ॥ ಮುರನ ವೈರಿಯ ಚರಣದಾಸ । ಅರುಣರವಿಯ ಕೋಟಿಪ್ರಕಾಶ ॥ ಅ ॥ ಭಸ್ಮಧೂಳಿತ ಸರ್ವಾಂಗ। ಮತ್ತೆ ತಲೆಯೊಳಿಪ್ಪ ಗಂಗಾ ॥ ವಸ್ತ್ರರಹಿತ ದಿಗಂಬರ ಲಿಂಗ । ಕಸ್ತೂರಿರಂಗನ ಪಾದದ ಭೃಂಗ ॥ ೧ ॥ ಮತ್ತೆ ತ್ರಿಪುರಸಂಹಾರಿ । ಚಿತ್ತಜನಯ್ಯನ ಸೇರಿ ॥ ಹಸ್ತದಿ ಶೂಲ ಕಪಾಲಧಾರಿ। ಕರ್ತೃ ಶ್ರೀಹರಿಗೆ ನಿಜವ ತೋರಿ ॥೨॥ ನಂದಿಗೆ ನರಗೆ ಬಾಹ್ಯ । ಚಂದ್ರನು ಶಿರದಲ್ಲಿಪ್ಪ ॥ ಇಂದ್ರನ ತೀರ್ಥ ದಡದಲ್ಲಿಪ್ಪ । ಎಂದೆಂದಿಗು ನಮ್ಮನು ಪಾಲಿಸುತಿಪ್ಪ ॥೩॥ ಬೇಡಿದ ವರಗಳನೀವ । ಮತ್ತೆ । ಬೇಡಿದ ಭಕ್ತರ ಕಾವ ॥ ಜಡೆಯ ಮರಳ ಶಿರಳು ಭಾವ । ಕೊಂಡಾಡುವರೊಳಗೆಲ್ಲ ಎನ್ನದು ಶಿವ ॥ ೪ ॥ ಪಾರ್ವತಿಪುರದ ನಾಥ । ಕರುಣಿಸು ಸಂತತ ದಾತ ॥ ನಾರದಪ್ರಿಯ ಪ್ರಖ್ಯಾತ । ಪುರಂದರ ವಿಠಲನ ದೂತ ॥೫॥

## ೪೪೬ ರಾಗ ಅಠಾಣ ಅಟತಾಳ

ಸೋಹಮೆನ್ನ ಬೇಡೆಲೊ । ದಾ । ಸೋಹಮೆಂದು ಪೇಳೆಲೊ ॥ ಪ ॥ ಸೋಹಮೆಂಬೊ ಜ್ಞಾನದಿಂದ ಸಾಯಲಿಲ್ಲೇ ಹಿರಣ್ಯಕ ದಾ । ಸೋಹಮೆಂಬ ಪ್ರಹ್ಲಾದ । ದೇಹ ನಿತ್ಯ ಮುಕ್ತನಾದ ॥ಅ॥ ನಾನೆ ದೈವವೆಂಬ ಮಾಲಿ ಸುಮಾಲಿ ರಾವಣ ದುಷ್ಟರು । ದಾನವಾರಿ ಹರಿಯ ಜರೆದು ಹೇಗೆ

ಪ್ರಾಣಬಿಟ್ಟರು ಜಾನಕಿಪತಿದಾಸನೆಂಬ ವಿಭೀಷಣನ ಸ್ಥಿತಿ ನೋಡಿ ಕೊಂಡು। ಭಾನುವಂಶಜ ದೀನಪೋಷಣ ರಾಮಸ್ಮರಣೆ ಮಾಡು ನೀ ॥೧॥ ಶಿವನೆ ನಾನು ಎಂದು ಜಲಂಧರ ಭುವನಮಾತೆಯ ಮುಂದೆ ನಿಂದ । ಅವನ ಹೆಂಡತಿ ಮಾನ ಕೆಡಿಸಿ ಕೊಂದೆಮನ ಲೋಕವ ಹೊಂದಿದ ॥ ಧ್ರುವನ ಪಿತ ಕೈ ಬಿಡಲು ಶ್ರೀರಾಘವನ ಚರಣಗಳನ್ನು ಭಜಿಸಿ ಮಾ । ಧವನ ಕಯ್ಯಲ್ಲಿ ರುವ ಲೋಕವ ಪಡೆದು ಸುಖಿಯಾಗಿರುವುದರಿಯಾ ॥ ೨ ॥ ವಾಸುದೇವ ನಾನೆಂಬ ಪೌಂಡ್ರಕ ನಾಶವಾದನು ಮುಂದಿನಿಂದ । ರೋಷದಿಂದಲಿ ದಾಸ ರಾಗದ ಅಸುರರಿಗೆ ಅಂತಕ ॥ ಭೂಸುರಪ್ರಿಯ ವಾಸುದೇವನು ದಾಸ ದಾಸರ ಪೋಷಕಾಗಿರೆ । ಆಸೆಯಿಂದಲಿ ಭಜಿಸು ಶ್ರೀನಿವಾಸ ಪುರಂದರ ವಿಠಲನ ॥ ೩ ॥

## ೪೪೭ ರಾಗ ನಾಟಿ ತ್ರಿಪುಟತಾಳ

ಶರಣು ಭಾರತಿದೇವಿಗೆ । ಶರಣು ವಾಯುರಮಣಿಗೆ ॥ಪ॥ ಶರಣು ಶರ ಣರ ಪೊರೆವ ಕರುಣಿಗೆ । ಶರಣು ಸುರವರದೇವಿಗೆ ॥ ಅ ॥ ಸುರರು ಮೊದ ಲಾದವರಿಗೆಲ್ಲ । ಪರಮ ಮಂಗಳವೀವಳೆ ॥ ಚರಣಕಮಲಕೆ ಮರೆಯ ಹೊಕ್ಕೆನು । ಕರುಣಿಸೆನಗೆ ಸುಮಂಗಳೆ ॥ ೧ ॥ ಪಿಂಗಳರೂಪಳೆ ಮಂಗಳ ಮಹಿಮಳೆ । ಹಿಂಗದೆ ಕೊಡು ಹರಿಭಕುತಿಯ ॥ ರಂಗನಾಥ ಪದಾಬ್ಜ ಭೃಂಗಳೆ । ಅಂತರಂಗದ ಪ್ರೇಯಳೆ ॥ ೨ ॥ ಪಕ್ಷಿವಾಹನ ಲಕ್ಷ್ಮೀರಮ ಣನ । ದಕ್ಷ ಪುರಂದರವಿಠಲನ ॥ ಅಕ್ಷಯದಿಂದಲಿ ಭಜಿಸುವಳೆ । ರಕ್ಷಿಸೆ ನ್ನನು ಅನುದಿನ ॥ ೩ ॥

## ೪೪೮ ರಾಗ ನಾಟಿ

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ । ಮತಿ ಪ್ರೇರಿಸುವಳು ಪಾರ್ವತಿದೇವಿಯು ಮು । ಕುತಿಪಥಕೆ ಮನವೀವ ಮಹಾರುದ್ರದೇವ । ಭಕುತಿದಾಯಕಳು ಭಾರತಿದೇವಿ ಯು । ಕುತಿ ಶಾಸ್ತ್ರಗಳಲ್ಲಿ ವನಜಸಂಭವ ನರಸಿ । ಸತ್ಕರ್ಮಗಳ ನಡೆಸಿ ಸುಜ್ಞಾನಮತಿಯಿತ್ತು । ಗತಿ ಪಾಲಿಸುವ

ನಮ್ಮ ಪವಮಾನನು || ಚಿತ್ತದಲಿ ಆನಂದಸುಖವನೀವಳು ರಮಾ | ಭಕ್ತ ಜನರೊಡೆಯ ನಮ್ಮ ಪುರಂದರ ವಿಠ್ಠಲನು | ಸತತ ಇವರೊಳು ನಿಂತೀ ಕೃತಿಯ ನಡೆಸುವನು ||

## ೪೪೯ ರಾಗ ಶಂಕರಾಭರಣ ಅಟತಾಳ

ಬೇಡವೋ | ಬ್ರಹ್ಮದ್ರೋಹ | ಬೇಡವೋ ||ಪ|| ಹೊತ್ತಿಹೆ ನರಜನ್ಮವನ್ನು | ಪಾದ | ಸುತ್ತಿಕೊಂಡಿಹುದಲ್ಲೊ ನೀನು || ಆಹ || ಚಿತ್ತದೊಳಗೆ ನೋಡು ಉತ್ತಮ ವಿಪ್ರರ | ವೃತ್ತಿಯ ಕಳೆದು ಉನ್ಮತ್ತನಾಗಲು ಬೇಡ || ||೧|| ಸೂಸುವ ನದಿಯಲ್ಲಿ ಬಿದ್ದು | ಮುಂದೆ | ಈಸಲಾರದೆ ಮುಳುಗೆದ್ದು || ಆಹ || ಈಸೊ ಕಾಯನೆ ಬಿಟ್ಟು ಬೀಸೊ ಕಲ್ಲನೆ ಕಟ್ಟಿ | ಈಸುವ ತೆರದಿ ಈ ಭೂಸುರರಾ ದ್ರವ್ಯ || ೨ || ಇನ್ನೆಷ್ಟು ಪೇಳಲಿ ಸಾಕ್ಷಿ | ಬ್ರಾಹ್ಮ | ರನ್ನವ ತೆಗೆವನ ಶಿಕ್ಷಿ || ಆಹ || ಪನ್ನಗಶಯನ ಶ್ರೀಪುರಂದರವಿಠಲನು | ಬೆನ್ನ ಬಿಡದೆ ಬಾಹ್ಮರನ್ನು ಕಾದಿರುವನು ||೩||

## ೪೫೦ ರಾಗ ಮಧ್ಯಮಾವತಿ ಅಟತಾಳ

ಶರಣು ನಿನಗೆ ಶರಣೆಂಬೆನು ವಿಠಲ | ಕರುಣವಾರಿಧಿ ಎನ್ನ ಕಾಯೊ ವಿಠಲ ||ಪ|| ದಶರಥರಾಯನ ಉದರದಿ ವಿಠಲ || ಶಿಶುವಾಗಿ ಉದಿಸಿದ್ಯೊ ಶ್ರೀರಾಮ ವಿಠಲ | ಶಶಿಮುಖಿ ಗೋಪಿಯ್ಯ ಕಂದನೆ ವಿಠಲ| ಅಸುರೆ ಪೂತನಿಯ ಕೊಂದ್ಯೊ ಕೃಷ್ಣ ವಿಠಲ || ೧ || ಅರಸಿ ರುಕ್ಮಿಣಿಗೆ ನೀನರಸಾದ್ಯೊ ವಿಠಲ | ಪಿರಿದಾಗಿ ಶಂಖವ ಪಿಡಿದ್ಯೊ ನೀ ವಿಠಲ || ಸರಸಿಜಸಂಭವ ಸನ್ನುತ ವಿಠಲ | ನಿರತ ಇಟ್ಟಿಗೆ ಮೇಲೆ ನಿಂತ್ಯೊ ನೀ ವಿಠಲ ||೨|| ಕಂಡೆ ನಾ ನಿನ್ನ ವೆಂಕಟನೆಂಬ ವಿಠಲ | ಕುಂಡಗೋಳಕರಿಗೊಲಿದು ಬಂದ ವಿಠಲ || ಪಾಂಡುರಂಗ ಕ್ಷೇತ್ರಪಾಲನೆ ವಿಠಲ | ಪುಂಡರೀಕಾಕ್ಷ ಶ್ರೀಪುರಂದರವಿಠಲ ||೩||

## ೪೫೧ ರಾಗ ಶಂಕರಾಭರಣ ಆದಿತಾಳ

ದೃಷ್ಟಿ ನಿನ್ನ ಪಾದದಲ್ಲಿ ನೆಡೋ ಹಾಗೆ | ಧರೆ | ದುಷ್ಟಜನಸಂಗಗಳ ಬಿಡೋ ಹಾಗೆ || ಕೆಟ್ಟ ಮಾತು ಕಿವಿಯಿಂದ ಕೇಳದ್ಹಾಗೆ | ಮನ | ಕಟ್ಟ

ಸದಾ ನಿನ್ನ ಧ್ಯಾನ ಬಿಡದ್ಹಾಗೆ ||ಪ|| ದಿಟ್ಟನಾಗಿ ಕೈಯನೆತ್ತಿ ಕೊಡೋ ಹಾಗೆ ಶ್ರೀ | ಕೃಷ್ಣ ನಿನ್ನ ಪೂಜೆಯನು ಮಾಡೋ ಹಾಗೆ || ಭ್ರಷ್ಟನಾಗಿ ನಾಲ್ವರೊಳು ತಿರುಗದ್ಹಾಗೆ | ಬಲು | ಶಿಷ್ಟ ಜನಸೇವೆಯನು ಮಾಡೊ ಹಾಗೆ ||೧|| ಪುಟ್ಟಿಸಿದ ತಾಯಿತಂದೆಯಲ್ಲೊ ನೀನು | ಒಂದು | ಹೊಟ್ಟೆಗಾಗಿ ದೈನ್ಯಪಡಬೇಕೆ ನಾನು || ಪಟ್ಟೆ ಪಟ್ಟಾವಳಿ ಬೇಡಲಿಲ್ಲ ನಾನು | ಎನ್ನ | ಗುಟ್ಟು ಅಭಿಮಾನಗಳ ಕಾಯೊ ನೀನು || ೨ || ನಟ್ಟನೀರೊಳಗೆ ಈಸಲಾರೆ ನಾನು | ಎತ್ತಿ | ಕಟ್ಟೆ ಸೇರಿಸಬೇಕಯ್ಯ ನೀನು || ಬೆಟ್ಟದಂಥ ಪಾಪ ಹೊತ್ತಿರುವೆ ನಾನು | ಅದ | ಸುಟ್ಟುಬಿಡು ಪುರಂದರವಿಠಲ ನೀನು || ೩ ||

### ೪೫೨ ರಾಗ ಸಾವೇರಿ ಆದಿತಾಳ

ಪರಾಕು ಮಾಡದೆ ಪರಾಂಬರಿಸಿ ಎನ್ನ | ಅಪರಾಧಂಗಳ ಕ್ಷಮಿಸೊ || || ಪ || ಧರಾರಮಣ ಫಣಿಧರಾಧರಾರ್ಚಿತ | ಸುರಾಧಿಪತಿ ವಿಧಿ ಹರಾದಿ ವಂದಿತ ||ಅ|| ನರರೊಳಗೆ ಪಾಮರನು ನಾ ನಿಹ | ಪರಕೆ ಸಾಧನವರಿಯೆ ಶ್ರೀಹರಿಯೆ || ಶರಣು ಹೊಕ್ಕೆ ನಿನ್ನ ಚರಣಕಮಲಕ್ಕೆ | ಕರುಣದಿಂ ನಿನ್ನ ಸ್ಮರಣೆ ಎನಗಿತ್ತು || ಪರಾಕು ||೧|| ಜಪವನರಿಯೆನು ತಪವನರಿಯೆನು | ಉಪವಾಸ ವ್ರತಗಳನರಿಯೆ ಶ್ರೀಹರಿಯೆ || ಕೃಪಾವ ಲೋಕನದಿಂದ ಆ ಪಾಪಗಳನೆಲ್ಲ | ಅಪಾಹತವ ಮಾಡೊ ಅಪಾರಮಹಿಮನೆ || ಪರಾಕು ||೨|| ಕರಿಯ ರಕ್ಷಿಸಿ ದ್ರೌಪದಿಯ ಮೊರೆ ಲಾಲಿಸಿ | ತರಳಗೊಲಿದು ನೀ ಪೊರೆದೆ ದಯದೆ || ಸಿರಿಯರಸ ನಿನ್ನ ಸರಿ ಯಾರು ಕಾಣೆ | ಕರುಣಿಸಯ್ಯ ಶ್ರೀ ಪುರಂದರವಿಠಲ || ಪರಾಕು ||೩||

### ೪೫೩ ರಾಗ ಕೇದಾರಗೌಳ ಆದಿತಾಳ

ಬಗೆಬಗೆ ಆಟಗಳೆಲ್ಲಿ ಕಲಿತೆಯ್ಯ | ಜಗವ ಮೋಹಿಪನೆ ||ಪ|| ಖಗವರ ಗಮನ ಅಗಣಿತಮಹಿಮ | ಜಗದವರೊಳು ನೀ ಮಿಗಿಲಾಗೀ ಪರಿ || ಅ || ಒಬ್ಬಳ ಬಸಿರಿಂದಲಿ ಬಂದು ಮ | ತ್ತೊಬ್ಬಳ ಕೈಯಿಂದಲಿ ಬೆಳೆದು ||

ಕೊಬ್ಬಿದ ಭೂಭಾರವನಿಳುಹಲು ಇಂಥ । ತುಬ್ಬುಬ್ಬಿದಾಟಗಳೆಲ್ಲಿ ಕಲಿತೆಯ್ಯ ॥ ೧ ॥ ಮಗುವಾಗಿ ನೀ ಪೂತನಿಯ ಮೊಲೆಯುಂಡು । ನಗುತ ಆವಳ ಅಸುವನೆ ಕೊಂಡ್ಯೋ ॥ ಅಘಹರ ನೀ ಗೋಪಿಯೊಳು ಜನಿಸಿ ಇಂಥ । ಸೊಗಸಾದ ಲೀಲೆಗಳೆಲ್ಲಿ ಕಲಿತೆಯ್ಯ ॥ ೨ ॥ ಲೋಕರಂತೆ ನೀ ಮೃತ್ತಿಕೆ ಮೆದ್ದು । ತಾ ಕೋಪಿಸೆ ಜನನಿಯು ಬೇಗ ॥ ಓಕರಿಸೆನ್ನಲು ಬಾಯೊಳು ಬ್ರಹ್ಮಾಂಡ । ಲೋಕವ ತೋರಿದ್ದು ಎಲ್ಲಿ ಕಲಿತೆಯ್ಯ ॥ ೩ ॥ ಮಡುವ ಧುಮುಕಿ ಕಾಳಿಂಗನ ಪಿಡಿದು। ಹೆಡೆಯ ಮೇಲೆ ಕುಣಿದಾಡುತಿರೆ॥ ಮಡದಿಯರು ನಿನ್ನ ಬಿಡದೆ ಬೇಡಲು । ಕಡು ದಯದೋರಿದ್ದು ಎಲ್ಲಿ ಕಲಿತೆಯ್ಯ ॥೪॥ ಒಂದು ಪಾದ ಭೂಮಿಯೊಳು ವ್ಯಾಪಿಸಿ ಮು। ತ್ತೊಂದು ಪಾದ ಗಗನಕಿಡಲು ಆ ॥ ನಂದದಿ ಬಲಿಯ ಶಿರದಿ ಮೂರನೇದಿಟ್ಟು । ಬಂಧಿಸಿದಾಟಗಳೆಲ್ಲಿ ಕಲಿತೆಯ್ಯ॥೫॥ ತ್ವರೆಯಿಂದ ಭಸ್ಮಾಸುರ ವರ ಪಡೆದು। ಹರನ ಶಿರದಿ ಕರವಿಡಬರಲು ॥ ತರುಣಿರೂಪವ ತಾಳಿ ಅವನ ಹಸ್ತದ್ವಯವನ । ಮರುಳುಗೊಳಿಸಿ ಕೊಂದದ್ದೆಲ್ಲಿ ಕಲಿತೆಯ್ಯ ॥ ೬ ॥ ಜಗಕೆ ಮೂಲನೆಂದು ಗಜರಾಜ ಕರೆಯೆ । ಖಗವಾಹನ ನಾಗಿ ನೀ ಬಂದು ॥ ವಿಗಡ ನಕ್ರನ ಚಕ್ರದಿ ಸವರಿದ । ಹಗರಣ ದಾಟವನೆಲ್ಲಿ ಕಲಿತೆಯ್ಯ ॥ ೭ ॥ ವೇದಗಳರಸಿ ಕಾಣದ ದೇವನೆ । ಸಾದರದಲಿ ವಿದುರನ ಗೃಹದಿ ॥ ಮೋದದಿ ಒಕ್ಕುಡುತೆಯ ಪಾಲನೆ ಕೊಂಡು । ಹಾದಿಲಿ ಹರಿಸಿದ್ದು ಎಲ್ಲಿ ಕಲಿತೆಯ್ಯ ॥ ೮ ॥ ಡಂಭಕ ಹಿರಣ್ಯಕ ಕುಮಾರ ಪ್ರಹ್ಲಾದನ್ನ । ಹಂಬಲ ವಿಲ್ಲದೆ ಬಾಧಿಸ ಬರಲು ॥ ಸ್ತಂಭದಿ ಹರಿರೂಪದೋರಿ ಭಕ್ತನ । ಇಂಬಿಟ್ಟು ಪೊರೆದದ್ದು ಎಲ್ಲಿ ಕಲಿತೆಯ್ಯ ॥೯॥ ಚಕ್ರಧರನೆ ಜರಿತನಯನೊಳು ಕಾದಿ । ಸಿಕ್ಕದೆ ಓಡಿದನೆಂದೆನಿಸಿ ॥ ಭಕ್ತ ಭೀಮನಿಂದ ಸೀಳಿಸಿದೆಯೊ ಇಂಥ । ಠಕ್ಕು ಆಟಗಳ ಎಲ್ಲಿ ಕಲಿತೆಯ್ಯ ॥೧೦॥ ಪ್ರಾಣ ಕೊಳುವೆ ಈ ದಿನವೆಂದರ್ಜುನ । ಧೇನಿಸದಲೆ ಸೈಂಧವಗೆನಲು ॥ ಕಾಣದಂತೆ ಚಕ್ರವ ಸೂರ್ಯಗೆ ಇಟ್ಟಾ । ಬಾಣ ಹೊಡೆಸಿದನು ಎಲ್ಲಿ ಕಲಿತೆಯ್ಯ ॥೧೧॥ ಆ ಶಿರ ಆತನ ಪಿತನ ಕರದೊಳು । ಸೂಸುತ ರಕ್ತವ ಬೀಳುತಿರೆ ॥ ಸೋಸಿ ನೋಡದೆ ರುಂಡ ಬಿಸುಡ ಲವನ ಶಿರ । ಸಾಸಿರ ಮಾಡಿದಾಟವೆಲ್ಲಿ ಕಲಿತೆಯ್ಯ ॥೧೨॥ ಸರ್ಪಬಾಣ ಉರಿಯುತ ಬರಲು ಕಂ। ದರ್ಪನ ಪಿತ ನೀ ರಣದಲ್ಲಿ ॥

ಮಲಗಿಸಿ ತೊಟ್ಟಿ । ಲೊಳಗೆ ಎಡೆಮಾಡಿದಳೊಬ್ಬಳು ॥೭॥ ಅಟ್ಟವೆಂದ್ಹತ್ತಿ ಅಗಳಿಯ ಮೇಲೆ । ಇಟ್ಟಳು ಸಾದೆಂದು ಸಗಣಿಯನು ॥ ಕಟ್ಟಿ ಬಾಯಿಗೆ ಕಾಡಿಗೆ ಹಚ್ಚಿ । ಕೃಷ್ಣನ ಸ್ಮರಿಸುತ ಹೊರಗ್ಹೊರಟಳು ಸಖಿ ॥೮॥ ಮಾನಿನಿ ಒಬ್ಬ ಸಂನ್ಯಾಸಿಯ ಕಂಡು । ಧೇನಿಸಿ ಕೂಸೆಂದತ್ತ ಬರಲು ॥ ಏನು ಗಾಳಿ ಅವರಿಗೆ ಸೋಕಿತೆ ಎಂದು । ಪುರಂದರವಿಠಲ ತನ್ನೊಳು ನಗುತಿದ್ದನು॥೯॥

### ೪೫೭. ರಾಗ ಮುಖಾರಿ ಝಂಪೆತಾಳ

ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ॥ ಪ ॥ ಹಡೆದವಳ ಎದೆ ಕೊರಳ ಕೊಯ್ವಂಥ ಚೂರಿ ॥ ಅ ॥ ಮಾತುಕಲಿತರೆ ಏನು ಮಹ ಜಾಣೆಯಾದರೇನು । ಚಾತುರ್ಯವಿದ್ದರೇನು ಚೆಲುವೆಯಾದರೇನು॥ ರಾಶಿ ಹಣವಿದ್ದರೇನು ಏಸು ಪೇಳಿದರೇನು । ರೀತಿ ಕೆಟ್ಟ ಜನ್ಮ ಪೊರೆಯಬೇಕಲ್ಲ ॥೧॥ ಹೊರಗೆ ಬರಲಿಕೆ ಸಲ್ಲ ಇದಿರಾಗಿ ಇರಸಲ್ಲ । ಅಡುಗೆಗೆ ಯೋಗ್ಯಳಲ್ಲ ಹರಿಯು ತಾನೆ ಬಲ್ಲ ॥ ಮರಿಯಾದೆಗಳು ಇಲ್ಲ ಬಲು ಹಗುರ ರಾಜ್ಯಕ್ಕೆಲ್ಲ। ಸರ್ವ ರೀತಿಲಿ ಕೆಟ್ಟ ಜನ್ಮ ಪೊರೆಸಲ್ಲ ॥೨॥ ಅತ್ತೆ ತನ್ನಯ ಮಗಗೆ ಮೃತ್ಯು ಎಂತೆಂಬುವಳು। ಹುಟ್ಟಿದಾ ಮನೆಯವರು ದೂಷಿಸುವರ॥ ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು । ಅಕ್ಕ ತಂಗಿಯರಿಗೆ ದಿಕ್ಕು ಎಂಬುವರು ॥೩॥ ಉಪಕಾರ ಮಾಡಿದರೆ ಗತಿಯು ನೀನೆಂಬುವರು । ಅತಿ ಶ್ರಮವೆಂದರೂ ಆದರಿಸರು ॥ ವಿಪರೀತ ಹಣವಿದ್ದರಪಹರಿಸಿ ತಿಂಬುವರು । ಅತಿ ದೈನ್ಯದಿಂ ಬೇಡೆ ಬಾಯ ಬಡಿಸುವರು ॥೪॥ ಚಾಕರಿಯ ಮಾಡಿದರೆ ಆಚೀಚೆಲಾಡುವರು । ರಾಶಿ ಅನ್ನವನುಂಡಳೆಂದು ದೂರುವರು ॥ ಈಸು ಸೈರಿಸಿಕೊಂಡು ಏಕಾಗ್ರದಲಿ ಕುಳಿತು । ಶ್ರೀಶ ಪುರಂದರವಿಠಲನ ನೆನೆಯೆ ನಾರಿ ॥೫॥

### ೧೫೭. ರಾಗ ಸೌರಾಷ್ಟ್ರ ಝಂಪೆತಾಳ

ಸತ್ಯಂ ಜಗತಿದು ಪಂಚ ಭೇದವು । ನಿತ್ಯ ಶ್ರೀಗೋವಿಂದನ ॥ ಕೃತ್ಯ ತಿಳಿದು ತಾರತಮ್ಯದಿ । ಕೃಷ್ಣನಧಿಕೆಂದು ಸಾರಿರೈ॥ಪ॥ ಜೀವ ಈಶಗೆ ಭೇದ ಸರ್ವತ್ರ । ಜೀವ ಜೀವಕೆ ಭೇದವು ॥ ಜೀವ ಜಡಕೆ ಜಡ ಜಡಕೆ ಭೇದ ।

ಜೀವ ಜಡ ಪರಮಾತ್ಮಗೆ ॥ ೧ ॥ ಮಾನುಷೋತ್ತಮರಧಿಕ ಕ್ಷಿತಿಪರು । ಮನುಜ ದೇವ ಗಂಧರ್ವರು ॥ ಪಿತೃ ಅಜಾನಜ ಕರ್ಮಜರು । ಉಕ್ತ ಶೇಷ ಶತಸ್ಥರು ॥ ೨ ॥ ಗಣಪ ಮಿತ್ರರು ಸಪ್ತಋಷಿಗಳು । ವಹ್ನಿ ನಾರದ ವರುಣನು ॥ ಇನಜಗೆ ಸಮ ಚಂದ್ರಸೂರ್ಯರು । ಮನುಸುತೆಯು ಹೆಚ್ಚು ಪ್ರವಹನು ॥೩॥ ದಕ್ಷ ಸಮ ಅನಿರುದ್ಧ ಶಚಿ ಗುರು । ರತಿ ಸ್ವಾಯಂಭುವ ರಾರ್ವರು ॥ ಪಕ್ಷಪ್ರಾಣನಿಗಿಂತ ಕಾಮನು । ಕಿಂಚಿದಧಿಕನು ಇಂದ್ರನು ॥೪॥ ದೇವೇಂದ್ರನಿಂದಧಿಕ ಮಹರುದ್ರ । ರುದ್ರ ಸಮ ಶೇಷಗರುಡರು ॥ ಗರುಡ ಶೇಷರಿಗಧಿಕರೆನಿಪರು । ದೇವಿ ಭಾರತಿ ಸರಸ್ವತಿ ॥೫॥ ವಾಯುವಿಗೆ ಸಮರಿಲ್ಲ ಜಗದೊಳು । ವಾಯುದೇವರೆ ಬ್ರಹ್ಮರು ॥ ವಾಯುಬ್ರಹ್ಮಗೆ ಕೋಟಿ ಗುಣದಿಂದ । ಅಧಿಕ ಶಕ್ತಳು ಶ್ರೀರಮಾ ॥೬॥ ಅನಂತ ಗುಣದಿಂದ ಲಕುಮಿಗಿಂತ । ಅಧಿಕ ಪುರಂದರವಿಠಲನು ॥ ಘನ ಸಮರು ಇವಗಿಲ್ಲ ಜಗದೊಳು । ಹನುಮ ಹೃತ್ಪದ್ಮವಾಸಿಗೆ ॥ ೭ ॥

## ೪೫೮ ರಾಗ ಕಾಂಭೋಜಿ ಝಂಪೆತಾಳ

ಈಗ ಮಾಡೆಲೊ ರಾಮಧ್ಯಾನವ । ನೀ । ಮೂಕನಾಗಿರಬೇಡ ಎಲೆ ಮಾನವ ॥ ಪ ॥ ಕಾಲನ ದೂತರು ಕರೆವಾಗ । ನೀ । ಕಾಲಗೆಟ್ಟು ಕಣ್ಣ ಬಿಡುವಾಗ ॥ ನಾಲಿಗೆ ಸೆಳಕೊಂಡು ಜ್ಞಾನಗೆಟ್ಟಿರುವಾಗ । ನೀಲವರ್ಣನ ಧ್ಯಾನ ಬರುವುದೇನಯ್ಯ ॥ ೧ ॥ ಸತಿಸುತರೆಂಬ ಸಂದಣಿಯೊಳು । ನೀ । ಮತಿಭ್ರಷ್ಟನಾಗಿ ಮನದೊಳು ॥ ಸತತ ಶ್ರೀಲಕ್ಷ್ಮಿಯ ಪತಿಯನ್ನು ನೆನೆದರೆ ಸ । ದ್ಗತಿಯ ಸನ್ಮಾರ್ಗ ಪಾರಂಪದವಿ ಈವನಯ್ಯ ॥೨॥ ಯಮದೂತರು ಬಂದು ಎಳೆವಾಗ । ನೀ । ನರಳುತ್ತ ಹೊತ್ತು ಕಳೆವಾಗ ॥ ಗುರು ಪುರಂದರ ವಿಠಲನ್ನ ನಾಮವು । ಕಾಲವಾಗೋ ಸಮಯಕ್ಕೆ ಬರುವುದೇನಯ್ಯ ॥

## ೪೫೯ ರಾಗ ಆರಭಿ ಅಟತಾಳ

ಗಂಗಾದಿ ಸಕಲ ತೀರ್ಥಂಗಳಿಗಧಿಕ । ಶ್ರೀಹರಿಯ ನಾಮ ॥ ಹಿಂಗದೆ ನೆನೆವರ್ಗೆ ಮಂಗಳ ಫಲವೀವ । ಹರಿಯ ನಾಮ ॥ಪ॥ ಸ್ನಾನ ಜಪಂಗಳ

ಸಾಧಿಸದವನಿಗೆ । ಹರಿಯ ನಾಮ ॥ ಜ್ಞಾನವನರಿಯದ ಮೂಢಾತ್ಮನಿಗೆ ಇದು । ಹರಿಯ ನಾಮ ॥ ೧ ॥ ವೇದಶಾಸ್ತ್ರಂಗಳನೋದದ ಮನುಜಗೆ । ಹರಿಯ ನಾಮ ॥ ಸಾಧನಗಳ ನಾಲ್ಕು ಸಾಧಿಸದವನಿಗೆ । ಹರಿಯ ನಾಮ ॥೨॥ ಕಾಲನ ದೂತರ ತರಿದು ಬಿಸುಡುವುದು । ಹರಿಯ ನಾಮ ॥ ಲೋಲ ಶ್ರೀಪುರಂದರವಿಠಲನ ಒಲುಮೆಗೆ । ಹರಿಯ ನಾಮ ॥ ೩ ॥

## ೪೬೦ ರಾಗ ರೇಗುಪ್ತಿ ಅಟತಾಳ

ಕೆಟ್ಟಿತು ಕೆಲಸವೆಲ್ಲ । ಲೋಕದಿ ಕಾಮ । ನಟ್ಟಳಿ ಘನವಾಯಿತು ॥ ಬಟ್ಟೆ ತಪ್ಪಿ ಮುಂದೆ ಕೆಟ್ಟು ಕರ್ಮಿಯಾಗಿ । ಬಿಟ್ಟು ಮುಂದಣ ಪಥವ ॥ ಹೇ ದೇವ ॥ ಪ ॥ ಸತ್ಯ ಶೌಚಕರ್ಮವು ಧರ್ಮದ ಬಲ । ಮತ್ತೆ ಅಡಗಿ ಹೋಯಿತು ॥ ಎತ್ತ ನೋಡಲು ನೀಚವೃತ್ತಿಯು ತುಂಬಿ । ಅತ್ಯಂತ ಪ್ರಬಲವಾಯಿತು ॥ ಹೇ ದೇವ ॥೧॥ ಹೊತ್ತು ಹೊತ್ತಿಗೆ ಹಲವು ಲಂಪಟ ತನದಿ । ಚಿತ್ತ ಚಂಚಲವಾಯಿತು ॥ ಸತ್ತು ಹುಟ್ಟುವ ಸುಳಿಯಲ್ಲದೆ ಮತ್ತೊಂದು । ಗೊತ್ತು ಇಲ್ಲದೆ ಹೋಯಿತು ॥ ಹೇ ದೇವ ॥೨॥ ಪೇಳುವುದೇನಿನ್ನು ದುರ್ಜನ ಸಂಗ। ದೋಲಾಟ ಸೊಗಸಾಯಿತು ॥ ಕೀಳು ಮೇಲು ಮೇಲುಕೀಳಾಗಿ ನಡೆವುದು । ಕಾಲ ವೆಗ್ಗಳವಾಯಿತು ॥ ಹೇ ದೇವ ॥ ೩ ॥ ಆಳುವ ನೃಪರಿಗೆಲ್ಲ ಕಾಂಚನದಾಸೆ । ಮೇಲು ಮೇಲಾಯಿತಯ್ಯ ॥ ನೀಲ ಮೇಘ ಶ್ಯಾಮನೆನ್ನಾಳೆಂಬವರಿಗೆ । ಕೂಳು ಹುಟ್ಟದೆ ಹೋಯಿತು ॥ ಹೇ ದೇವ ॥ ೪ ॥ ಅರಿಷಡ್ವರ್ಗದಲಿ ಸಿಲುಕಿ ಜ್ಞಾನದ । ಅರಿವು ಇಲ್ಲದೆ ಹೋಯಿತು॥ ಕರುಣಾಳು ಸೊಬಗು ಶ್ರೀಪುರಂದರವಿಠಲನ। ಸ್ಮರಣೆಯಿಲ್ಲದೆ ಹೋಯಿತು ॥ ಹೇ ದೇವ ॥ ೫ ॥

## ೪೬೧ ರಾಗ ಧನ್ಯಾಸಿ ಅಟತಾಳ

ಮಾಯೆ ಎನ್ನ ಕಾಯವನ್ನುಪಾಯದಿಂದ ನೋಯಿಸಿ । ಬಾಯಿ ಮುಚ್ಚಿ ಕೊಲ್ಲುತಾಳೆ ಕಾಯೊ ಲಕ್ಷ್ಮಿಯರಸನೆ ।ಪ॥ ಮಾತಾಪಿತರ ವಿಕಳ ದಿಂದ ಶ್ವೇತಬಿಂದು ಬೀಳಲು । ರಕ್ತ ಕೀವು ತಾಕಿ ಮಾಂಸಚೀಲದೊಳಗೆ

ಬೆಳೆದೆ ನಾ ॥ ರಕ್ತ ಸೂಸಿ ಬಸಿರೊಳೊಂಭತ್ತು ತಿಂಗಳಿದ್ದೆ ನಾ । ಮತ್ತೆ ಭೂಮಿಯೊಳಗೆ ಜನಿಸಲಾರೆ ಲಕ್ಷ್ಮೀಯರಸನೆ ॥೧॥ ಎಲುಬು ಗಳವ ಮಾಡಿ ನರದ ಬಳ್ಳಿಯಲ್ಲಿ ಬಿಗಿಯುತ । ಒಳಗೆ ರಕ್ತಮಾಂಸದಿಂದ ಮಲವು ಮಜ್ಜ ಮೇದಾದಿ ॥ ಮಲಿನ ಚರ್ಮವನ್ನು ಹೊಂದಿಕೆಯೆಳೆದು ನಿತ್ಯ ಬೆಳೆವ ಈ । ಹೊಲೆಯ ಗೂಡಿನೊಳಗೆ ಜನಿಸಲಾರೆ ಲಕ್ಷ್ಮೀಯರಸನೆ ॥ ೨ ॥ ಎನ್ನ ಸತಿಯು ಎನ್ನ ಸುತರು ಎನ್ನ ಬಂಧುಬಳಗವು । ಇನ್ನು ಸಾಕಿ ಸಲಹು ಎಂದು ಎನ್ನ ಹರಿದು ತಿಂಬರು ॥ ತನ್ನ ಸೆಳೆದೊಯ್ಯುವಾಗ ಬೆನ್ನಾಪರ ಕಾಣೆನೋ । ಎನ್ನ ಸಲಹಬೇಕು ನೀನು ಚೆನ್ನ ಲಕ್ಷ್ಮೀಯರಸನೆ ॥ ೩ ॥ ಇರುವೆ ಮೊದಲು ಮಾಡಿ ಆನೆ ಕಡೆಯು ಮಾಡಿ ಬಸಿರಿನಲ್ಲಿ । ಮರಳಿ ಮರಳಿ ಹುಟ್ಟಿ ಹೊಂದಿ ತೊಳಲಿ ಬಳಲಿ ನಾ । ಇರುಸು ಗಾಳಿಯೊಳಗೆ ಬಿದ್ದ ತರಗೆಲೆಯ ಅಂದವಾಯ್ತು । ಮರಳಿ ಮರಳಿ ಹುಟ್ಟಿ ಹೊಂದಲಾರೆ ಲಕ್ಷ್ಮೀಯರಸನೆ ॥೪॥ ಲಕ್ಷ ಜೀವರಾಶಿ ನಿನ್ನ ಕುಕ್ಷಿಯೊಳಗಿಂಬಿಟ್ಟೆ। ಅಚ್ಯುತಾನಂತ ನನ್ನನೇಕೆ ಹೊರಗು ಮಾಡಿದೆ ॥ ಮುಚ್ಚರಿಸದೆನ್ನ ನೀನು ಕುಕ್ಷಿಯೊಳಗಿಂಬಿಟ್ಟು । ರಕ್ಷಿಸಯ್ಯ ಲಕುಮಿಯರಸ ಪುರಂದರವಿಠಲಯ್ಯ ॥೫॥

## ೪೬೨ ರಾಗ ಭೂಪಾಳಿ ಅಟತಾಳ

ಹನುಮಂತದೇವ ನಮೋ ॥ ೬ ॥ ವನಧಿಯನು ದಾಟಿ ದಾನವರ ದಂಡಿಸಿದ ॥ಅ॥ ಅಂಜನೆಯ ಗರ್ಭ ಪುಣ್ಯೋದಯನೆಂದೆನಿಪೆ। ಕಂಜಸಖ ಮಂಡಲಕೆ ಕೈದುಡುಕಿದೆ ॥ ಭುಂಜಿಸಿ ಇರಲು ಜನಂಗಳನು ನಡುಗಿಸಿದೆ । ಭಂಜರತ್ನಕ ನಿನಗೆ ಸರಿಯಾರು ಗುರುವೆ ॥ ಹನುಮಂತ ॥ ೧ ॥ ಹೇಮ ಕುಂಡಲ ಹೇಮಯಜ್ಞೋಪವೀತಧರ । ಹೇಮ ಕಟಿಸೂತ್ರ ಕೌಪೀನವನು ಧರಿಸಿ ॥ ರೋಮರೋಮಕೆ ಕೋಟಿಲಿಂಗ ಸರ್ವಾಂಗ । ರಾಮಭೃತ್ಯನು ನಿನಗೆ ಸರಿಯಾರು ಗುರುವೆ ॥ ಹನುಮಂತ ॥೨॥ ಅಕ್ಷಕುಮಾರಕನ ನಿಕ್ಷರಿಸಿ ಬಿಟ್ಟೆ ನೀ। ರಾಕ್ಷಸರೊಳಧಿಕ ರಾವಣನ ರಣದಲ್ಲಿ ॥ ವೃಕ್ಷಸ್ಥಳ ಒದೆದು ಮೂರ್ಛಿಸಿ ಬಿಸಾಟಿ ತ್ರಿಜಗ । ರಕ್ಷಕನ ಶಿಕ್ಷಕ ಶ್ರೀರಾಮದಳರಕ್ಷ॥ ಹನುಮಂತ ॥೩॥ ರಾಮಲಕ್ಷ್ಮಣರ ಕಟ್ಟಾಳಾಗಿ ನೀ ನಡೆದೆ। ಭೂಮಿಜೆಗೆ

ಮುದ್ರೆಯುಂಗುರವನಿತ್ತೆ॥ ಆ ಮಹಾಲಂಕೆನಗರವನೆಲ್ಲವನು ನೀ । ಧೂಮ ಧಾಮವ ಮಾಡಿ ಮೆರೆದೆ ಮಹಾತ್ಮ ॥ ಹನುಮಂತ ॥೪॥ ಶ್ರೀಮದಾಚಾರ್ಯರ ಪುರಪತಿಯೆಂದೆನಿಪ। ಶ್ರೀಮಹಾಲಕುಮಿ ನಾರಾಯಣ ರೂಪ ॥ ಶ್ರೀಮನೋಹರ ಪುರಂದರವಿಠಲನವಸರಾ । ಪ್ರೇಮದಾಳು ಹನುಮಂತ ಬಲವಂತ ॥ ಹನುಮಂತ ॥೫॥

## ೪೬೩ ರಾಗ ಮುಖಾರಿ ಝಂಪೆತಾಳ

ಪಾಲಿಸೆಮ್ಮ ಮುದ್ದು ಶಾರದೆ । ಎನ್ನ । ನಾಲಿಗೆಯಲಿ ನಿಲ್ಲಬಾರದೆ ॥ ॥ ಪ ॥ ಲೋಲಲೋಚನೆ ತಾಯೆ ನಿರತ ನಂಬಿದೆ ನಿನ್ನ ॥ಅ॥ ಅಕ್ಷರಕ್ಷರ ವಿವೇಕವ । ನಿನ್ನ । ಕುಕ್ಷಿಯೊಳೀರೇಳು ಲೋಕವ ॥ ಸಾಕ್ಷಾತ ರೂಪದಿಂದ ಒಲಿದು ರಕ್ಷಿಸು ತಾಯೆ ॥ ೧ ॥ ಶೃಂಗಾರಪುರ ನೆಲೆವಾಸಿನೀ । ದೇವಿ । ಸಂಗೀತ ಗಾನವಿಲಾಸಿನೀ ॥ ಮಂಗಳಗಾತ್ರಳೆ ಭಳಿರೆ ಬ್ರಹ್ಮನ ರಾಣಿ ॥೨॥ ಸರ್ವಾಲಂಕಾರ ದಯಾ ಮೂರುತಿ । ನಿನ್ನ ಚರಣವ ಸ್ತುತಿಸುವೆ ಕೀರುತಿ॥ ಗುರು ಮೂರ್ತಿ ಪುರಂದರವಿಠಲನ್ನು ಸ್ತುತಿಸುವ ॥೩॥

## ೪೬೪ ರಾಗ ನಾಟಿ ಅಟತಾಳ

ವಂದಿಸುವುದಾದಿಯಲಿ ಗಣನಾಥನ ॥ ಪ ॥ ಸಂದೇಹ ಸಲ್ಲ ಶ್ರೀಹರಿಯಾಜ್ಞೆಯಿದಕುಂಟು ॥ ಅ ॥ ಹಿಂದೆ ರಾವಣ ತಾನು ವಂದಿಸದೆ ಗಜಮುಖನ । ನಿಂದು ತಪವನು ಗೈದು ವರ ಪಡೆಯಲು ॥ ಒಂದು ನಿಮಿಷದಿ ಬಂದು ವಿಘ್ನವನು ಆಚರಿಸಿ । ತಂದ ವರಗಳನೆಲ್ಲ ಧರೆಗೆ ಇಳಿಸಿದನು ॥೧॥ ಅಂದಿನಾ ಬಗೆಯರಿತು ಬಂದು ಹರಿ ಧರ್ಮಜಗೆ । ಮುಂದೆ ಗಣಪನ ಪೂಜಿಸೆಂದು ಪೇಳೆ ॥ ಒಂದೆ ಮನದಲಿ ಬಂದು ಪೂಜಿಸಲು ಗಣನಾಥ। ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ॥ ೨ ॥ ಇಂದು ಜಗವೆಲ್ಲ ಉಮೆನಂದನನ ಪೂಜಿಸಲು । ಚೆಂದದಿಂದಲಿ ಸಕಲ ಸಿದ್ಧಿಗಳನಿತ್ತು ॥ ತಂದೆ ಸಿರಿಪುರಂದರ ವಿಠ್ಠಲನ ಸೇವೆಯೊಳು। ಬಂದ ವಿಘ್ನವ ಕಳೆದಾನಂದವನು ಕೊಡುವ ॥ ೩ ॥

### ೪೬೫ ರಾಗ ಪಂತುವರಾಳಿ ಅಟತಾಳ

ಅರಿಯರು ಮನುಜರರಿಯರು ||ಪ|| ಅರಿಯರು ಮನುಜರು ಅರಿತೂ ಅರಿಯರು। ಧರೆ ಈರೇಳಕ್ಕೆ ಹರಿಯಲ್ಲದಿಲ್ಲವೆಂದು || ಅ || ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ। ಪರಾಶರ ಬಲ್ಲ ಮನು ಬಲ್ಲನು || ಧೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು। ಕಾರಣೀಕನು ಶ್ರೀಹರಿಯಲ್ಲದಿಲ್ಲ ವೆಂದು || ೧ || ಶಿವ ಬಲ್ಲ ಧ್ರುವ ಬಲ್ಲ ದ್ರೌಪದಿ ಬಲ್ಲಳು। ಅವನಿಪಾಲಕ ಜನಕನೃಪ ಬಲ್ಲನು || ಯುವತಿಗೆ ಶಾಪವಿತ್ತ ಗೌತಮಮುನಿ ಬಲ್ಲ। ಭವರೋಗವೈದ್ಯ ಶ್ರೀಹರಿಯಲ್ಲದಿಲ್ಲವೆಂದು ||೨|| ದಿಟ್ಟ ಪ್ರಹ್ಲಾದ ಬಲ್ಲ। ಕೆಟ್ಟ ಅಜಮಿಳ ಬಲ್ಲ। ಸಿಟ್ಟಿನಿಂದಲಿ ಒದ್ದ ಭೃಗು ಬಲ್ಲನು || ಕೊಟ್ಟ ಬಲಿ ಬಲ್ಲ ಮೊರೆಯಿಟ್ಟ ಗಜೇಂದ್ರ ಬಲ್ಲ। ಸೃಷ್ಟೀಶ ಪುರಂದರವಿಠಲನೆ ಪರ ದೈವವೆಂದು || ೩ ||

### ೪೬೬ ರಾಗ ಪಂತುವರಾಳಿ ಆದಿತಾಳ

ನಿಮ್ಮ ಭಾಗ್ಯ ದೊಡ್ಡದೊ ನಮ್ಮ ಭಾಗ್ಯ ದೊಡ್ಡದೊ || ಪ || ನಮ್ಮ ತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ ||ಅ|| ಹೇಮ ಹೊನ್ನು ಹಣಗಳಿಗೆ ಹೇರಳ ಭಯಗಳುಂಟು। ರಾಮನಾಮ ದ್ರವ್ಯಕಿನ್ನು ಯಾರ ಭಯವಿಲ್ಲವಯ್ಯ ||೧|| ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು। ಅಡವಿ ತುಳಸಿಮಾಲೆಗಿನ್ನು ಆರ ಅಂಜಿಕಿಲ್ಲವಯ್ಯ || ೨ || ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವುಂಟು। ಗೋಪಾಳದ ವೃತ್ತಿಗಿನ್ನು ಗೊಡವೆ ಯಾರದಿಲ್ಲವಯ್ಯ ||೩|| ಸರಕು ಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು। ಹರಿ ನಾಮಾಮೃತಕೆ ಇನ್ನು ಯಾವ ಚಿಂತೆಯಿಲ್ಲವಯ್ಯ|| ||೪|| ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣನು। ನಮ್ಮ ನಿಮ್ಮ ಭಾಗ್ಯದೊಡೆಯ ಪುರಂದರವಿಠಲನು ||೫||

### ೪೬೭ ಶ್ರೀರಾಗ ಅಟತಾಳ

ನೀನಿರುಳೆಲ್ಲಿದ್ದೆ ಹೇಳಯ್ಯ। ಶ್ರೀನಿವಾಸ ಮೂರುತಿ ಗೋವಳರಾಯ || || ಪ || ಪಾಲಸಾಗರದಿ ಹಾವಿನ ಮೇಲೆ। ತಳಿ। ಆಲದೆಲೆಯ ಮೇಲೆ

ಯಶೋದೆಯು ॥ ತೋಳಿನ ಮೇಲೆ ಗೋಪಿಯರಲಿ । ಕ್ರತು । ಶಾಲೆಯೊಳರಸಿ ನೋಡಿದರಿಲ್ಲ ॥೧॥ ಕಡ್ಡಿವಲ್ಲಿ ತುರುವಿಂಡುಗಳಲ್ಲಿ । ಸತ್ಯ । ನುಡಿವಲ್ಲಿ ಎಣೆಗಾಣಿಸದಲ್ಲಿ ॥ ಮಡದಿ ರುಕ್ಮಿಣಿ ಜಾಂಬವತಿಯರಲ್ಲಿ । ನಿ । ನ್ನಡಿಗಡಿಗರಸಿ ನೋಡಿದರಿಲ್ಲ ॥೨॥ ಏಕಾದಶಿಯ ಜಾಗರದಲ್ಲಿ । ಪುಣ್ಯ। ಲೋಕಪಾವನ ಭಾಗವತರಲ್ಲಿ ॥ ವ್ಯಾಖ್ಯಾನ ತೆಗೆದು ನೋಡಿದರಿಲ್ಲ । ಜಗ । ದೇಕ ಪುರಂದರವಿಠಲ ॥೩॥

## ೪೬೮ ರಾಗ ಪಂತುವರಾಳಿ ಆದಿತಾಳ

ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ । ಹೆಮ್ಮೆಯಿಂ ದೇಹವ ನಂಬಬೇಡಿ ಕಾಣಿರೊ ॥ ಪ ॥ ಅಟ್ಟ ಅಡುಗೆ ಉಣಲು ಬಿಡನು । ಕೊಟ್ಟ ಸಾಲ ಕೇಳಬಿಡನು ॥ ಪೆಟ್ಟಿಗೆಯೊಳಗಿದ್ದ ಚಿನ್ನವ । ತೊಟ್ಟೆನೆಂದರೆ ಯಮನು ಬಿಡನು ॥೧॥ ಅಕ್ಕನಿಲ್ಲಿ ಕರೆಯಲಿಲ್ಲ । ಮಕ್ಕಳನ್ನು ಪಡೆಯಲಿಲ್ಲ ॥ ದುಃಖಗೊಂಡು ಕಣ್ಣೀರನು । ಉಕ್ಕಿಸಿದರೆ ಬಿಡನು ಯಮನು ॥ ೨ ॥ ಹೇಳ್ವೆನೆಂಟರಿಂಗೆ ಕರೆಮ । ಬೇಳೆ ಬೆಲ್ಲವನ್ನು ತಂದು ॥ ನಾಳೆ ಮಗನ ಮದುವೆ ಎಂದು । ತಾಳು ಎಂದರೆ ಯಮನು ಬಿಡನು ॥೩॥ ಮಾಳಿಗೆಮನೆಯಿರಲಿ । ಜಾಃಳಿಗೆ ತುಂಬ ಹೊನ್ನಿರಲಿ ॥ ಆಳು ಮಂದಿ ಶಾನೆಯಿರಲಿ । ಕಾಲನು ತಾ ಬೆನ್ನ ಬಿಡನು ॥೪॥ ಅರ್ತಿಯಿಂದ ಸಂಸಾರವ । ವ್ಯರ್ಥವಾಗಿ ನೆಚ್ಚಬೇಡಿ ॥ ಕರ್ತೃ ಪುರಂದರವಿಠಲನ್ನ । ಭಕ್ತಿಯಿಂದ ಭಜಿಸಿರೊ ॥೫॥

## ೪೬೯ ರಾಗ ಮೋಹನ ಅಟತಾಳ

ಮಂದಗಮನೆ ಇವನಾರೆ ಪೇಳಮ್ಮ। ಮಂದರಧರ ಗೋವಿಂದ ಕಾಣಮ್ಮ॥ ಕೆಂದಳಿರುನಖ ಶಶಿಬಿಂಬ ಪದಪದ್ಮ । ಅಂದುಗೆ ಇಟ್ಟವನಾರೆ ಪೇಳಮ್ಮ ॥ ಅಂದು ಕಾಳಿಂಗನ ಹೆಡೆಯ ತುಳಿದ ದಿಟ್ಟ । ನಂದನ ಕಂದ ಮುಕುಂದ ಕಾಣಮ್ಮ ॥ ೧ ॥ ಉಡುಗೆ ಪೀತಾಂಬರ ನಡುಗೆ। ಹೊನ್ನುಡುದಾರ । ಕಡಗ ಕಂಕಣವಿಟ್ಟವನಾರಮ್ಮ ॥ ಮಡದಿ ಕೇಳ್ ಸಕಲ ಲೋಕಂಗಳ ಕುಕ್ಷಿಯೊ। ಳೊಡನೆ ತೋರಿದ ಜಗದೊಡೆಯ ಕಾಣಮ್ಮ ॥೨॥ ನೀರದನೀಲದಂತೆಸೆವ

ವಕ್ಷದಿ ಕೇ। ಯೂರ ಹಾರನಿಟ್ಟವನಾರಮ್ಮ ॥ ನೀರೆ ಕೇಳು ನಿರ್ಜರ ರಾದವರಿಗೆ । ಪ್ರೀತಿಸಿ ಫಲವಿತ್ತುದಾರಿ ಕಾಣಮ್ಮ ॥೩॥ ಶಂಖ ಚಕ್ರವ ಗದೆ ಪದ್ಮ ಕೈಯೊಳಗಿಟ್ಟ ಲಂಕರಿಸುವನೀತನಾರಮ್ಮ ॥ ಪಂಕಜಮುಖಿ ಶ್ರೀ ಭೂದೇವಿಯರರಸನು । ಶಂಕೆಯಿಲ್ಲದೆ ಗೋಪಿತನಯ ಕಾಣಮ್ಮ ॥೪॥ ಕಂಬುಕಂಧರ ಕರ್ಣಾಲಂಬಿತಕುಂಡಲ । ಅಂಬುಜಮುಖದವನಾರೆ ಹೇಳಮ್ಮ ॥ ರಂಭೆ ಕೇಳೀತ ಪುರಂದರವಿಠ್ಠಲ । ನಂಬಿದ ಭಕ್ತಕುಟುಂಬಿ ಕಾಣಮ್ಮ ॥೫॥

### ೪೭೦ ರಾಗ ಧನ್ಯಾಸಿ ಆದಿತಾಳ

ಬಣ್ಣಿಸಿ ಗೋಪಿ ಹರಸಿದಳು ॥ ಪ ॥ ಎಣ್ಣೆಯನೊತ್ತುತ ಯದುಕುಲ ತಿಲಕಗೆ ॥ ಅ ॥ ಆಯುಷ್ಯವಂತನಾಗು ಅತಿ ಬಲ್ಲಿದನಾಗು । ಮಾಯದ ಖಳರ ಮರ್ದನನಾಗು ॥ ರಾಯರ ಪಾಲಿಸು ರಕ್ಕಸರ ಸೋಲಿಸು । ವಾಯು ಸುತಗೆ ನೀನೊಡೆಯನಾಗೆನುತ ॥ ೧ ॥ ಧೀರನು ನೀನಾಗು ದಯಾಂಬುಧಿ ಯಾಗು । ಆ ರುಕ್ಮಿಣಿಗೆ ನೀನರಸನಾಗು ॥ ಮಾರನ ಪಿತನಾಗು ಮಧು ಸೂದನನಾಗು । ದ್ವಾರಾವತಿಗೆ ನೀ ದೊರೆಯಾಗೆನುತ ॥ ೨ ॥ ಆನಂದ ನೀನಾಗು ಅಚ್ಯುತ ನೀನಾಗು । ದಾನವಾಂತಕನಾಗು ದಯವಾಗು ॥ ಶ್ರೀನಿವಾಸನಾಗು ಶ್ರೀನಿಧಿ ನೀನಾಗು । ಜ್ಞಾನಿ ಪುರಂದರವಿಠಲ ನಾಗೆನುತ ॥೩॥

### ೪೭೧ ರಾಗ ಶಂಕರಾಭರಣ ತ್ರಿಪುಟತಾಳ

ಎನಗೂ ಆಣೆ । ರಂಗ । ನಿನಗೂ ಆಣೆ ॥ ಪ ॥ ಎನಗೂ ನಿನಗೂ ಇಬ್ಬ ರಿಗೂ ಭಕ್ತರಾಣೆ ॥ಅ॥ ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ । ರಂಗ । ಎನ್ನ ನೀ ಕೈಬಿಟ್ಟುಪೋದರೆ ನಿನಗೆ ಆಣೆ ॥೧॥ ತನುಮನ ಧನದಲಿ ವಂಚಕ ನಾದರೆ ಎನಗೆ ಆಣೆ । ರಂಗ । ಮನಸ್ಸು ನಿನ್ನಲ್ಲಿ ನಿಲಿಸದಿದ್ದರೆ ನಿನಗೆ ಆಣೆ ॥೨॥ ಕಾಕು ಮನುಜರ ಸಂಗವ ಮಾಡಿದರೆನಗೆ ಆಣೆ । ರಂಗ । ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ॥೩॥ ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ । ರಂಗ । ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ॥೪॥ ಹರಿ ನಿನ್ನಾಶ್ರಯ

ಮಾಡದಿದ್ದರೆ ಎನಗೆ ಆಣೆ । ರಂಗ । ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ॥೫॥

### ४೭೨ ರಾಗ ಪೂರ್ವಿ ಅಟತಾಳ

ಆವ ಕುಲವು ತಿಳಿಯಲಾಗದು ॥ ಪ ॥ ಕಡಲ ಮಗಳ ಗಂಡನಂತೆ । ಅಡವಿಯೊಳಗೆ ಮಡದಿಯಂತೆ ॥ ಪೊಡವಿಗೆ ತಾನೊಡೆಯನಂತೆ । ಕೊಡೆಯ ಪಿಡಿದು ಬೇಡಿದನಂತೆ ॥ ೧ ॥ ರಕ್ಕಸರಲ್ಲಿ ಕಾಳಗವಂತೆ । ಮರ್ಕಟರೆಲ್ಲ ಬಂಟರಂತೆ ॥ ಪಕ್ಷಿಯನೇರಿ ಮೆರೆದನಂತೆ । ಮುಕ್ಕಣ್ಣೇಶ್ವರ ಮೊಮ್ಮಗನಂತೆ ॥ ೨ ॥ ವಿದ್ಯೆಯಲ್ಲಿ ಪ್ರೌಢನಂತೆ । ಯುದ್ಧದಲ್ಲಿ ಶೂರನಂತೆ ॥ ಮುದ್ದು ಪುರಂದರವಿಠಲನಂತೆ । ಬೇಲೂರ ಚೆನ್ನಿಗನಂತೆ ॥೩॥

### ४೭೩ ರಾಗ ಬೇಹಾಗ್ ಆದಿತಾಳ

ಗೋಪಿಯ ಭಾಗ್ಯವಿದು । ಶ್ರೀಪತಿ ತಾ ಶಿಶುರೂಪಿನಲ್ಲಿರುವುದು ॥ಪ॥ ಕಡು ಮುದ್ದು ರಂಗನ ತೊಡೆಯ ಮೇಲೆತ್ತುತ । ಜಡೆಯ ಹೆಣೆದು ಹೂ ಮುಡಿಸಿ ಬೇಗ ॥ ಬಿಡದೆ ಮುತ್ತಿನ ಚೆಂದರಳೆಲೆಯನು । ಸಡಗರದಿಂದಲಂಕರಿಸಿದಳು ॥೧॥ ನಿತ್ಯನಿರ್ಮಲನಿಗೆ ನೀರನೆರೆದು ತಂ । ದೆತ್ತಿ ತೊಡೆಯಳಿಟ್ಟು ಮೊಲೆಯನೂಡಿ ॥ ಮುತ್ತು ಕೊಟ್ಟು ಬಲು ವಿಧದಿಂದಾಡಿಸಿ । ಅರ್ತಿಯಿಂದಲಿ ತಾ ತೂಗಿದಳು ॥ ೨ ॥ ದೃಷ್ಟಿ ತಾಗೀತೆಂದಿಟ್ಟು ವಿಭೂತಿಯ । ತಟ್ಟೆಯೊಳಾರತಿಗಳ ಬೆಳಗಿ ॥ ಥಟ್ಟನೆ ಉಪ್ಪು ಬೇವು ನಿವಾಳಿಸಿ । ತೊಟ್ಟಿಲೊಳಿಟ್ಟು ತಾ ತೂಗಿದಳು ॥೩॥ ಎಮ್ಮಯ್ಯ ರನ್ನನೆ ಸುಮ್ಮನಿರೋ ದೊಡ್ಡ । ಗುಮ್ಮನು ಬರುವನು ಅಳಬೇಡ ॥ ಸುಮ್ಮನೆ ಇರು ನಿನಗಮ್ಮಿ ಕೊಡುವೆನೆಂದು । ಬೊಮ್ಮನ ಪಿತನ ತಾ ತೂಗಿದಳು ॥ ४ ॥ ಮಾಧವ ಜೋ ಮಧುಸೂದನ ಜೋ ಜೋ । ಯಾದವರಾಯ ಶ್ರೀರಂಗನೆ ಜೋ ॥ ಆದಿಮೂರುತಿ ನಮ್ಮ ಪುರಂದರವಿಠಲನ ಆದರದಿಂದ ತಾ ತೂಗಿದಳು ॥ ೫ ॥

### ४೭४ ರಾಗ ಆರಭಿ ಅಟತಾಳ

ಯಾವಾಗಲು ಹೇಳಬಾರದೆ ॥ವಾಸು । ದೇವನೆ ಕೈ ಬಿಡಬೇಡವೆಂದೆನುತಲಿ ॥ ಪ ॥ ಇಕ್ಕಿ ಎರೆವರಿಲ್ಲ ಇಷ್ಟ ಬಂಧುಗಳಿಲ್ಲ । ಅಕ್ಕತಂಗಿಯರಣ್ಣ

ತಮ್ಮರಿಲ್ಲ || ಒಕ್ಕಟಿಯಾಗಿ ನಾ ಬಳಲುತ್ತಲಿ ಸದಾ | ದುಃಖಪಡುವೆನೆಂದು ರಕ್ಕಸಾಂತಕನೊಳು || ೧ || ಮಡದಿ ಮಕ್ಕಳು ಇಲ್ಲ ಒಡವೆ ವಸ್ತುಗಳಿಲ್ಲ | ಪಡೆದ ತಾಯಿತಂದೆಯೊಬ್ಬರಿಲ್ಲ || ಎಡವಿ ಬೀಳುತಲಿರೆ ಎತ್ತಿಕೊಂಬುವರಿಲ್ಲ | ಒಡೆಯನೆ ಕೈ ಬಿಡಬೇಡವೆಂದೆನುತಲಿ ||೨|| ಮಾಡಿಟ್ಟ ಮನೆಯಿಲ್ಲ ಕೂಡಿಟ್ಟ ಧನವಿಲ್ಲ | ಆಡಿಸಿಕೊಳ್ಳಲು ಮಕ್ಕಳಿಲ್ಲ || ಪಾಡಿ ನಿನ್ನನು ಸ್ತುತಿ ಮಾಡುವೆನೆಂದರೆ | ಮೂಢರೊಳಗೆ ಬಲು ಮೂಢನಾಗಿಹೆನೆಂದು || ೩ || ಇಷ್ಟರ ಮೇಲೆ ಕೈ ಬಿಟ್ಟೆಯಾದರೆ ಇನ್ನು | ಶಿಷ್ಟರು ನೋಡಿ ನಗದಿಹರೆ || ಇಷ್ಟಾರ್ಥ ಕೊಡುವಂಥ ದೇವನಲ್ಲವೆಂದು | ಸೃಷ್ಟಿಯೊಳಪಕೀರ್ತಿ ತಟ್ಟದೆ ಇರದೆಂದು ||೪|| ಮೋಕ್ಷದಾಯಕ ವಿಶ್ವರೂಪ ವಿಶ್ವಾತ್ಮಕ | ಸಾಕ್ಷಿಸ್ವರೂಪ ಸರ್ವೇಶ್ವರನೆ|| ಸಾಕ್ಷಾತು ಶ್ರೀಗುರು ಪುರಂದರವಿಠಲನೆ | ರಕ್ಷಿಸಬೇಕೆಂದು ಲಕ್ಷ್ಮೀವಲ್ಲಭನೊಳು ||೫||

### ೪೭೫ ರಾಗ ಸೌರಾಷ್ಟ್ರ ಆದಿತಾಳ

ಕಲ್ಯಾಣಂ ತುಲಸಿ ಕಲ್ಯಾಣಂ | ಕಲ್ಯಾಣವೇ ನಮ್ಮ ಕೃಷ್ಣ ಶ್ರೀತುಲಸಿಗೆ | ಬಲ್ಲಿದ ಶ್ರೀವಾಸುದೇವನಿಗೆ ||ಪ|| ಅಂಗಳದೊಳಗೆಲ್ಲ ತುಲಸಿಯ ವನ ಮಾಡಿ| ಶೃಂಗಾರವ ಮಾಡಿ ಶೀಘ್ರದಿಂದ || ಕಂಗಳ ಪಾಪವ ಪರಿಹರಿಸುವ ಮುದ್ದು | ರಂಗ ಬಂದಲ್ಲಿ ತಾ ನೆಲಸಿದನು ||೧|| ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು | ತಂದ ಶ್ರೀಗಂಧಾಕ್ಷತೆಗಳಿಂದ || ಸಿಂಧುಶಯನನ ವೃಂದಾವನದಿ ಪೂಜಿಸೆ | ಕುಂದದ ಭಾಗ್ಯವ ಕೊಡುತಿಹಳು ||೨|| ಭಕ್ಷ್ಯ ಭೋಜ್ಯಂಗಳ ನೈವೇದ್ಯವನಿತ್ತು ಲಕ್ಷಬತ್ತಿಯ ದೀಪವ ಹಚ್ಚಿ || ಅ || ಧೋಕ್ಷಜ ಸಹಿತ ವೃಂದಾವನ ಪೂಜಿಸೆ | ಸಾಕ್ಷಾತ್ ಮೋಕ್ಷವ ಕೊಡುತಿಹಳು ||೩|| ಉತ್ಥಾನದ್ವಾದಶಿ ದಿವಸದಿಂದಲಿ ಕೃಷ್ಣ | ಉತ್ತಮ ತುಲಸಿಗೆ ವಿವಾಹವ || ಚಿತ್ತನಿರ್ಮಲರಾಗಿ ಮಾಡಿದವರಿಗೆ | ಉತ್ತಮಗತಿ ಈವ ಪುರಂದರವಿಠಲ ||೪||

### ೪೭೬ ರಾಗ ಪೂರ್ವಿ ಅಟತಾಳ

ಕೊಡುವುದೆಂದು ಎನ್ನ ಕೊಂಬುವುದೆಂದು ಕೈ | ಪಿಡಿವುದೆಂದು ನೀ ನೊಲಿವುದೆಂದು || ಕೊಡುಕೊಂಬೊ ಮಹದನುಗ್ರಹದವನೆಂದು ನಿ |

ನ್ನಡಿಗೆ ಸೇರಿದೆನಯ್ಯ ಬಡತನಕೌಷಧ ॥ ಕೊಡುವುದೆಂದು ॥ ಪ ॥ ಶ್ವಾನ ಸೂಕರ ಜನ್ಮ ನಾನುಂಬೆನೆನ್ನಲ್ಲಿ । ನೀನೆ ತದ್ರೂಪನಾದೆಯಲ್ಲ ॥ ಹೀನ ರೊಳ್ ನಾನತಿ ಹೀನನಾಗಿ ಅಭಿ । ಮಾನಿಯಾಗಿ ಕಾಲ ಕಳೆದೆನಲ್ಲ ॥ ವಾನರನಂಗಯ್ಯ ಮಾಣಿಕ್ಯದಂತೆನ್ನ । ಮಾನದಂತರ್ಯಾಮಿ ಸಿಕ್ಕಿದೆ ದೆಯಲ್ಲ ॥ ಏನಾದರು ನಿನ್ನೊಳು ಎನಗೆ ಮುಂದೆ । ಜ್ಞಾನ ಭಕ್ತಿ ವೈರಾಗ್ಯ ಭಾಗ್ಯವನ್ನು ॥ ೧ ॥ ಕಾಡಿನ ಮೃಗವು ಹಾಡಿದರೆ ನಂಬಿ । ಆಡುವದಲ್ಲದೆ ಓಡುವುದೆ ॥ ಗಾಡಿಪ್ಪ ಪಶುವಿನ ಬಾಲವ ಕಟ್ಟಿಸಿ । ಕೂಡೆ ಪಾಲ್ಗರೆಯಲು ದಬ್ಬುವುದೆ ॥ ಆಡುವ ಶಿಶು ತಪ್ಪು ಮಾಡಲು ಜನನಿ ಕೊಂ । ಡಾಡುವಳ ಲ್ಲದೆ ದೂಡುವಳೆ ॥ ಮೂಢಬುದ್ಧಿಯೊಳು ಕೆಟ್ಟೆನೆಂದು ಕೋಪ । ಮಾಡ ಬೇಡ ದಯ ಮಾಡಿ ನೀಡಿಷ್ಟವ ॥ ೨ ॥ ಹಣ್ಣಾದ ಹೊತ್ತು ಬಾಯ್ ಹುಣ್ಣಾದ ತೆರನಂತೆ । ನಿನ್ನ ಸೇರುವ ಯತ್ನ ಬಿಟ್ಟು ನಾನು ॥ ಹೆಣ್ಣು ಹೊನ್ನು ಮಣ್ಣಿಗಾಗಿ ನಾ ಭ್ರಮೆಗೊಂಡು । ಸುಣ್ಣ ಕಿಕ್ಕಿದ ನೀರನಂತಾ ದೆನೊ ॥ ಎನ್ನಪರಾಧ ಅನಂತ ಕ್ಷಮಿಸು ನೀ । ಮನ್ನಿಸದಿರ್ದರಾರಿಗೆ ಪೇಳ್ವೆನೊ ॥ ಓಂ ನಮೋ ಶ್ರೀ ಹರಿಯೆಂಬ ಪೂರ್ಣಜ್ಞಾನ । ವನ್ನು ಪುರಂದರವಿಠಲ ಎನ್ನಪ್ಪನೆ ॥ ೩ ॥

## ೪೭೭ ರಾಗ ಕಾಂಭೋಜಿ ಝಂಪೆತಾಳ

ಗರುವವ್ಯಾತಕೊ ನಿನಗೆ ಪಾಮರ ಮನುಜನೆ । ಧರೆಯೊಳಗೆ ಕುರು ಪತಿಗೆ ಸರಿಯೆನ್ನಬಹುದೆ ॥ಪ॥ ಬಲದಲ್ಲಿ ಹಲಧರನೆ ಛಲದಲ್ಲಿ ರಾವಣನೆ । ಕುಲದಲ್ಲಿ ವಸಿಷ್ಠ ಗೌತಮನೆ ॥ ನೆಲೆಯಲ್ಲಿ ಭೃಗುಮುನಿಯೆ ನೇಮದಲಿ ಗಾಂಗೆಯನೆ । ಒಲುಮೆಯಲಿ ವಾಲ್ಮೀಕಿ ಮುನಿಯೇನೊ ನೀನು ॥ ೧ ॥ ಹಠದಲ್ಲಿ ಪ್ರಹ್ಲಾದನೆ ದಿಟದಲ್ಲಿ ಧ್ರುವರಾಯನೆ। ಶಠರೊಳಗೆ ವಿಶ್ವಾಮಿತ್ರನೆ ನೀನು ॥ ವಿಟರೊಳು ಮನ್ಮಥನೆ ವೀರರೊಳು ಪಾರ್ಥನೇ । ಕುಟಿಲತನ ದಲ್ಲಿ ಶಕುನಿಯೇ ನೀನು ॥೨॥ ದಾನದೊಳು ಕರ್ಣನೇ ಗಾನದೊಳು ನಾರ ದನೆ । ಜ್ಞಾನದಲಿ ವ್ಯಾಸ ಶುಕಮುನಿಯೆ ನೀನು ॥ ದೀನರಕ್ಷಕ ನಮ್ಮ ಪುರಂದರವಿಠಲನ್ನ । ಧ್ಯಾನದೊಳು ಇದ್ದು ಭವ ನೀಗು ಮನುಜ ॥೩॥

## ೪೭೮ ರಾಗ ಕಾಂಭೋಜಿ ಆದಿತಾಳ

ದೀನರಕ್ಷಕನೆ ನಿನ್ನ ಧ್ಯಾನವೇನೊ ವಿಠ್ಠಲ। ಏನನಿತ್ತು ಮೆಚ್ಚಿಸುವೆನೊ ನಿನ್ನ ವಿಠ್ಠಲ॥ ಪ ॥ ಓದಿ ನಿನ್ನ ಮೆಚ್ಚಿಸುವೆನೊ ವೇದವ ಅಜಗೆ ಇತ್ತೆ। ಓದಿಸಿ ಮೆಚ್ಚಿಸುವೆನೊ ವರಶೇಷಶಯನ ನಿನ್ನ ॥೧॥ ಪಾಡಿ ನಿನ್ನ ಮೆಚ್ಚಿಸುವೆನೊ ಪವನಜನ ಸ್ವಾಮಿ ನೀನೆ। ಆಡಿಸಿ ಮೆಚ್ಚಿಸುವೆನೊ ಹರನಯ್ಯನಯ್ಯ ನಿನ್ನ॥ ೨ ॥ ಚಿನ್ನವಿಟ್ಟು ಮೆಚ್ಚಿಸುವೆನೊ ಶ್ರೀದೇವಿಯರಸನೆ। ಪೂರ್ಣಾನಂದ ಸ್ವಾಮಿ ನೀನೆ ಪುರಂದರವಿಠಲ ನಿನ್ನ ॥೩॥

## ೪೭೯ ರಾಗ ಸೌರಾಷ್ಟ್ರ ಆದಿತಾಳ

ನಿನ್ನ ಮಹಿಮೆಯನ್ನು ಪೊಗಳುವರೆ। ಎನ್ನಳವಲ್ಲ ವಿಚಿತ್ರಚರಿತ್ರ ॥ಪ॥ ಪಾಲುಗಡಲು ಮನೆಯಾಗಿರಲು ಒಂ। ದಾಲದೆಲೆಯ ಮೇಲೆ ಮಲಗುವರೆ ॥ ಮೂಲೋಕವು ನಿನ್ನ ಉದರದೊಳಿರುತಿರೆ। ಬಾಲಕನಾಗಿ ಎತ್ತಿಸಿಕೊಂಬರೆ ॥ ೧ ॥ ಸಿರಿ ನಿನ್ನ ಕೈವಶವಾಗಿರಲು ನೀ। ತಿರಿವರೆ ಬಲಿಯ ಯಾಗಕ್ಕೆ ಪೋಗಿ ॥ ಸರಸಿಜೋದ್ಭವ ನಿನ್ನ ಪೂಜೆಯ ಮಾಡಲು। ನರನ ಬಂಡಿಗೆ ಬೋವನಾಗುವರೆ ॥ ೨ ॥ ಕಮ್ಮಂಗೋಲನ ಪಿತನಾಗಿರಲು। ಗಮ್ಮನೆ ಕುಬುಜೆಗೆ ಸೋಲುವರೆ ॥ ಬೊಮ್ಮನಯ್ಯನೆ ಪರಬೊಮ್ಮನೆಂದೆನಿಸುವ। ಅಮ್ಮನ ದೇವರ ಗಂಡ ಪುರಂದರವಿಠಲ ॥೩॥

## ೪೮೦ ರಾಗ ಕಾಪಿ ಅಟತಾಳ

ಕಾಯಬೇಕೆನ್ನ ಗೋಪಾಲ। ಒಂದು। ಪಾಯವನರಿಯೆನು ಭಕುತರ ಪಾಲ ॥ಪ॥ ಹಲವು ಜನ್ಮಗಳೆತ್ತಿ ಬಂದೆ। ಮಾಯಾ। ಬಲವೆಂಬೊದರಿಯದೆ ಭವದೊಳು ನೊಂದೆ ॥ ಬಲು ಭಯವಾಯಿತು ಮುಂದೆ। ನೀನು। ಸುಲಭನೆಂದು ಕೇಳಿ ಶರಣೆಂದೆ ತಂದೆ ॥ ೧ ॥ ವಿತ್ತದೊಳಗೆ ಮನವಿಟ್ಟು। ನಿನ್ನ। ಉತ್ತಮ ನಾಮದ ಸ್ಮರಣೆಯ ಬಿಟ್ಟು ॥ ಮತ್ತನಾದೆ ಮತಿಗೆಟ್ಟು। ಇದು। ಚಿತ್ತದಲಿ ತಿಳಿದು ಬಲು ದಯವಿಟ್ಟು ॥ ೨ ॥ ಈ ರೀತಿ ಪಾಪಗಳೆಲ್ಲ। ಅನ್ಯ। ನರರೇನು ಅರಿವರು ಯಮಧರ್ಮ ಬಲ್ಲ ॥ ನರಕಕ್ಕೆ ಒಳಗಾದೆನಲ್ಲ। ಸಿರಿ। ವರ ನಾರಾಯಣ ಪುರಂದರವಿಠಲ ॥೩॥

### ೪೮೧ ರಾಗ ಶಂಕರಾಭರಣ ಆದಿತಾಳ

ಸಣ್ಣವನಿವನಾರಮ್ಮ ಪೇಳಲೆ ತಂಗಿ ॥ ಪ ॥ ಕಾಣದ ಮಾಣಿಕ್ಯವ ಕಂಡೆನು ಇಂದಿಲ್ಲಿ ॥ಅ॥ ಒಬ್ಬರ ಸುತನಲ್ಲ ಭಕ್ತವತ್ಸಲನಕ್ಕ । ಉಬ್ಬಿ ನೆನೆ ವರಲಿ ಸುತ್ತಿ ನಲಿದಾಡುವ ॥೧॥ ಭವಾದಿಗಳ ತಾತ ಭವಕೆ ತಾರಕಸ್ಸೀತ । ಧವಳಗಂಗೆಯ ಪೆತ್ತ ಶ್ರೀವತ್ಸದಿಂದೊಪ್ಪುವ ॥೨॥ ಮುದ್ದು ಸುರಿವ ಬಾಲ ಸಜ್ಜನಪರಿಪಾಲ । ಹದ್ದುವಾಹನನೆ ಅಕ್ಕ ತಂದೆ ಪುರಂದರ ವಿಠಲ ॥ ೩ ॥

### ೪೮೨ ರಾಗ ಸೌರಾಷ್ಟ್ರ ಅಟತಾಳ

ಮಂಗಳ ಮಾರಮಣಗೆ । ಮಂಗಳ ಭೂರಮಣಗೆ ॥ ಜಯ ಮಂಗಳ ನಿತ್ಯ ಶುಭ ಮಂಗಳ ॥ ಪ ॥ ಮಕುಟಕ್ಕೆ ಮಂಗಳ ಮತ್ಸ್ಯಾವತಾರಗೆ । ಮುಖಕೆ ಮಂಗಳ ಮುದ್ದು ಕೂರ್ಮನಿಗೆ ॥ ಸುಕಂಠಕ್ಕೆ ಮಂಗಳ ಸೂಕರ ರೂಪಗೆ । ನಖಕೆ ಮಂಗಳ ಮುದ್ದು ನರಸಿಂಹಗೆ ॥ ೧ ॥ ವಕ್ಷಕ್ಕೆ ಮಂಗಳ ವಟು ವಾಮನಗೆ । ಪಕ್ಷಕ್ಕೆ ಮಂಗಳ ಭಾರ್ಗವಗೆ ॥ ಕಕ್ಷಕ್ಕೆ ಮಂಗಳ ಕಾಕುತ್ಸ್ಥರಾಮಗೆ । ಕುಕ್ಷಿಗೆ ಮಂಗಳ ಶ್ರೀಕೃಷ್ಣಗೆ ॥ ೨ ॥ ಊರುಗಳಿಗೆ ಮಂಗಳ ಉತ್ತಮ ಬೌದ್ಧಗೆ । ಚರಣಕ್ಕೆ ಮಂಗಳ ಕಲ್ಕ್ಯನಿಗೆ ॥ ಪರಿಪರಿ ರೂಪಗೆ ಪರಮ ಮಂಗಳ ನಮ್ಮ । ಪುರಂದರವಿಠಲಗೆ ಶುಭ ಮಂಗಳ ॥೩॥

### ೪೮೩ ರಾಗ ಭೈರವಿ ಝಾಪುತಾಳ

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪ ॥ ಇಂದೀವರಾಕ್ಷಗೆ ಇಭ ರಾಜವರದಗೆ । ಇಂದಿರಾರಮಣ ಗೋವಿಂದ ಹರಿಗೆ ॥ ನಂದನಾ ಕಂದಗೆ ನವನೀತಚೋರಗೆ। ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ॥೧॥ ಕ್ಷೀರಾಬ್ಧಿ ವಾಸಗೆ ಕ್ಷಿತಿಜನಪಾಲಗೆ । ಮಾರನ್ನ ಪಡೆದ ಮಂಗಳಮೂರ್ತಿಗೆ ॥ ಚಾರು ಚರಣದಿಂದ ಚೆಲುವ ಗಂಗೆಯ ಪಡೆದ । ಕಾರುಣ್ಯಮೂರ್ತಿ ಕೌಸ್ತುಭ ಧಾರಗೆ ॥ ೨ ॥ ವ್ಯಾಸಾವತಾರಗೆ ವೇದ ಉದ್ಧಾರಗೆ । ವಾಸಿತಾನಂತಪದ ಸಕಲೇಶಗೆ ॥ ವಾಸುದೇವಾಮೂರ್ತಿ ಪುರಂದರವಿಠಲಗೆ। ದಾಸರಾ ಕಾಯ್ವ ರುಕ್ಮಿಣಿರಮಣಗೆ ॥ ಜಯ ಮಂಗಳಂ ನಿತ್ಯ ಶುಭ ಮಂಗಳಂ ॥೩॥

ತ। ಭಾಸುರ ರವಿಕೋಟಿ ಶ್ರೀಶ
ದಾಸರ ದಾಸ್ಯ। ಲೇಸಾಗಿ ಕೊಡು

ಟ್ಟೆ ಬೇವಿನ ಬೀಜವ ಬಿತ್ತಿ। ಜೇನು ಮಳೆಗರೆ
ದೇನಯ್ಯ। ಏನು ನೋಡಿದರೇನು ಏನು ಕೇಳಿದರೇನ
ಗಿನ ತಾಮಸ ಮಾಣದನ್ನಕ। ಕೊಳಲ ಧ್ವನಿಗೆ ಸರ್ಪ
ಗುವಂದದಿ। ಇದಕೇನು ಮದ್ದು ಶ್ರೀಪುರಂದರವಿಠಲ ॥

ಸೂಸಲಾಸೆಗೆ ಪೋಗಿ ಬಡಿಗಲ್ಲಿನೊಳು ಸಿಕ್ಕಿದ। ಮೂಷಕನ ತೆ ನಾದೆನೊ ಎಲೊ ದೇವ। ಹೇಸಿಕೆ ವಿಷಯಂಗಳಿಗೆ ಎರಗುತಿದೆ ಎನ್ನ ಮನ ಘಾಸಿಯಾದೆನೊ ಹೃಷೀಕೇಶ ನೀ ಸಲಹಯ್ಯ। ವಾಸವಾರ್ಚಿತ ಗುರು ಪುರಂದರವಿಠಲ ನಿನ್ನ ದಾಸರ ಸಂಗದೊಳು ಇರಿಸೆನ್ನ ಅನವರತ ಕ್ಲೇಶ ಕಳೆಯಯ್ಯ

ಹರಿಗುರುಗಳಿಗೆರಗದೆ ಹರಿಭಕ್ತಿ ಒದಗುವುದೆ। ಕೆರವ ತಿಂಬೊ ನಾಯಿಗೆ ತುಪ್ಪವಾಗ ಸೊಗಸುವುದೆ। ಹರಿನಾಮಕೆ ಹರಿದಾಸರು ಕರಗುವರಲ್ಲದೆ। ನರಕಭಾಜನರು ಪಾಮರರು ಕರಗುವರೆ। ಚಂದ್ರಕಿರಣಕೆ ಚಂದ್ರಕಾಂತಿ ಒಸರುವುದಲ್ಲದೆ। ಗೋರಿಕಲ್ಲು ಒಸರುವುದೆ ಸಿರಿಪುರಂದರವಿಠಲ ॥

ಮರವಿದ್ದರೇನಯ್ಯ ನೆರಳಿಲ್ಲದನಕ। ನೆರಳಿದ್ದರೇನಯ್ಯ ನೀರಿಲ್ಲದನಕ। ನೀರಿದ್ದು ಫಲವೇನು ಒರತಿಲ್ಲದನಕ ॥ ಧನವಿದ್ದು ಫಲವೇನು ಕೊಡುವ ಮನವಿಲ್ಲದನಕ। ಮನವಿದ್ದರೆ ಫಲವೇನು ಜ್ಞಾನವಿಲ್ಲದನಕ। ದೇವ ಪುರಂದರ ವಿಠಲರಾಯನ। ಊಳಿಗ ಮಾಡದವನ ಬಾಳುವೆಯೇತಕೆ ॥

ಎನ್ನ ಕಡೆಹಾಯಿಸುವುದು
ಎನ್ನ ವ್ಯಾಪಾರ। ಎನ್ನ ಸತಿಸುತರಿ..
ಎನ್ನ ನೀತಿ। ಎನ್ನ ಪಡಿಯಿಕ್ಕಿ ಸಲಹುವು..
ಗುವುದು ಎನ್ನ ಕರ್ಮ। ಎನ್ನ ತಪ್ಪುಗಳನೆಣಿಸಿ
ಮರೆತು ಬದುಕುವುದು ಎನ್ನದಲ್ಲ। ನೀದೆನಲ್ಲ ಇನ್ನ
ಪುರಂದರವಿಠಲ

●

ಹೊಲೆಯ ಬಂದಾನೆಂದು ಒಳಗೆ ದೇವರ ಮಾಡಿ। ಘಣ ಘಣ ಬಾರಿಸುತ। ತನುವಿನ ಕೋಪ ಹೊಲೆಯಲ್ಲವೇನಯ್ಯ। ಮನಸಿನ ವಂಚನೆ ಹೊಲೆಯಲ್ಲವೇನಯ್ಯ। ಇಂಥಾ ಹೊರಗಿದ್ದ ಹೊಲೆಯನ್ನ ಒಳಗೆ ತುಂಬಿಟ್ಟುಕೊಂಡು। ಇದಕೇನು ಮದ್ದು ಶ್ರೀಪುರಂದರವಿಠಲ ॥

●

ಯಾರು ಮುನಿದು ನಮಗೇನು ಮಾಡುವರಯ್ಯ। ಯಾರು ಒಲಿದು ನಮಗೇನು ಕೊಡುವರಯ್ಯ। ಕೊಡಬೇಡ ನಮ್ಮ ಕುನ್ನಿಗೆ ಕಾಸನು। ಈಯಲುಬೇಡ ನಮ್ಮ ಶುನಕಗೆ ತಳಗಿಯ। ಆನೆಮೇಲೆ ಪೋಪನ ಶ್ವಾನ ಮುಟ್ಟಬಲ್ಲುದೆ। ನಮಗೆ ಶ್ರೀಪುರಂದರವಿಠಲಾನೆ ಸಾಕು ॥

●

ಬಿಡು ಮನುಜ ಈ ಜಪವು ಸಿದ್ಧಿ ಬಾರದು। ತೊಡೆ ಕೆಳಗೆ ಕೈ ಹಿಂದೆ ಮುಂದೆ ಕೈಚಾಚಿಬಿಡುತ ಮಂತ್ರಾರ್ಥ ನೋಡದಲೆ। ಅಡಿಗಡಿಗೆ ಜಪವ ಮಾಡೆ ದೈತ್ಯರಿಗೆ ಅಹುದಯ್ಯ। ಒಡೆಯ ಪುರಂದರವಿಠಲನೊಲಿಸಬೇಕಾದರೆ। ಹಿಡಿಯೊ ಈಪರಿ ತಿಳಿದ ವಚನತತ್ತ್ವಗಳ॥

●

ಮಲಗಿ ಪಾಡಿದರೆ ಕುಳಿತು ಕೇಳುವನು। ಕುಳಿತು ಪಾಡಿದರೆ ನಿಂತು ಕೇಳುವನು। ನಿಂತು ಪಾಡಿದರೆ ನಲಿದು ಕೇಳುವನು। ನಲಿದು ಪಾಡಿದರೆ ಸ್ವರ್ಗ ಸೂರೆಬಿಟ್ಟೆನೆಂಬ ಪುರಂದರವಿಠಲ ॥